# ವೀರೇಂದ್ರಸಿಂಪಿ ಅವರ ಆಯ್ದ ಲಲಿತಪ್ರಬಂಧಗಳು ಒಂದು ವಿವೇಚನೆ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)





ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೦

# ವೀರೇಂದ್ರಸಿಂಪಿ ಅವರ ಆಯ್ದ ಲಲಿತಪ್ರಬಂಧಗಳು ಒಂದು ವಿವೇಚನೆ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು

ತಳವಾರ ವಿಠಲ್

ಮಾರ್ಗದರ್ಶಕರು

ಡಾ. ಎಸ್.ಆರ್. ಚನ್ನವೀರಪ್ಪ





ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೯ – ೨೦೧೦

## ಪರಿವಿಡಿ

೧

# ಅಧ್ಯಯನದ ಉದ್ದೇಶ ಹಾಗೂ ಸ್ವರೂಪ ವ್ಯಾಪ್ತಿ

ನವೋದಯ ಕಾಲದಲ್ಲಿ ಕಾಣಿಸಿಕೊಂಡ ಸಾಹಿತ್ಯ ಪ್ರಕಾರಗಳಲ್ಲಿ 'ಲಲಿತ ಪ್ರಬಂಧ ಸಾಹಿತ್ಯವು' ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ರೂಪಗೊಂಡದ್ದಾಗಿದೆ. ಈ ಸಾಹಿತ್ಯವನ್ನು ಮೊಟ್ಟ ಮೊದಲು ಪ್ರಪಂಚಕ್ಕೆ ಪರಿಚಯಿಸಿದವನು 'ಮೈಕಲ್ ಮೊಂಟೇನ್' ಎಂಬ ಫ್ರೆಂಚ್ ಲೇಖಕ. ಈತನ ಕಾಲ (೧೫೩೩-೧೫೭೨) ೧೬ನೇ ಶತಮಾನದಲ್ಲೇ ಇಂಥದೊಂದು ಸಾಹಿತ್ಯ ರೂಪವನ್ನು ಮೊದಲಬಾರಿಗೆ ಸೃಷ್ಟಿ ಮಾಡಿದ ಕೀರ್ತಿ ಈತನಿಗೆ ಸಲ್ಲುತ್ತದೆ. ಈತನು ೧೫೮೦ರಲ್ಲಿ ಎರಡು ಸಂಕಲನಗಳನ್ನು "ಎಸ್ಸೆಯ್ಸ್" ಎಂಬ ಹೆಸರಿನಲ್ಲಿ ಪ್ರಕಟಿಸಿದ. (೧೬೦೩) ನಂತರ ಇಂಗ್ಲೀಷ್‌ಗೆ ಅನುವಾದಗೊಂಡ ಈತನ ಪ್ರಬಂಧ ಮುಂದೆ ಇದೇ ಮಾದರಿಯಲ್ಲಿ ಇಂಗ್ಲೆಂಡಿನಲ್ಲಿ ಹುಲುಸಾಗಿ ಬೆಳೆದು ಬಂದಿತು. ನವೋದಯ ಸಾಹಿತ್ಯ ಸಂದರ್ಭದಲ್ಲಿ ಪಶ್ಚಿಮದ ಪ್ರೇರಣೆಯಿಂದ ರೂಪಗೊಂಡ ಹಲವು ಸಾಹಿತ್ಯ ಪ್ರಕಾರಗಳಲ್ಲಿ 'ಲಲಿತ ಪ್ರಬಂಧ'ವೂ ಒಂದು. ಪಶ್ಚಿಮದ ಅದರಲ್ಲೂ ಇಂಗ್ಲೀಷ್ ಸಾಹಿತ್ಯದ ಬರಹಗಾರರು ರೂಪಿಸಿದ "Essay" "ಎಸ್ಸೇ" ಎಂಬ ಪ್ರಕಾರಕ್ಕೆ ಸಂವಾದಿಯಾಗಿ ನಮ್ಮಲ್ಲಿ ಈ ಪ್ರಕಾರವನ್ನು "ಲಲಿತ ಪ್ರಬಂಧ" ಎಂದು ಕರೆಯಲಾಗಿದೆ.

ಲಲಿತ ಪ್ರಬಂಧ ನಮ್ಮ ನೆಲದಲ್ಲಿ ಹೊಸ ಸತ್ವವನ್ನು ಪಡೆದುಕೊಂಡು ಬೆಳೆಯಿತು. ಅಂದ ಹಾಗೆ ಇದಕ್ಕೂ ಮುಂಚೆ ಕನ್ನಡ ಸಾಹಿತ್ಯದಲ್ಲಿ ಪ್ರಬಂಧ ಪ್ರಕಾರ ಇರಲಿಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಮೂಡುತ್ತದೆ. ಕನ್ನಡದಲ್ಲಿ ಈ ಪ್ರಕಾರ ಇರಲಿಲ್ಲವೆಂದಲ್ಲಾ, ಇತ್ತು. ಆದರೆ ಪಾಶ್ಚಾತ್ಯರ 'ಲಲಿತ ಪ್ರಬಂಧ' ಸಾಹಿತ್ಯಕ್ಕಿದ್ದ ಲಕ್ಷಣಗಳು ಕನ್ನಡ ಪ್ರಬಂಧಗಳಲ್ಲಿ ಇರಲಿಲ್ಲವಷ್ಟೇ. ಗಳಗನಾಥರ ಕಾದಂಬರಿಗಳಲ್ಲಿ ಗುಲ್ವಾಡಿಯವರ 'ಇಂದಿರಾಬಾಯಿ'ಯಲ್ಲಿ ಕನ್ನಡ ಲಲಿತ ಪ್ರಬಂಧದ ಲಕ್ಷಣಗಳು ಕಂಡುಬರುತ್ತದೆ.

ಇಂಗ್ಲೀಷನ "Essay"ಗೆ ನೇರವಾದ ಕನ್ನಡ ಅನುವಾದ 'ಪ್ರಬಂಧ' ಎನ್ನುವುದು. ಮೊದಮೊದಲು ಪ್ರಬಂಧ ಸಾಹಿತ್ಯವೆಂದು ಬರೆಯಲಾಗುತ್ತಿದ್ದ ಇದನ್ನು "ಲಲಿತ ಪ್ರಬಂಧ" ಎಂದು ಕರೆಯತೊಡಗಿದ್ದು

ಬಹುಶಃ ಅನಂತರ ಎಂದು ತೋರುತ್ತದೆ. ಕನ್ನಡದ ಕಿರುಗಾತ್ರದ ಬರಹಕ್ಕೆ ಪ್ರಬಂಧ ಎಂದು ಕರೆವುದು ಕೊಂಚ ಅಸಂಗತವಾಗಬಹುದೆಂಬ ಕಾರಣದಿಂದ ಈ ಬರಹಕ್ಕೆ ಲಲಿತ ಪ್ರಬಂಧ ಎಂದು ಕರೆದಂತೆ ಕಾಣುತ್ತದೆ. 'ಪ್ರಬಂಧ 'ಇದು ಸಂಸ್ಕೃತ ಪದ. 'ಪ್ರಬಂಧ'ವೆಂದರೆ 'ಚೆನ್ನಾಗಿ ಕಟ್ಟಿದ್ದು' ಎಂದರ್ಥ. ಇದನ್ನು 'ವಿಷಯಗಳ ಬಂದ', 'ಒಳ್ಳೆಯ ರಚನೆ' ಎಂದೂ, ಇದು ತಿಳಿಸುತ್ತದೆ. 'ಅನುಚಿತಾರ್ಥ ಸಂಬಂಧ ಪರಿಮಿತಿಯ ಹೊಂದಿಕೆಯೂ ಕೆಡದಂತೆ ವಿಷಯಗಳನ್ನು ಮಂಡಿಸುವುದೇ ಪ್ರಬಂಧ', ಇದನ್ನು ಚಿಕ್ಕದಾದ ಬರವಣಿಗೆ ಎಂತಲೂ ಕರೆಯುತ್ತಾರೆ. ಇದರಲ್ಲಿ ಎರಡು ವಿಧಗಳನ್ನು ಕಾಣುತ್ತೇವೆ. ೧. ನಿಬಂಧ, ೨. ಹರಟೆ. 'ನಿಬಂಧ'ವೆಂದರೆ 'ಮಾಹಿತಿ, ವಿಮರ್ಶೆ ವಿಚಾರ, ಪ್ರಚಾರಕ್ಕಾಗಿ ಬರೆದ ಗದ್ಯಲೇಖ' ಎಂದು ಹೇಳುತ್ತಾರೆ. 'ಹರಟೆ' ಎಂದರೆ 'ಹಾಸ್ಯ ಪ್ರಧಾನವಾದ ಪ್ರಬಂಧವೆಂದೇ' ಸೂಚಿತವಾಗುತ್ತದೆ. 'ಹರಟೆ'ಯಲ್ಲಿ ಚೇಷ್ಟೆ ಬೆರೆತಿರುತ್ತದೆ. ಇದು ಬಹುಮಟ್ಟಿಗೆ ಗದ್ಯರಚನೆಗಳು, ಹರಟೆಯಲ್ಲಿ ಮಾತುಗಾರಿಕೆ ವಾಚಾಳತ್ವದ ಮಟ್ಟವನ್ನು ಮುಟ್ಟಿದರೆ, ಪ್ರಬಂಧದಲ್ಲಿ ವಾಗ್ಮಿಯತೆಯ ಸೀಮೆಯಲ್ಲಿ ನಿಲ್ಲುತ್ತದೆ. 'ಹರಟೆ'ಯನ್ನು 'ಯೌವ್ವನದಿಂದ ತುಂಬಿ ತುಳುಕುವ ಮುಗ್ದೆಯ ಕಣ್ಣಿಗೆ' ಎಂದು ಎ.ಎನ್.ಮೂರ್ತಿರಾಯರು ಹೋಲಿಸಿದ್ದಾರೆ.

'ಲಲಿತ' ಎಂಬ ಮಾತು ಈ ಪ್ರಬಂಧ ರಚನೆಯೊಳಗಿನ 'ಮನಸ್ಸಿನ ಲಹರಿ'ಯ ಲಕ್ಷಣವೂ ಆಗಿದೆ. ಅತ್ಯಂತ ಲವಲವಿಕೆಯ ಹಾಗೂ ರಂಜನೀಯವಾಗಿ ಯಾವುದೇ ವಿಷಯಕ್ಕೆ ಸ್ಪಂದಿಸುತ್ತಾ ವಿವಿಧ ಸ್ತರಗಳಿಗೆ ಸಾಂದರ್ಭಿಕ ಕತೆಗಳಿಗೆ ಒತ್ತುಕೊಡುತ್ತಾ ನಿಕೃಷ್ಟತೆ, ವ್ಯಂಗ್ಯ, ಕಚಗುಳಿಯ ಹಾಸ್ಯದೊಂದಿಗೆ ಭಾವಲಹರಿ ಹರಿಸುತ್ತಾ, ವ್ಯಕ್ತಿ, ಸಮಾಜಕ್ಕೆ ತನ್ನ ಅಂತರ್ಯದಿಂದ ಬಿಚ್ಚಿಕೊಳ್ಳುವ ಪರಿಯಾಗಿ ಪ್ರಬಂಧ ಹುಟ್ಟುತ್ತದೆ. ಹೀಗಾಗಿ ಪ್ರಬಂಧವು ಗದ್ಯಕಾವ್ಯದ ಪ್ರಕಾರವಾಗಿದೆ. ಇಲ್ಲಿ ವಿಷಯ ಸಣ್ಣದಿರಲಿ, ದೊಡ್ಡದಿರಲಿ, ಗಂಭೀರ ವಿಚಾರ, ಕಲ್ಪನೆ, ಹಾಸ್ಯ, ಭಾವಾವೇಶ, ಸಣ್ಣಕಥನ, ಶಬ್ದಚಿತ್ರ, ಆತ್ಮಕಥನ, ಹರಟೆ, ಏನೇ ಇದ್ದರೂ ಆಕರ್ಷಣೆಯಿಂದ ಕೂಡಿರುವುದರ ಜೊತೆಗೆ ಹಾಗೆಯೇ ಅದು ಸಮಾಜಮುಖಿ ಯಾಗಿರಬೇಕು.

ನವೋದಯ ಕಾಲದ ಪ್ರಮುಖ ಬರಹಗಾರರಾದ ಗೊರೂರು, ಪುತಿನ, ಲಾಂಗೂಲಾಚಾರ್ಯ, ಕುವೆಂಪು, ಬೇಂದ್ರೆ, ಸತ್ಯನಾರಾಯಣ ಮುಂತಾದವರು ಪ್ರಬಂಧ ಸಾಹಿತ್ಯವನ್ನು ಸಮೃದ್ಧಗೊಳಿಸಿದರು. ಎ.ಎನ್ .ಮೂರ್ತಿರಾಯರು ಪ್ರಬಂಧ ಪ್ರಕಾರವನ್ನೇ ಜೀವನದ ಶೋಧನೆಯ ಮಾರ್ಗವಾಗಿ ಆರಿಸಿಕೊಂಡರು. ಆನಂತರದ ನವೋದಯದವರು ತಮ್ಮ ಆವೇಶ, ಅಬ್ಬರಗಳಿಂದ ನವೋದಯ ಸಾಹಿತ್ಯ ಪ್ರಕಾರ ಪ್ರಯೋಗ ನಡೆಸಿದ್ದು ಹಲವಾರು ಗದ್ಯ-ಪದ್ಯ ಪ್ರಕಾರಗಳು ಇದ್ದಕ್ಕಿದ್ದಂತೆ ಇಲ್ಲವಾದವು. ಆಗ ಭಾವಗೀತೆಯಂತೇ ಲಲಿತ ಪ್ರಬಂಧ ಪ್ರಕಾರವು ಕೂಡ ಸೊರಗಿತು. ಇದರ ಸೊರಗುವಿಕೆಗೆ ವಿಮರ್ಶೆ ನಿರ್ಲಕ್ಷ್ಯತನವಲ್ಲದೇ ಪ್ರಬಂಧ ಹರಟೆಯ ಮಟ್ಟಕ್ಕೆ ಇಳಿದಿದ್ದು ಮುಖ್ಯ ಕಾರಣವಾಯಿತು. ನವ್ಯೋತ್ತರ ಸಾಹಿತ್ಯ ಹೆಚ್ಚು ಸಮಾಜಮುಖಿಯಾಗುವ ನಿಟ್ಟಿನಲ್ಲಿ ನಿರ್ಲಕ್ಷಿಸಲ್ಪಟ್ಟ ಅನೇಕ ಸಾಹಿತ್ಯ ಪ್ರಕಾರಗಳಿಗೆ

ಚಾಲನೆ ನೀಡಿದರು. ಇದರಿಂದ ಪ್ರಬಂಧ ಸಾಹಿತ್ಯ ಮರುಚೇತನವನ್ನು ಪಡೆಯಿತು. ಹೀಗೆ ಮೂಲೆ ಗುಂಪಾಗಿದ್ದ ಪ್ರಬಂಧ ಸಾಹಿತ್ಯ ಹೊಸ ಲೇಖಕರ ಮೂಲಕ ಪ್ರವರ್ಧಮಾನಕ್ಕೆ ಬಂದಿತು. ಅಂತಹ ಹೊಸ ತಲೆಮಾರಿನ ಲೇಖಕರಲ್ಲಿ ವೀರೇಂದ್ರ ಸಿಂಪಿಯವರು ಒಬ್ಬರು. ಇವರು ಇಲ್ಲಿಯವರೆಗೂ ಒಟ್ಟು ೫೦ಕ್ಕೂ ಹೆಚ್ಚು ಲಲಿತ ಪ್ರಬಂಧಗಳನ್ನು ಬರೆದು ೬ ಸಂಕಲನಗಳಲ್ಲಿ ಪ್ರಕಟಿಸಿದ್ದಾರೆ. ಇವರ ಕೆಲವು 'ಆಯ್ದ ಲಲಿತ ಪ್ರಬಂಧಗಳ ಕುರಿತಾದ ವಸ್ತು ಆಶಯ ಭಾಷೆ, ಶೈಲಿ ಸ್ವರೂಪದ ವಿವೇಚನೆಯನ್ನು ಈ ಅಧ್ಯಯನದ ಮೂಲಕ ಗುರುತಿಸುವ ಪ್ರಯತ್ನ ಮಾಡಲಾಗಿದೆ.

## ಅಧ್ಯಯನದ ಉದ್ದೇಶ

ಆಧುನಿಕ ಕನ್ನಡ ಸಾಹಿತ್ಯವು ಇಂದು ಒಂದು ಬೃಹದ್ಮರವಾಗಿ ಬೆಳೆದುನಿಂತಿದೆ. ಒಂದೊಂದು ಸಾಹಿತ್ಯ ಪ್ರಕಾರವೂ ತನ್ನದೇ ಆದ ಬೆಳವಣಿಗೆಯನ್ನು ದಾಖಲಿಸಿದೆ. ಈ ಸಾಹಿತ್ಯದಲ್ಲಿ ಪಾಶ್ಚಾತ್ಯರ ಪ್ರಭಾವದಿಂದ ಸಣ್ಣಕಥೆ, ಕಾದಂಬರಿ, ನಾಟಕ, ಕಾವ್ಯ, ಪ್ರಬಂಧ, ವಿಮರ್ಶೆ, ಮಕ್ಕಳ ಸಾಹಿತ್ಯ, ಅನುವಾದ ಮುಂತಾದ ಪ್ರಕಾರಗಳು ಭರದಿಂದ ಸಾಗಲು ಆರಂಭವಾಯಿತು. ಈ ಸಂದರ್ಭದಲ್ಲಿ ಕಾವ್ಯ ಪ್ರಕಾರವು ಪ್ರಭಾವಪೂರ್ಣವಾಗಿ ಹೊರಹೊಮ್ಮಿ ಬಹುಜನರನ್ನು ಆಕರ್ಷಿಸಿತು. ನಾಡುನುಡಿ, ದೇಶಪ್ರೇಮ ಸ್ವತಂತ್ರ, ಸಮಾನತೆ, ನಿಸರ್ಗ ವರ್ಣನೆ, ಪ್ರೀತಿಪ್ರೇಮ, ಸೌಹಾರ್ದತೆ, ಮುಂತಾದ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತಾ ಕನ್ನಡ ಸಾಹಿತ್ಯವನ್ನು ಉತ್ತುಂಗ ಶಿಖರಕ್ಕೇರಿಸಿತು.

ಲಲಿತ ಪ್ರಬಂಧ ಹೊಸಗನ್ನಡ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರ. ಕತೆ, ಕಾದಂಬರಿ, ರೂಪುಗೊಂಡಂತೆ, ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯಿಂದಲೇ ನಮ್ಮ ಗದ್ಯಸಾಹಿತ್ಯದಲ್ಲಿ ಆಕಾರಗೊಂಡ ಪ್ರಕಾರವಿದು. ಅತ್ಯಂತ ಲವಲವಿಕೆಯ ಹಾಗೂ ರಂಜನೀಯವಾದ ಈ ಪ್ರಕಾರ ನವೋದಯದ ಮಹತ್ವದ ಲೇಖಕರಿಂದ ಅರ್ಥಪೂರ್ಣವಾಗಿಯೇ ಬೆಳೆದುಬಂದಿತು. ಕುವೆಂಪು, ಬೇಂದ್ರೆ, ವಿ.ಸೀ. ಮೊದಲಾದ ಕವಿಗಳು. ನಾ ಕಸ್ತೂರಿ, ಶ್ರೀರಂಗ, ಎ.ಎನ್.ಮೂರ್ತಿರಾವ್, ಕಾರಂತರಂತ ವಿಚಾರವಾದಿಗಳು ಹಾಗೂ ವಿನೋದಪ್ರೀಯರು ಈ ಕಡೆ ತಮ್ಮ ಗಮನಹರಿಸಿದ್ದರಿಂದ 'ಲಲಿತಪ್ರಬಂಧ'ವು ಇಂಗ್ಲೀಷ್ ಪ್ರಬಂಧಕಾರರನ್ನು ಮೀರಿಸುವಂತೆ ಕನ್ನಡದ ನೆಲದಲ್ಲಿ ಫಲಿಸಿದ್ದು ಉಲ್ಲೇಖನೀಯ. ಸುಮಾರು ಎಂಟು ದಶಕಗಳ ಇತಿಹಾಸ ಹೊಂದಿದ ಈ ಪ್ರಕಾರ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಹೀಗೆ ವಿವಿಧ ಘಟ್ಟಗಳಲ್ಲಿ ತನ್ನದೇ ಆದ ಭಾವಸ್ಪಂದನಗಳನ್ನು, ವೈಚಾರಿಕ ವಿಡಂಬನೆಗಳನ್ನು ಪ್ರಕಟಿಸಿದೆ. ಅದು ಭಾವಗೀತೆಯ ಸೊಗಸನ್ನು ಸಣ್ಣಕತೆಯ ರಂಜನೆಯನ್ನು ಒಳಗೊಂಡು, ನವಿರಾದ ಹಾಸ್ಯದೊಂದಿಗೆ ಅಗತ್ಯವಿದ್ದಾಗ ಚುರುಕಾದ ವಿಡಂಬನೆಯೊಂದಿಗೆ ಬದುಕಿನ ಹಲವು ಮಗ್ಗಲುಗಳನ್ನು ಚಿತ್ರಿಸಿದ್ದು ಮಹತ್ವದ ಮಾತಾಗಿದೆ. ಅದಕ್ಕಾಗಿಯೇ ಹೊಸಗನ್ನಡ ಸಾಹಿತ್ಯದ ಸಾಧನೆಯಲ್ಲಿ ಲಲಿತ ಪ್ರಬಂಧದ ಬೆಳವಣಿಗೆಯನ್ನೂ ಮರೆಯುವಂತಿಲ್ಲ.

ಕನ್ನಡದಲ್ಲಿ ಲಲಿತ ಪ್ರಬಂಧದ ಬೆಳವಣಿಗೆ ಸಾಕಷ್ಟು ಆಗಿದ್ದರೂ, ಅದು ಇಂಗ್ಲೀಷ್ ಪ್ರಬಂಧಕ್ಕೆ ಸರಿಸಾಟಿಯಾಗಿ ಬೆಳೆದಿಲ್ಲ. ಹಾಗೆ, ಉತ್ಸಾಹ, ಪರಿಶುದ್ಧ ನಗೆಯಿಂದ ಕೂಡಿದ ಲಲಿತ ಪ್ರಬಂಧ ಸಾಹಿತ್ಯ ಇನ್ನೂ ಹೆಚ್ಚಾಗಿ ಹುಟ್ಟಿಬರಬೇಕು. ಕ್ಷೋಭೆ, ವಿಷಮತೆ, ಮತ್ಸರಗಳಿಂದ ಕೂಡಿದ ಇಂದಿನ ಜನ ಜೀವನಕ್ಕೆ ಲಲಿತ ಪ್ರಬಂಧಗಳು ತಂಪನ್ನೆರೆಯಬಲ್ಲವು. ಹಾಗೆ ದಣಿದ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವ, ಅನ್ಯಾಯ, ದುರಾಚಾರಗಳನ್ನು ಕಂಡಾಗ ಉಂಟಾಗುವ ಸಾತ್ವಿಕ ಕೋಪವನ್ನು ವ್ಯಂಗ್ಯದ ಮೂಲಕವಾ.ಗಿ ಹೊರಗೆಡಹುವ ವೀರೇಂದ್ರ ಸಿಂಪಿಯಂತಹ ಲೇಖಕರು ಇಂದಿನ ಯುಗಕ್ಕೆ ಅತ್ಯವಶ್ಯಕ.

ಲಲಿತ ಪ್ರಬಂಧಕಾರರ ಲೇಖನಿಯು ಸಮಾಜದ ವಿವಿಧ ಪಾರ್ಶ್ವಗಳನ್ನು ಸ್ಪರ್ಶಿಸುತ್ತದೆ. ಇದರ ತುದಿಯಲ್ಲಿ ನಗೆ-ನೋವುಗಳು ಅರಳುತ್ತಲೇ ಲೇಖಕನ ಆಸೆ, ಆಕಾಂಕ್ಷೆಗಳು ಪ್ರಬಂಧಗಳಲ್ಲಿ ಕರಗತಗೊಳ್ಳುತ್ತವೆ. ಪ್ರಬಂಧದ ಆತ್ಮೀಯತೆ ಉಳಿದೆಲ್ಲಾ ಲಕ್ಷಣಗಳಿಗಿಂತ ಅಧಿಕವಾಗಿರುತ್ತವೆ. ಕನ್ನಡ ಲಲಿತ ಪ್ರಬಂಧ ಸಾಹಿತ್ಯದಲ್ಲಿ ಎರಡು ಮುಖ್ಯ ಪರಂಪರೆ ಎಂದರೆ ಎ.ಎನ್.ಮೂರ್ತಿರಾವ್‌ರ ಪರಂಪರೆ. ಇನ್ನೊಂದು ಕುವೆಂಪು, ಕಾರಂತರ ಪರಂಪರೆ. ಮೂರ್ತಿರಾವ್ ಅವರ ಪರಂಪರೆಯಲ್ಲಿ ಭಾವಪ್ರಧಾನ, ಹಾಸ್ಯಮಯ, ಆತ್ಮೀಯ ಲಲಿತ ಪ್ರಬಂಧಗಳು ಬೆಳೆದುಬಂದಿದೆ, ಕುವೆಂಪು, ಕಾರಂತರ ಪರಂಪರೆಯಲ್ಲಿ ಚಿಂತನಾತ್ಮಕ, ಪ್ರಯೋಗಾತ್ಮಕ ರೀತಿಯ ಗಂಭೀರವಾದ ಲಲಿತ ಪ್ರಬಂಧಗಳು ಕಂಡುಬರುತ್ತವೆ.

ದಕ್ಷಿಣ ಕರ್ನಾಟಕದ ಲಲಿತ ಪ್ರಬಂಧದ ದಿಗ್ಗಜರೆನಿಸಿದ ಎ.ಎನ್.ಮೂರ್ತಿರಾವ್ ರವರ ಪರಂಪರೆಯೊಂದಿಗೆ ಉತ್ತರ ಕರ್ನಾಟಕದ ಲಲಿತ ಪ್ರಬಂಧ ಸಾಹಿತ್ಯದಲ್ಲಿ ವೀರೇಂದ್ರಸಿಂಪಿಯವರು ಪ್ರಮುಖರೆನಿಸಿಕೊಂಡಿದ್ದಾರೆ. ಇಂತಹ ಲೇಖಕರು ವಿಶೇಷವಾಗಿ 'ಲಲಿತ ಪ್ರಬಂಧ' ಸಾಹಿತ್ಯದಲ್ಲಿ ಗುರುತಿಸಿಕೊಂಡಿರುವುದರಿಂದ ಅವರ 'ಆಯ್ದ ಲಲಿತ ಪ್ರಬಂಧ' ಕುರಿತಾಗಿ ಅಧ್ಯಯನ ಕೈಗೊಳ್ಳಲಾಗಿದೆ. ಈ ಅಧ್ಯಯನ ಪ್ರಮುಖ ಉದ್ದೇಶಗಳೆಂದರೆ,

೧. ಕನ್ನಡ ಲಲಿತ ಪ್ರಬಂಧ ಸಾಹಿತ್ಯಕ್ಕೆ ಪಾಶ್ಚಾತ್ಯ ಪ್ರೇರಣೆಯಾದರೂ ಕನ್ನಡದಲ್ಲಿ ತನ್ನದೇ ಆದ ಅಭಿವ್ಯಕ್ತಿ ಕ್ರಿಯೆಯಿಂದ 'ಲಲಿತ ಪ್ರಬಂಧ' ಬೆಳೆದು ಬಂದ ಪರಂಪರೆ, ಹಾಗೂ ಅದು ಸೃಷ್ಟಿಗೊಂಡ ಕಾಲದ ಸಾಮಾಜಿಕ, ರಾಜಕೀಯ, ಆರ್ಥಿಕ ಸಂದರ್ಭಗಳಿಗೂ ಅನ್ವಯಿಸುವುದು.

೨. ಆಧುನಿಕ ಕಾಲವನ್ನು ಅನುಲಕ್ಷಿಸಿ ಸಾವಿರಾರು ವರ್ಷಗಳ ಸಾಹಿತ್ಯಪರಂಪರೆಯನ್ನು ಪುನರಾವಲೋಕನಕ್ಕೆ ಗುರಿಪಡಿಸುವುದು.

೩. ಸುದೀರ್ಘವಾದ ಕನ್ನಡ ಸಾಹಿತ್ಯ ಹಾಗೂ ಅದರ ವಿವಿಧ ಪ್ರಕಾರಗಳಲ್ಲಿ ಒಂದಾದ ಲಲಿತ ಪ್ರಬಂಧದ ಸಾಂಸ್ಕೃತಿಕ, ಚಾರಿತ್ರಿಕ ಹಿನ್ನೆಲೆಯ ಪರಿಚಯ ಮಾಡಿಕೊಡುವುದು.

೪. ಕನ್ನಡ ಲಲಿತ ಪ್ರಬಂಧದಲ್ಲಿ ಗುರುತಿಸಿಕೊಂಡ ವೀರೇಂದ್ರ ಸಿಂಪಿಯವರ ಜೀವನ ಮತ್ತು ಸಾಧನೆಯ ಮೇಲೆ ಬೆಳಕು ಚೆಲ್ಲುವುದು.

೫. ವೀರೇಂದ್ರ ಸಿಂಪಿ ಅವರ ಲಲಿತ ಪ್ರಬಂಧಕ್ಕೆ ಸಂಬಂಧಿಸಿದಂತೆ ಅವರ ಸಾಹಿತ್ಯ ಕೃಷಿ ಹಾಗೂ ಜೀವನದ ಅನುಭವಕ್ಕೆ ಅಂಟಿದ ಅವರ ಬರಹಗಳಲ್ಲಿ ಆಯ್ದ ಲಲಿತ ಪ್ರಬಂಧಗಳಿಂದ ೩೯ ಲಲಿತ ಪ್ರಬಂಧಗಳ ವಸ್ತು, ಶೈಲಿ, ವೈವಿಧ್ಯತೆ, ಹಾಸ್ಯ, ವಿಡಂಬನೆ, ವ್ಯಂಗ್ಯ, ಜೀವನಪಾಠ, ವೈಚಾರಿಕತೆ, ಭಾಷಾ ಪಾಂಡಿತ್ಯಗಳನ್ನು ಹಾಗೂ ಒಟ್ಟು ಪ್ರಬಂಧಗಳ ಸತ್ವವನ್ನು ವಿವೇಚಿಸುವುದು.

ಈ ಎಲ್ಲಾ ಅಂಶಗಳನ್ನು ನನ್ನ ಓದಿನ ಮಿತಿ, ಗ್ರಹಿಕೆಯ ಹಿನ್ನಲೆಯ ಮೇಲೆ ಇವರ ಪ್ರಬಂಧಗಳಲ್ಲಿನ ಸತ್ವವನ್ನು ಹಾಗೂ ಕನ್ನಡ ಸಾಹಿತ್ಯಕ್ಕೆ ಇವರ ಪ್ರಬಂಧಗಳ ಕೊಡುಗೆ ಯಾವ ರೀತಿಯಾಗಿದೆ ಎಂಬುದನ್ನು ವಿಶ್ಲೇಷಿಸಿ ವಿವರಿಸುವುದೇ ನನ್ನ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಲಲಿತ ಪ್ರಬಂಧ ಪ್ರಕಾರವು ಬೆಳೆದುಬಂದ ಬಗೆಯನ್ನು ಅರಿತುಕೊಳ್ಳುವುದಕ್ಕಾಗಿ ಈ ಹಿಂದಿನ ಪ್ರಮುಖ ಲಲಿತ ಪ್ರಬಂಧಕಾರರ ಪರಿಚಯ ಮಾಡಲಾಗಿದೆ. ಹಾಗೂ ವೀರೇಂದ್ರ ಸಿಂಪಿ ಅವರ ಲಲಿತ ಪ್ರಬಂಧ ಕುರಿತಾಗಿ ಅವರ "ಆಯ್ದ ಲಲಿತ ಪ್ರಬಂಧಗಳು" ಸಂಕಲನವನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಪ್ರಬಂಧಗಳಲ್ಲಿನ ವಸ್ತು ವೈವಿಧ್ಯತೆ, ಸ್ವರೂಪ, ಆಶಯಗಳೊಂದಿಗೆ, ಪೂರಕ ಮಾಹಿತಿಗಾಗಿ ವಿವಿಧ ವಿದ್ವಾಂಸರ ಹೇಳಿಕೆಗಳನ್ನು ಬಳಸಿಕೊಂಡು ಅಧ್ಯಯನದ ವಸ್ತುವನ್ನು ನೈಜ ರೀತಿಯಲ್ಲಿ ವಿಧಾನವನ್ನು ರೂಪಿಸಿಕೊಳ್ಳಲಾಗಿದೆ.

## ಅಧ್ಯಯನದ ಸ್ವರೂಪ

ಪ್ರಬಂಧ ಎಂದಾಕ್ಷಣ ಒಂದು ವಿಷಯ, ಅಥವಾ ವಸ್ತುವಿರುತ್ತದೆ. ಲೇಖಕನ ಕಲ್ಪನೆ, ವಿಚಾರ ಲಹರಿಗಳು, ಅದರ ಸುತ್ತಲೂ ಹರಿಯುವುದು, ಇತರೆ ವಿಚಾರಗಳನ್ನು ಅದರ ಜೊತೆಯಲ್ಲಿಯ ಹೆಣೆಯುವ ಜಾಣ್ಮೆ, ಹಾಸ್ಯ, ವಿನೋದಗಳನ್ನು ಸಂದರ್ಭಕ್ಕೆ ತಕ್ಕ ಹಾಗೆ ತರುವುದು, ಇವುಗಳೆಲ್ಲವನ್ನು ಒಳಗೊಂಡಿರುವಂತಹದ್ದು ಪ್ರಬಂಧ ಎಂದು ನಾವು ಭಾವಿಸಿದ್ದೇವೆ. ಹಾಗೇನೇ ಲಘು ಪ್ರಬಂಧವನ್ನು ಓದಿದ ಕೂಡಲೇ ಒಂದು ತೃಪ್ತಿಯ ಮನೋಭಾವ ಉಂಟಾಗಬೇಕು. ಹೇಳುವುದನ್ನೆಲ್ಲಾ ಹೇಳಿಯಾಯಿತು ಎಂಬಂತೆ ಇರಬಾರದು. ಒಂದು ದೃಷ್ಟಿಯಿಂದ ಮತ್ತೊಂದು ದೃಷ್ಟಿಗೆ ಪೂರ್ಣವಾಗಿ ಅದು ಹೆಚ್ಚಿನ ಜ್ಞಾನಕ್ಕೆ ಸೋಪಾನವಾಗಬೇಕು. ಅಂತಹ ಒಂದು ವಿಶಿಷ್ಟತೆಯನ್ನು ವೀರೇಂದ್ರಸಿಂಪಿಯವರ ಲಲಿತ ಪ್ರಬಂಧಗಳಲ್ಲಿ ಕಾಣುತ್ತೇವೆ.

ಸಿಂಪಿಯವರ ಲಲಿತ ಪ್ರಬಂಧಗಳು ನಮ್ಮ ಹೃದಯವನ್ನು ಅರಳಿಸುತ್ತವೆ. ಬುದ್ಧಿಯನ್ನು ಪ್ರಚೋದಿಸುತ್ತದೆ. ಹಾಗೇ ಅವರ ಸಚೇತಕವಾದ ಭಾವನೆ, ಅನುಭವಗಳು, ಹಾಸ್ಯ, ವಿಡಂಬನೆ ಅವರ

ಪ್ರಬಂಧಗಳುದ್ದಕ್ಕೂ ಹರಿದುಬಂದು, ಓದುಗನ ಮನಸ್ಸಿಗೆ ನೇರವಾಗಿ ತಟ್ಟುವ, ಹಾಗೂ ಓದುಗನ ಅಂತಃ ಕರಣವನ್ನು ಜಾಗೃತಗೊಳಿಸುವ ಕಾರ್ಯವನ್ನು ಇವರ ಪ್ರಬಂಧಗಳು ಮಾಡುತ್ತವೆ. ಸಿಂಪಿಯವರ ಲಲಿತ ಪ್ರಬಂಧಗಳಲ್ಲಿ ಹೆಚ್ಚಾಗಿ ಬದುಕಿನ ವಿವಿಧ ಅನುಭವಗಳಿಗೆ ಸ್ಪಂದಿಸಿ ರಚಿಸಿದ ಅವರ ವೈವಿಧ್ಯಮಯ ಪ್ರಬಂಧಗಳು ಕಲಾತ್ಮಕವಾಗಿ ಅಪೂರ್ವವಾಗಿವೆ. ಬುದ್ಧಿ ಮತ್ತು ಹೃದಯಗಳ ಬೆಸೆಯುವಿಕೆಯಿಂದ ಇವರ ಪ್ರಬಂಧಗಳು ಓದುಗರಿಗೆ ಆತ್ಮೀಯವೆನಿಸುತ್ತವೆ. ಆಳವಾದ ಓದು, ಅನುಭಾವ, ಸೂಕ್ಷ್ಮ ವಿವೇಚನಾ ಶಕ್ತಿ, ವಿಶ್ಲೇಷಣಾ ಸಾಮರ್ಥ್ಯ, ಮಾನವೀಯ ದೃಷ್ಟಿ, ಶ್ರೇಷ್ಠ ನಿರೂಪಣೆ, ಮಾರ್ಮಿಕ ವಿಡಂಬನೆಯಿಂದ ಕೂಡಿದ ಅವರ 'ಕಾಗದದಚೂರು', 'ಹೊಗಳಿಕೆ', 'ಭಾವಮೈದುನ', 'ಪ್ರಾಧ್ಯಾಪಕರ ಸಿಟ್ಟು', 'ಭಾಷಣಕಾರನ ಬವಣೆ', 'ಬೇಸರ' ಮುಂತಾದ ಅವರ ಪ್ರಬಂಧಗಳಲ್ಲಿ ಮೊನಚಾದ ಕಟುಕಿ ನುಡಿಗಳು ಓದುಗರಲ್ಲಿ ಆತ್ಮ ವಿಮರ್ಶೆ ಮಾಡಿಕೊಳ್ಳುವಲ್ಲಿ ಸಫಲವಾಗುತ್ತವೆ. ಇಂಥ ಪ್ರಬಂಧಗಳಲ್ಲಿ ಮೆಚ್ಚಬೇಕಾದ ಮುಖ್ಯಗುಣ ಇಲ್ಲಿಯ ಒಂದು ಬಗೆಯ ನಿರಪೇಕ್ಷ ಆರೋಪ, ಧ್ವನಿರಹಿತ ಆರೋಗ್ಯ ಪೂರ್ಣ ಆತ್ಮೀಯ ನಿಲುವು, ಇಂಥ ಒಂದು ಆರೋಗ್ಯಕರ ನಿಲುವು ಮಾತ್ರದಿಂದಲೇ ಒಂದು ಲಲಿತ ಪ್ರಬಂಧವನ್ನು ಸಫಲಗೊಳಿಸಬಲ್ಲದಾಗಿದೆ.

ಪ್ರಬಂಧಕಾರನ ವ್ಯಕ್ತಿತ್ವವೇ ಪ್ರಬಂಧದ ಉಗಮವಾದ್ದರಿಂದ ಒಂದು ರೀತಿಯಲ್ಲಿ ಅವನು ತನ್ನ ವ್ಯಕ್ತಿತ್ವವನ್ನೇ ಓದುಗರೊಡನೆ ಹಂಚಿಕೊಳ್ಳುವುದರಿಂದ ಅವನ ವ್ಯಕ್ತಿತ್ವವನ್ನೆ ಪ್ರಬಂಧದ ಸಾಧನೆ, ಯಶಸ್ಸಿಗಳು ಅವಲಂಬಿಸಿರುತ್ತವೆ. ಸಿಂಪಿಯವರ ಪ್ರಬಂಧಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಇವರ ಪ್ರಬಂಧ ರಚನಾ ಶೈಲಿಯು ಗಂಭೀರತೆಯಿಂದ, ಲಘುತ್ವದ ಕಡೆಗೆ ಸಾಗುವ ಜೊತೆಗೆ, ಸರಾಗವಾಗಿ ಅರ್ಥವಾಗುವ ಇವರ ಶೈಲಿಯನ್ನು 'ಲಲಿತ ಗಂಭೀರ'ವೆಂಬ ವಿಭಿನ್ನ ದರ್ಶನಕ್ಕೆ ಕಾರಣವಾಗುತ್ತದೆ. ಇವರು ವೃತ್ತಿಯಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿರುವುದರಿಂದ ಅಲ್ಲಲ್ಲಿ ಇಂಗ್ಲೀಷ್ ಹಾಗೂ ಹಿಂದಿ, ಸಂಸ್ಕೃತದ ಕೆಲವು ಭಾಷಾಂಶ, ವ್ಯಾಖ್ಯೆಗಳನ್ನು ಬಳಸಿರುವುದು ಇವರ ವಿಶಿಷ್ಟತೆಯನ್ನು ತೋರಿಸುತ್ತದೆ. ಈ ಎಲ್ಲಾ ಅಂಶಗಳನ್ನು ಅನುಲಕ್ಷಿಸಿ ಅಧ್ಯಯನಕ್ಕೆ ಅವರ ಲಲಿತ ಪ್ರಬಂಧಗಳಲ್ಲಿ ಆಯ್ದ ಲಲಿತ ಪ್ರಬಂಧ'ಗಳನ್ನು ತೆಗೆದುಕೊಂಡು ಅವರು ಈ ಕ್ಷೇತ್ರಕ್ಕೆ ಸಲ್ಲಿಸಿದ ಕಾಣಿಕೆಯನ್ನು, ಹಾಗೂ ಕೊಡುಗೆಯನ್ನು "ವೀರೇಂದ್ರ ಸಿಂಪಿ ಅವರ ಆಯ್ದ ಲಲಿತ ಪ್ರಬಂಧಗಳು ಒಂದು ವಿವೇಚನೆ" ಎಂಬ ಕಿರು ನಿಬಂಧವನ್ನು ಕೈಗೊಳ್ಳಲಾಗಿದೆ.

## ಅಧ್ಯಯನದ ವ್ಯಾಪ್ತಿ

ಕನ್ನಡ ಸಾಹಿತ್ಯದ ಪರಂಪರೆಯಲ್ಲಿ 'ಲಲಿತ ಪ್ರಬಂಧ' ಸಾಹಿತ್ಯಕ್ಕೆ ತನ್ನದೇ ಆದ ವಿಶಿಷ್ಟಸ್ಥಾನ ಲಭಿಸಿದೆ. ಇಂತಹ ಒಂದು ಸಾಹಿತ್ಯದಲ್ಲಿ ಗುರುತಿಸಿಕೊಂಡ ವೀರೇಂದ್ರ ಸಿಂಪಿಯಂತವರನ್ನು ಕನ್ನಡ

ಸಾರಸತ್ವ ಲೋಕಕ್ಕೆ ಅವರ ಪ್ರಬಂಧ ಸಾಹಿತ್ಯವನ್ನು ಪರಿಚಯಿಸುವ ನಿಟ್ಟಿನಲ್ಲಿ ಅವರ ಲಲಿತ ಪ್ರಬಂಧಗಳಲ್ಲಿ ಆಯ್ದು ಒಟ್ಟು ೩೯(ಮೂವತ್ತೊಂಬತ್ತು) ಲಲಿತ ಪ್ರಬಂಧಗಳ ಕುರಿತಾಗಿ ಅಧ್ಯಯನ ಕೈಗೊಳ್ಳಲಾಗಿದೆ. ಜೊತೆಗೆ ವೀರೇಂದ್ರ ಸಿಂಪಿಯವರ ಬದುಕು, ಬರಹದ ಕುರಿತಾಗಿ ಬೆಳಕು ಚೆಲ್ಲುವುದು, ಈ ಪ್ರಬಂಧದ ಉದ್ದೇಶವಾಗಿದೆ. ಒಬ್ಬ ಲೇಖಕನ ಸಾಹಿತ್ಯದ ಬಗ್ಗೆ ಸಂಶೋಧನೆ ಕೈಗೊಳ್ಳುವಾಗ ಆ ವ್ಯಕ್ತಿಯ ಬರಹದಷ್ಟು ಬದುಕು ಸಹ ಮಹತ್ವದ್ದಾಗಿರುತ್ತದೆ. ಆದ್ದರಿಂದ ಅವರ ಬದುಕಿನೊಂದಿಗೆ ಅವರ ಪ್ರತಿಭೆಯನ್ನು ಹೊರಚೆಲ್ಲಿ ಅವರ ಸುದೀರ್ಘವಾದ ಸಾಹಿತ್ಯದ ವೈವಿಧ್ಯತೆಯನ್ನು ವಿವಿಧ ಅಧ್ಯಯಗಳಾಗಿ ವಿಂಗಡಿಸಿ, ಸೂಕ್ಷ್ಮದೃಷ್ಟಿಯ ಮೂಲಕ ಅಧ್ಯಯನಕ್ಕೊಳಪಡಿಸುವುದು ಅನಿವಾರ್ಯವಾಗಿದೆ. ಹಾಗೇನೇ ಅವರ ಲಲಿತ ಪ್ರಬಂಧ ಸಾಹಿತ್ಯ ಕುರಿತಾಗಿ ವಿವಿಧ ಆಕರಗಳಿಂದ ಸಂಗ್ರಹಿಸಿದ ಮಾಹಿತಿಗಳಿಂದ ಸಂಶೋಧನೆಗೊಳಪಡಿಸಿ, ನಿಷ್ಪಕ್ಷಪಾತವಾದ, ಪ್ರಾಮಾಣಿಕವಾದ ಬೆಳಕು ಚೆಲ್ಲುವ ಪ್ರಯತ್ನ ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಒಟ್ಟು ಆರು ಅಧ್ಯಾಯಗಳಲ್ಲಿ ವೀರೇಂದ್ರ ಸಿಂಪಿ ಅವರ ಜೀವನ ಸಾಧನೆ ಜೊತೆಗೆ ಅವರ ಲಲಿತ ಪ್ರಬಂಧದ ವಸ್ತು ಮತ್ತು ಆಶಯವನ್ನು ವಿವೇಚಿಸಲಾಗಿದೆ.

೨

# ವೀರೇಂದ್ರ ಸಿಂಪಿಯವರ ಜೀವನ ಮತ್ತು ಸಾಧನೆ

"ಕಲ್ಯಾಣ ನಾಡಿನಿಂದ ತರ್ದೇವಾಡಿ ಸಾವಿರನಾಡಿಗೆ ವಲಸೆ ಹೋದ ಸಿಂಪಿ ಮನೆತನದ ಪ್ರತಿಭೆಯ ಸೊಂಪು ಆರುನೂರು ವರ್ಷಗಳ ನಂತರ ವೀರೇಂದ್ರ ಸಿಂಪಿಯ ಮುಖಾಂತರ ಮರಳಿ ಕಲ್ಯಾಣ ನಾಡಿನ ಧರಿನಾಡಿಗೆ ತನ್ಮೂಲಕ ಬೀದರ್ ಜಿಲ್ಲೆಗೆ ಆಗಮಿಸಿದೆ. ಜಿಲ್ಲೆಗೆ ರಾಜ್ಯಮಟ್ಟದ ಹಾಗೂ ರಾಷ್ಟ್ರಮಟ್ಟದವರೆಗೆ ಕೀರ್ತಿಯನ್ನು ಎತ್ತರಿಸಿದೆ. ಬೀದರ್ ಕೆಮ್ಮಣ್ಣಿನ ಸತ್ವವನ್ನು ಬೀರುತ್ತಲಿದೆ."[೧] ಕಳೆದ ಶತಮಾನ ಕಂಡ ಶ್ರೇಷ್ಠ ಸಾಹಿತಿಗಳಲ್ಲಿ ವೀರೇಂದ್ರ ಸಿಂಪಿಯವರು ಒಬ್ಬರಾಗಿದ್ದಾರೆ. ಇವರನ್ನು ಬರಹಗಾರ, ವಿಮರ್ಶಕ, ವಿಚಾರವಾದಿ, ಅಂಕಣಕಾರ ಎನ್ನುವುದಕ್ಕಿಂತ ಒಬ್ಬ ಲಲಿತ ಪ್ರಬಂಧಕಾರರೆಂದು ಹೇಳಬಹುದು. ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಸಾಹಿತ್ಯ ಲೋಕಕ್ಕೆ ಜಗನ್ಮಾನ್ಯತೆ ದೊರೆಕಿಸಿಕೊಟ್ಟ ಕವಿಗಳು ಹಲವರಿದ್ದಾರೆ. ಅಂಥವರಲ್ಲಿ ಕನ್ನಡ ನಾಡು, ನುಡಿ, ಸಂಸ್ಕೃತಿಗಳಿಗೆ ಹಾಗೂ ಸಾಹಿತ್ಯದ ಏಳ್ಗೆಗಾಗಿ ಅವಿರತವಾಗಿ ದುಡಿದು ಖ್ಯಾತಿಗೆ ಪಾತ್ರರಾದವರಲ್ಲಿ ವೀರೇಂದ್ರ ಸಿಂಪಿಯವರು ಒಬ್ಬರು. ಒಬ್ಬ ಸಾಹಿತ್ಯಕಾರನ ಸಾಹಿತ್ಯ ಕುರಿತು ತಿಳಿಯುವ ಮುನ್ನ ಅವರ ಬದುಕಿನ ಬಗ್ಗೆ ಅರಿತುಕೊಳ್ಳುವುದು ಮಹತ್ವದ ಸಂಗತಿಯಾಗಿದೆ. ಅವರ ಬಾಲ್ಯ, ಶಿಕ್ಷಣ, ವೃತ್ತಿ ಮತ್ತು ಸೇವೆ, ಕೌಟುಂಬಿಕ ಜೀವನ, ಸಾಹಿತ್ಯಿಕ ಪರಿಸರ, ಸಂದ ಗೌರವ ಪ್ರಶಸ್ತಿಗಳು ಮುಂತಾದ ವಿಷಯಗಳನ್ನು ಅರಿತುಕೊಳ್ಳುವುದು ಮತ್ತು ಆ ವಿಷಯವನ್ನು ಗ್ರಹಿಸುತ್ತಾ ಬರವಣಿಗೆಯ ಮೇಲೆ ಬೆಳಕು ಚೆಲ್ಲುವುದು ಈ ಅಧ್ಯಯನದ ಅವಶ್ಯಕತೆಗಳಲ್ಲಿ ಒಂದಾಗಿದೆ.

## ಬಾಲ್ಯ

ವೀರೇಂದ್ರ ಸಿಂಪಿಯವರು ಬಿಜಾಪುರ ಜಿಲ್ಲೆ, ಇಂಡಿ ತಾಲೂಕಿನ 'ಚಡಚಣ' ಎಂಬ ಗ್ರಾಮದಲ್ಲಿ ೧೪-೧೦-೧೯೩೪ರಲ್ಲಿ ಜನಿಸಿದರು. ಇವರ ತಂದೆ ಪ್ರಸಿದ್ಧ ಸಾಹಿತಿ ಸಿಂಪಿ ಲಿಂಗಣ್ಣನವರು. ತಾಯಿ ಸುಲಭವ್ವ. ತಾಯಿ ತಂದೆಯರ ಪಾಲಿಗೆ ಮೂರನೇ ಮಗನಾಗಿ ಅದರಲ್ಲೂ ಜೇಷ್ಠ ಗಂಡು ಮಗುವಾಗಿ ಜನಿಸಿದ ಇವರು ದುರದೃಷ್ಟವಶಾತ್ ಇವರು ಹುಟ್ಟುತ್ತಲೇ ಬಲಗೈ, ಬಲಗಾಲಿಗೆ ಶಕ್ತಿ ಇಲ್ಲದಾಗಿ

ಅಂಗವಿಕಲರಾಗಿ ಹುಟ್ಟಿದರು. ಇವರದು ಕಲಾವಿದರ ಮನೆತನ, ನೂಲಿಗೆ ಬಣ್ಣ ಹಾಕುವುದು ಇವರ ಮನೆತನದ ಕಾಯಕವಾಗಿತ್ತು. ಇವರ ಪೂರ್ವಜರೆಲ್ಲಾ ಜನಪದ ಕಲೆಗಳಲ್ಲಿ ಆಸಕ್ತರಾಗಿದ್ದರು. ಇವರದು ನೇಕಾರಿಕೆಯ ಮನೆತನವಾದ್ದರಿಂದ ಬಾಲ್ಯ ಜೀವನ ಬಡತನದೊಂದಿಗೆ ಯಾವುದೇ ಏರುಪೇರುಗಳಿಲ್ಲದೆ ಸುಮಧುರವಾಗಿ ಸಾಗಿತ್ತು.

ವೀರೇಂದ್ರ ಸಿಂಪಿಯವರ ಬಾಲ್ಯ ಜೀವನದ ಅತ್ಯಂತ ಕಠಿಣ ಪರಿಸ್ಥಿತಿಯ ಸಂದರ್ಭವೆಂದರೆ ಅದು ಅವರ ತಾಯಿ ಸುಲಭವ್ವಳ ಅಕಾಲಿಕ ಮರಣ. ಆಗ ವೀರೇಂದ್ರ ಸಿಂಪಿಯವರಿಗೆ ಕೇವಲ ೧೦ ವರ್ಷ ವಯಸ್ಸು. ಕೊನೆಯ ತಮ್ಮ ಮೂರು ವರ್ಷದ ಹಸುಗೂಸು ಇರುವಾಗಲೇ ಸುಲಭವ್ವ ಗರ್ಭ ಸಂಬಂಧಿ ಕಾಯಿಲೆಗೆ ತುತ್ತಾಗಿ ಮರಣ ಹೊಂದಿದಳು. ಇಂಥ ಸಂದರ್ಭದಲ್ಲಿ ಸಿಂಪಿ ಲಿಂಗಣ್ಣನವರು ಮುದ್ದಿನ ಮಡದಿಯ ನಿಧನದಿಂದ ಬಾಳದೋಣಿಯು ಬಿರುಗಾಳಿಗೆ ಸಿಲುಕಿ ಹೊಯ್ದಾಡತೊಡಗಿದ್ದನ್ನು ಅವರು ಮಕ್ಕಳ ಹಾಗೂ ತನ್ನ ಅನು-ತನುವನ್ನು ಕೇಳುವವರಿಲ್ಲದೆ ಚಿಂತಾಕುಲರಾದರು. ಅಂಥ ಒಂದು ಕಠಿಣ ಪ್ರಸಂಗದಲ್ಲಿ ತಮ್ಮ ಬಾಳನ್ನು ಸರಿದೂಗಿಸಿಕೊಂಡು ಹೋಗುವ ಸಲುವಾಗಿ ಬಾಲವಿಧವೆಯಾದ ಶಿವಮ್ಮನವರೊಂದಿಗೆ ಉಡಿಕೆ ಮಾಡಿಕೊಂಡರು.

ಸಿಂಪಿ ಲಿಂಗಣ್ಣನವರ ಎರಡನೇ ಪತ್ನಿಯಾಗಿ ಬಂದ ಶಿವಮ್ಮನವರು ಅವರ ಮೊದಲಿನ ಹೆಂಡತಿಯ ಮಕ್ಕಳನ್ನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ನೋಡಿಕೊಂಡರೂ ಕ್ಷುಲ್ಲಕ ಕಾರಣಗಳಿಂದಾಗಿ ಆಗಾಗ ವಿರಸ ಪ್ರಸಂಗಗಳು ತಲೆ ಎತ್ತುವ ಮೂಲಕ ಕುಟುಂಬ ಪರಿಸರವನ್ನು ನರಕ ಸದೃಶವಾಗುವಂತೆ ಮಾಡಿ ಕಣ್ಣೀರನ್ನು ಹರಿಸುತ್ತಿದ್ದವು. ಇಂತ ಪ್ರಸಂಗಗಳು ವೀರೇಂದ್ರ ಸಿಂಪಿಯವರಿಗೆ ಅಳ್ಳೆದೆಯವರನ್ನಾಗಿ ಮಾಡುತ್ತಿದ್ದವು. ಬಾಲ್ಯದಲ್ಲಿ ಅವರ ಬಳಗದ ಅಜ್ಜಿ, ಸೋದರತ್ತೆ, ಇಬ್ಬರು ಸೋದರ ಮಾವಂದಿರು ಅಪಾರ ಪ್ರೀತಿ ಉಣ್ಣಿಸಿದ ಇಬ್ಬರು ಅಕ್ಕಂದಿರು, ನಾಲ್ವರು ತಮ್ಮಂದಿರು, ಇಬ್ಬರು ತಂಗಿಯರು ಅವರಿಗೆ ಪ್ರೀತಿಯ ಧಾರೆಯನ್ನು ಎರೆದಿದ್ದಾರೆ. ಬಳಗದ ಪ್ರೀತಿಗಿಂತ ಜಗತ್ತಿನಲ್ಲಿ ದೊಡ್ಡದಾವುದೂ ಇಲ್ಲವೆಂದು ಅವರಿಗೆ ಆವಾಗಲೇ ಅನಿಸಿತ್ತು.

### ಶಿಕ್ಷಣ

ವೀರೇಂದ್ರ ಸಿಂಪಿ ಅವರಿಗೆ ಮನೆಯೇ ಮೊದಲ ಪಾಠಶಾಲೆಯಾಗಿತ್ತು. ಸಾಹಿತಿಯಾದ ಲಿಂಗಣ್ಣನವರು ಮಕ್ಕಳಿಗೆ ಮನೆಯಲ್ಲಿ ಸಾಹಿತ್ಯಿಕ ವಾತಾವರಣವಿರಲೆಂದು ತಾವೇ ನಸುಕಿನಲ್ಲಿ ಎಲ್ಲಾ ಮಕ್ಕಳಿಗೆ ಕೇಳಿಸುವಂತೆ ಹರಿಹರನ ಪಂಪಾ ಶತಕ, ರಕ್ಷಾಶತಕ, ರತ್ನಾಕರನ ಭರತೇಶ ವೈಭವ ಮುಂತಾದ ಪದ್ಯಗಳನ್ನು ಗಟ್ಟಿಯಾಗಿ ಹಾಡುತ್ತಿದ್ದರು. ಅಲ್ಲದೆ, ತಾಯಿ ಸುಲಭವ್ವಳು ಸಹ ದಿನಾಲು ಮಧುರಚೆನ್ನರ, ಅಂಬಿಕಾತನಯದತ್ತರ ಭಾವಗೀತೆ, ಜಾನಪದ ತ್ರಿಪದಿಗಳನ್ನು ಹಾಡುತ್ತಿದ್ದರು. ಇದರಿಂದಾಗಿಯೇ ಅವರಿಗೆ ಚಿಕ್ಕಂದಿನಲ್ಲಿಯೇ ಭಾವಕೋಶಗಳು ಬೆಳೆದುಬಂದವು.

ವೀರೇಂದ್ರ ಸಿಂಪಿಯವರು ಒಂದನೇ ಮತ್ತು ಎರಡನೇ ತರಗತಿಯ ಅಭ್ಯಾಸವನ್ನು ತಂದೆಯ ನೌಕರಿಯ ಊರಾದ ಹಲಸಂಗಿಯಲ್ಲಿ ಮುಗಿಸಿದರು. ಆಮೇಲೆ ಮುಲ್ಕಿ(ಏಳನೆ) ಪರೀಕ್ಷೆಯವರೆಗೆ ಹುಟ್ಟೂರಾದ ಚಡಚಣದಲ್ಲಿ ಓದಿದರು. ಅಲ್ಲಿಯೇ ೧೯೫೨ರಲ್ಲಿ ಮುಲ್ಕಿ ಪರೀಕ್ಷೆ ಪಾಸಾದರು. ಎಂಟನೇ ವರ್ಗದಿಂದ ಹನ್ನೊಂದನೇ ತರಗತಿವರೆಗೆ ಚಡಚಣದ ಸಂಗಮೇಶ್ವರ ಪ್ರೌಢಶಾಲೆಯಲ್ಲಿ ಅಭ್ಯಾಸ ನಡೆಸಿದರು. ೧೯೫೬ರಲ್ಲಿ ಅವರು ಎಸ್.ಎಸ್.ಎಲ್.ಸಿ. ಪಾಸಾದರು. ಅವರ ಪದವಿ ಅಭ್ಯಾಸವು. ಬಿಜಾಪುರದ ವಿಜಯ ಕಾಲೇಜಿನಲ್ಲಿ ೧೯೬೦ರಲ್ಲಿ ಜರುಗಿ ಬಿ.ಎ. ಉತ್ತೀರ್ಣರಾದರು. ಕಾಲೇಜ ಹಂತದಲ್ಲಿ ಪ್ರೊ.ಬಿ.ಟಿ.ಸಾಸನೂರು ಅವರ ಪ್ರಭಾವ ಇವರ ಮೇಲೆ ದಟ್ಟವಾಗಿತ್ತು. ವೀರೇಂದ್ರ ಸಿಂಪಿಯವರು ೧೯೬೨ರಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಇಂಗ್ಲೀಷ್ ಎಂ.ಎ.ಸ್ನಾತಕೋತ್ತರ ಪದವಿಯನ್ನು ಪಡೆದರು. ಇವರಿಗೆ ಓದುವ ಅಭಿರುಚಿ ಬಿಟ್ಟರೆ ಬೇರೆ ಯಾವುದೇ ಆಕರ್ಷಣೆ ಇರಲಿಲ್ಲ. ವೀರೇಂದ್ರ ಸಿಂಪಿಯವರು ಬಲಗೈ ಮತ್ತು ಬಲಗಾಲುಗಳಿಂದ ವಿಕಲಾಂಗರು ಮತ್ತು ಅಶಕ್ತರಾಗಿದ್ದರು. ಆದರೂ ಇವರು ತಮ್ಮ ವಿಕಲಾಂಗತೆಯಿಂದ ಹತಾಶರಾದವರಲ್ಲ. ಸಕಲ ಅವಯವಗಳ ಸಂಗಾತಿಗಳು ಆಟ, ಓಟಗಳಲ್ಲಿ ಭಾಗವಹಿಸುವ ಸಮಯದಲ್ಲಿ ಇವರು ಓದು, ವಿದ್ಯಾರ್ಜನೆಗಳಲ್ಲಿ ಪಾಲ್ಗೊಂಡರು. ಅವರ ಶಾರೀರಿಕ ಅಶಕ್ತತೆಯು ಮಾನಸಿಕ ಸಬಲತೆಯನ್ನು ಬೆಳೆಸಿಕೊಳ್ಳಲು ಪ್ರೇರಕವಾಗಿ ನಿಂತಿತು. ಅದರಿಂದ ಅವರಲ್ಲಿ ಬುದ್ಧಿ ಬಲ ಹಾಗೂ ಸೃಜನಶೀಲ ಬರವಣಿಗೆಗಳು ಚಿಗುರ ತೊಡಗಿದವು. ಅವರ ಬದುಕಿನಲ್ಲಿ ಜರುಗಿದ ಅವಿಸ್ಮರಣೀಯ ಘಟನೆಗಳು ಕೂಡ ಅವರನ್ನು ನಿರಂತರ ಚಿಂತನಾಶೀಲರನ್ನಾಗಿ ರೂಪಿಸಿದವು.

## ಸಾಹಿತ್ಯಿಕ ಹಿನ್ನಲೆ

ತಂದೆ ಸಿಂಪಿ ಲಿಂಗಣ್ಣನವರು ಹಲಸಂಗಿಯಿಂದ ವರ್ಗವಾಗಿ ಚಡಚಣಕ್ಕೆ ಬಂದ ಮೇಲೆ ವೀರೇಂದ್ರ ಸಿಂಪಿಯವರ ವಿದ್ಯಾಭ್ಯಾಸ ಚಡಚಣದಲ್ಲಿ ಮುಂದುವರೆಯಿತು. ಚಡಚಣದಲ್ಲಿ ತಾಂಬೆ ಗ್ರಾಮದವರಾದ ಕೆ.ಎಸ್.ತಂಗಾ ಎಂಬ ಶಿಕ್ಷಕರು ಕುವೆಂಪು, ಮಾಸ್ತಿವೆಂಕಟೇಶ ಅಯ್ಯಂಗಾರರ ಕತೆಗಳನ್ನು ಮನಮುಟ್ಟುವಂತೆ ಓದಿ ಹೇಳುತ್ತಿದ್ದರು. ಇದರಿಂದ ಬಾಲಕ ವಿರೇಂದ್ರರಲ್ಲಿ ಸಾಹಿತ್ಯ ಕುರಿತು ಒಲವು ಚಿಗುರತೊಡಗಿತು. ಮುಂದೆ ಕೈಗೆ ಸಿಕ್ಕ ಸಾಹಿತ್ಯಿಕ ಪುಸ್ತಕಗಳನ್ನು ಓದುವ ಅಭ್ಯಾಸವು ರೂಢಿಗತವಾಯಿತು. ವೀರೇಂದ್ರ ಸಿಂಪಿಯವರ ಮನೆಯೇ ಸಾಹಿತ್ಯಿಕ ವಾತಾವರಣದಿಂದ ಕೂಡಿತ್ತು. ತಂದೆ ಪ್ರಸಿದ್ಧ ಕವಿಗಳಾಗಿದ್ದರು. ಹಾಗೇ ಅಕ್ಕ ಭವತಾರಿಣಿ ಜಾನಪದ ಕತೆಗಳನ್ನು ಹೇಳುತ್ತಿದ್ದಳು. ಹಿರಿಯ ಅಕ್ಕ ಭುವನೇಶ್ವರಿ ಉತ್ತಮ ಕತೆಗಾರ್ತಿ ಹಾಗೂ ಕಾದಂಬರಿಕಾರ್ತಿಯಾಗಿದ್ದರು. ಇಂತಹ ವಾತಾವರಣದಲ್ಲಿ ಬೆಳೆದ ವೀರೇಂದ್ರ ಸಿಂಪಿಯವರು ಒಬ್ಬ ಶ್ರೇಷ್ಠ ಲೇಖಕರಲ್ಲಿ ಒಬ್ಬರೆನಿಸಿಕೊಳ್ಳಲು ಸಾಧ್ಯವಾಯಿತು.

“ಸಿಂಪಿ ಲಿಂಗಣ್ಣನವರು ಅಂದು ತಮ್ಮ ಮಕ್ಕಳಿಗೆ ಹೀಗಿನವರಂತೆ ನಸುಕಿನಲ್ಲಿ ಮಕ್ಕಳನ್ನು ಎಬ್ಬಿಸಿ ಮುಖಕ್ಕೆ ನೀರು ಹೊಡೆದು ಓದು ಎಂದು ಹೇಳುತ್ತಿರಲಿಲ್ಲ. ಹೆಚ್ಚಿನ ಅಂಕಗಳಿಸಲು ಪ್ರಚೋದಿಸುತ್ತಿರಲಿಲ್ಲ.

ಬದಲಾಗಿ ಬೀಚಿಯವರ 'ತಿಮ್ಮನ ತಲೆ', 'ಕೈಲಾಸಂ ಅವರ ನಾಟಕಗಳು', ಮಾಸ್ತಿಯವರ ಕತೆಗಳನ್ನು ಓದಲು ಹೇಳುತ್ತಿದ್ದರು. ಬಹಳವಾದರೆ ಎಲ್ಲ ಮಕ್ಕಳನ್ನು ಎಬ್ಬಿಸಿ, ನಸುಕಿನಲ್ಲಿ ನಕ್ಷತ್ರಗಳನ್ನು ತೋರಿಸುತ್ತಾ ನಿಲ್ಲುತ್ತಿದ್ದರು. ಅದರ ಪರಿಣಾಮ ನಮ್ಮೆಲ್ಲರ ಮೇಲೆ ಬಹಳವಾಗಿದೆ"[೨] ಎಂದು ವೀರೇಂದ್ರ ಸಿಂಪಿಯವರೇ ಹೇಳಿಕೊಂಡಿದ್ದಾರೆ. ಇಂತಹ ಪರಿಸರದಿಂದ ಬೆಳೆದು ಬಂದ ವೀರೇಂದ್ರ ಸಿಂಪಿಯವರು ಚಡಚಣದಲ್ಲಿ ಏಳನೇ ತರಗತಿಯಲ್ಲಿ ಅಭ್ಯಾಸ ಮಾಡುತ್ತಿರುವಾಗ, ಮದ್ರಾಸ ಹಿಂದಿ ಪ್ರಚಾರ ಸಭಾದವರು ನಡೆಸುತ್ತಿದ್ದ 'ಮಧ್ಯಮ' ಪರೀಕ್ಷೆ ಕಟ್ಟಿ ಪಾಸಾದರು. ಆ ಅವಧಿಯಲ್ಲಿ ಅವರು ಓದಿದ 'ರಸೇಲಿ ಕಹಾನಿಯಾಂ' ಹಾಗೂ 'ಚಾರ ಏಕಾಂಕಿಯಾಂ' ಎಂಬ ಪಠ್ಯ ಪುಸ್ತಕಗಳಲ್ಲಿಯ ರಸಭರಿತವಾದ ಕತೆಗಳು ಹಾಗೂ ಏಕಾಂಕ ನಾಟಕಗಳು ಅವರ ಮನಸ್ಸನ್ನು ಸೂರೆಗೊಂಡವು. 'ಏಕಲವ್ಯ' ಮೊದಲಾದ ಕೆಲವು ಏಕಾಂಕ ನಾಟಕಗಳನ್ನು ಏಳನೇ ತರಗತಿಯಲ್ಲಿರುವಾಗಲೇ ಅವುಗಳನ್ನು ಕನ್ನಡಕ್ಕೆ ಅನುವಾದಿಸಿದರು. ಇದರಿಂದಾಗಿ ಶಿಕ್ಷಕರು ಹಾಗೂ ಊರಿನ ಜನರು ಅನುವಾದಗೊಂಡ ಕೃತಿಗಳನ್ನು ರಂಗಭೂಮಿಯ ಮೇಲೆ ಪ್ರಯೋಗಿಸಿ ಅವರ ಬಾಲ ಪ್ರತಿಭೆಯನ್ನು ಪುರಸ್ಕರಿಸಿದರು.

ವೀರೇಂದ್ರ ಸಿಂಪಿಯವರು ಎಂಟನೇಯ ತರಗತಿಯಲ್ಲಿ ಓದುತ್ತಿದ್ದಾಗ ಅವರ ಶಾಲೆಯಿಂದ "ಸಂಗಮ" ಎಂಬ ಕೈಬರಹದ ಪತ್ರಿಕೆಯನ್ನು ಹೊರಡಿಸಲಾಗುತ್ತಿತ್ತು. ಇದರ ಸಂಪಾದಕರು ಎಂ.ಎಸ್.ಎಸ್.ರಾವ್ ಎಂಬ ಶಿಕ್ಷಕರು ಆಗಿದ್ದರು. ಈ ಕೈಬರಹದ ಪತ್ರಿಕೆಯಲ್ಲಿ ವೀರೇಂದ್ರ ಸಿಂಪಿ ಅವರು "ಖೋಟ್ಟಿ ನಾಣ್ಯ" ಎಂಬ ಕತೆಯು ಪ್ರಕಟಗೊಂಡಿತು. ಇವರು ತಮ್ಮ ಸ್ನೇಹಿತ ವರ್ಗದೊಂದಿಗೆ ಯಾವುದೇ ವಿಷಯವನ್ನು ಮುಕ್ತ ಮನಸ್ಸಿನಿಂದ ಚರ್ಚಿಸುತ್ತಿದ್ದರು. ೧೯೫೭ರಲ್ಲಿ 'ಏಕಲವ್ಯ' ಎಂಬ ಹಿಂದಿ ನಾಟಕವನ್ನು ಅನುವಾದಿಸಿದರು. ಇವರಿಗೆ ಹೈಸ್ಕೂಲಿನಲ್ಲಿ ಬಹಳಷ್ಟು ಪರಿಣಾಮ ಬೀರಿದವರೆಂದರೆ ಜಾಗಿರದಾರ ಎಂಬ ಹೆಡ್ ಮಾಸ್ತರರು. ಇವರು ಸಂಸ್ಕೃತ, ಕನ್ನಡ, ಇಂಗ್ಲೀಷ್ ಭಾಷೆಯ ಪ್ರಕಾಂಡ ಪಂಡಿತರಾಗಿದ್ದರು. ಪದವಿ ಪೂರ್ವ ಶಿಕ್ಷಣವನ್ನು ಇಂಗ್ಲೀಷ್ ಮಾಧ್ಯಮದಲ್ಲಿ ಕಲಿಯಬೇಕಾದ ಅನಿವಾರ್ಯ ಪರಿಸ್ಥಿತಿ ವೀರೇಂದ್ರ ಸಿಂಪಿ ಅವರಿಗೆ ಒದಗಿಬಂದಿತ್ತು. ಮುಂದೆ ಅವರಿಗೆ ಇದೇ ಇಂಗ್ಲೀಷ್ ಸಾಹಿತ್ಯದತ್ತ ಒಲವು ಬೆಳೆಯಲು ಕಾರಣವಾಗಿ ಸ್ನಾತಕೋತ್ತರ ಪದವಿಯನ್ನು ಇಂಗ್ಲೀಷ್ ನಲ್ಲಿ ಪಡೆದುಕೊಂಡರು.

೧೯೫೯ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯು ಕಾಲೇಜು ವಿದ್ಯಾರ್ಥಿಗಳಿಗಾಗಿ ಒಂದು ಸ್ಪರ್ಧೆಯನ್ನು ಏರ್ಪಟಿಸಿತ್ತು. ಈ ಸ್ಪರ್ಧೆಯು ಧಾರವಾಡ, ಬೆಳಗಾಂವ, ಬಿಜಾಪುರ ಮತ್ತು ಕಾರವಾರ ವಿದ್ಯಾರ್ಥಿಗಳಿಗಾಗಿ ಮಾತ್ರ ಇತ್ತು. ಈ ಸ್ಪರ್ಧೆಯ ವಿಷಯವು "ಇಂದಿನ ವಿದ್ಯಾರ್ಥಿಗಳಲ್ಲಿ ಅಸಂತೋಷವೇಕೆ?" ಎಂಬು ದಾಗಿತ್ತು. ವೀರೇಂದ್ರ ಸಿಂಪಿಯವರು ಈ ಪ್ರಬಂಧವನ್ನು ಒಂದು ನೋಟು ಪುಸ್ತಕದಲ್ಲಿ ಬರೆದು ಅದನ್ನು ಪರಿಶೀಲಿಸಲು ತಮ್ಮ ನೆಚ್ಚಿನ ಪ್ರಾಧ್ಯಾಪಕರಾದ ಬಿ.ಟಿ.ಸಾಸನೂರರಿಗೆ ಒಪ್ಪಿಸಿದರು. ಸಾಸನೂರರು

'ಚೆನ್ನಾಗಿದೆ' ಸ್ಪರ್ಧೆಗೆ ಕಳಿಸು ಎಂದು ಹೇಳಿದ್ದರು. ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ವೀರೇಂದ್ರ ಸಿಂಪಿಯವರ ಪ್ರಬಂಧ ಪ್ರಥಮ ಸ್ಥಾನ ಪಡೆದುಕೊಂಡಿತು. ಇದರಿಂದ ಹರ್ಷಗೊಂಡ ಬಿ.ಟಿ.ಸಾಸನೂರರು 'ಶಾಹಬಾಶ್' ಎಂದು ಬೆನ್ನು ಚಪ್ಪರಿಸಿ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಮುನ್ನಡೆ ಸಾಧಿಸುವಂತೆ ಪ್ರೋತ್ಸಾಹಿಸಿದರು. ಹೀಗೆ ಸಾಗಿದ ಇವರ ಸಾಹಿತ್ಯ ಕೃಷಿ ಮುಂದೆ ೧೯೬೧ರಲ್ಲಿ ಶ್ರೀನಿವಾಸರ ಸಣ್ಣಕತೆಗಳ ಬಗ್ಗೆ ಲೇಖನ ಬರೆದರು. ಈ ಲೇಖನವು ಅಂದು ಕರ್ನಾಟಕ ವಿಶ್ವವಿದ್ಯಾಲಯ ಹಾಸ್ಟೇಲ್ ಮ್ಯಾಗಜೀನ್‌ನಲ್ಲಿ ಪ್ರಕಟಗೊಂಡಿತು. ಇದರಿಂದ ಕಾಲೇಜು ರಂಗದಿಂದಲೇ ಕಾವ್ಯ ಕ್ಷೇತ್ರದಲ್ಲಿ ಸ್ವಲ್ಪ ಹೆಸರು ಬಂದಿತು. ಅನೇಕ ದಿನಪತ್ರಿಕೆಗಳಿಗೆ ಮಾಸಪತ್ರಿಕೆಗಳಿಗೆ, ಅಂಕಣ ಬರಹ ಎಂಬ ಸಾಹಿತ್ಯದ ಪ್ರಕಾರವನ್ನು ಅಳವಡಿಸಿಕೊಂಡು ಸಮಾಜದ ನೈಜ ಚಿತ್ರಣವನ್ನು, ಜೀವನದ ಬಹುಮುಖಗಳ ಪರಿಚಯ ಮಾಡಿಕೊಡುತ್ತಿದ್ದರು. ಇದರಿಂದ ನವ್ಯ ಸಾಹಿತ್ಯದ ಪರಿಚಯವಾಗತೊಡಗಿತು. ಅಭ್ಯಾಸದ ಜೊತೆಯಲ್ಲಿ ಸಾಹಿತ್ಯದ ನಂಟು ಹಚ್ಚಿಕೊಂಡಿರುವುದಕ್ಕೆ ಅವರ ಪ್ರತಿಭೆಯೇ ಕಾರಣವಾಯಿತು.

### ಪ್ರಬಂಧಕಾರರಾಗಿ

ವೀರೇಂದ್ರ ಸಿಂಪಿಯವರು ವಿದ್ಯಾರ್ಥಿ ಜೀವನದಿಂದಲೇ ಸಾಹಿತ್ಯದಲ್ಲಿ ತುಂಬಾ ಅಭಿರುಚಿಯನ್ನು ಉಳ್ಳವರಾಗಿದ್ದರು. ವೃತ್ತಿಯಿಂದ ಪ್ರಾಧ್ಯಾಪಕರಾದರೂ, ಪ್ರವೃತ್ತಿಯಿಂದ ಕನ್ನಡ ಗದ್ಯ ಲೇಖಕರು. ಲಲಿತ ಪ್ರಬಂಧ, ವಿಮರ್ಶೆ, ವೈಚಾರಿಕ ಲೇಖನ, ಅಂಕಣ ಬರಹಗಳ ಮೂಲಕ ಪ್ರಸಿದ್ಧಿ ಪಡೆದರು. ಲಲಿತ ಪ್ರಬಂಧಗಳಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದರು. ಅದಕ್ಕಾಗಿಯೇ ಇವರು ನುರಿತ ಪ್ರಬಂಧಕಾರರೆಂದೇ ಖ್ಯಾತಿ ಹೊಂದಿದ್ದಾರೆ. ಸಾಹಿತ್ಯದಲ್ಲಿ ಸಂಶೋಧನಾತ್ಮಕ ವಿಷಯಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಒಂದು ಸಾಮಾನ್ಯ ವಿಷಯವನ್ನು ತೆಗೆದುಕೊಂಡು ಅದನ್ನು ಗಂಭೀರವಾಗಿ ಬರೆಯುವ ಕಲೆ ಅವರಲ್ಲಿದೆ. ಇವರು ಇಲ್ಲಿಯವರೆಗೆ ಒಟ್ಟು ಆರು ಲಲಿತ ಪ್ರಬಂಧ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವರ ಪ್ರಬಂಧಗಳಲ್ಲಿ ಒಳಗೊಂಡಿರುವ ವಿಚಾರಗಳು ತಮ್ಮದೇ ಆದ ಶೈಲಿಯಲ್ಲಿ ಅನುಭವದ ನೈಜ ಘಟನೆಗಳನ್ನಾಧರಿಸಿವೆ. ಅವರು ಪ್ರಕಟಿಸಿರುವ ಪ್ರಬಂಧ ಸಂಕಲನಗಳೆಂದರೆ, ೧. ಕಾಗದದ ಚೂರು, ೨. ಭಾವ ಮೈದುನ, ೩. ಸ್ವಚ್ಛಂದ ಮನದ ಸುಳಿದಾಟ, ೪. ಪರಿಸರ ಸ್ಪಂದನ, ೫. ಲಲಿತ ಪ್ರಬಂಧಗಳು, ೬. ಆಯ್ದ ಲಲಿತ ಪ್ರಬಂಧಗಳು. ಇವುಗಳಲ್ಲಿ 'ಭಾವ ಮೈದುನ' ಸಂಕಲನಕ್ಕೆ ೧೯೮೧ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಬಹುಮಾನ ದೊರೆತಿದೆ. ಅಲ್ಲದೆ 'ಸ್ವಚ್ಛಂದ ಮನದ ಸುಳಿದಾಟ' ಸಂಕಲನ ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಶಿವಾಜಿ ವಿಶ್ವವಿದ್ಯಾಲಯದ ಬಿ.ಎ.ಪ್ರಥಮ ಹಾಗೂ ಬಿ.ಎಸ್ಸಿ. ಪ್ರಥಮ ವರ್ಷಕ್ಕೆ ಕಡ್ಡಾಯ ಪಠ್ಯಪುಸ್ತಕವಾಗಿ ೧೯೮೪ ರಿಂದ ೧೯೯೦ರವರೆಗೆ ಪ್ರಸ್ತುತವಿತ್ತು. ಇವರು ಇಲ್ಲಿಯವರೆಗೆ ಒಟ್ಟು ೫೦ ಲಲಿತ ಪ್ರಬಂಧಗಳನ್ನು ಬರೆದಿದ್ದಾರೆ.

## ಇತರೆ ಸಾಹಿತ್ಯ ಕೃಷಿ

ವೀರೇಂದ್ರ ಸಿಂಪಿ ಅವರನ್ನು ಒಬ್ಬ ಲಲಿತ ಪ್ರಬಂಧಕಾರರೆಂದು ಗುರುತಿಸಿದರೂ ಅವರು ಇನ್ನೂಳಿದ ಸಾಹಿತ್ಯದಲ್ಲಿ ಸಹ ತಮ್ಮನ್ನು ತೊಡಗಿಸಿಕೊಂಡಿದ್ದರು. ಅದರಲ್ಲಿ ಮುಖ್ಯವಾಗಿ 'ಯೋಗಾರಂಭ' ಎಂಬ ಅರವಿಂದರು ಬರೆದ ಇಂಗ್ಲೀಷ್ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿ ಅನುವಾದಕರಾದರು. 'ಇಂಡಿ ತಾಲೂಕು ದರ್ಶನ', 'ಗಾಯ್ ಡಿ ಮೋಪಾಸಾನ ಕತೆಗಳು' 'ಸಿಂಪಿ ಲಿಂಗಣ್ಣನವರ ಸಾಹಿತ್ಯ'ವನ್ನು ಬೆಳಕಿಗೆ ತರುವಲ್ಲಿ ಸಫಲವಾದವು. ಹಾಗೆ 'ಮಾಸ್ತಿ ವೆಂಕಟೇಶ ಅಯ್ಯಂಗಾರ', 'ಚನ್ನಬಸವಣ್ಣ', 'ಆರ್.ವಿ.ಬೀಡಪ್'. ಅಯ್ಯಕ್ಕಿ ಮಾರಯ್ಯ', 'ಮಾದಾರ ಚನ್ನಯ್ಯ' ಮುಂತಾದವರ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. 'ಸುಖ ಸಾಧನ', 'ಜೀವನವೆಂದರೇನು' ಎಂಬ ವಿಚಾರ ಸಾಹಿತ್ಯವನ್ನು ಬರೆದಿದ್ದಾರೆ. 'ಬೀದರ ಜಿಲ್ಲಾ ದರ್ಶನ', 'ಬೀದರ ಜಿಲ್ಲಾ ಸ್ವಾತಂತ್ರ ಹೋರಾಟಗಾರರು', ಇವುಗಳು ಸಂಪಾದಿತ ಕೃತಿಗಳು. ಹಾಗೆ 'ಹತ್ತು ಪಾಶ್ಚಾತ್ಯ ಕಾದಂಬರಿಗಳು', 'ಸಿಂಪಿ ಲಿಂಗಣ್ಣ ಚರಿತ್ರೆ', 'ಸಿದ್ದರೂಢ ಮಹಾಸ್ವಾಮಿಗಳು' ಮುಂತಾದ ಮಹತ್ವಪೂರ್ಣ ಲೇಖನಗಳ ಮೂಲಕ ತಮ್ಮ ಸಾಹಿತ್ಯ ವೈಖರಿಯನ್ನು ತೋರಿಸಿದ್ದಾರೆ. ಹಾಗೇನೆ 'ದಿಕ್ಸೂಚಿ'ಯಂತಹ ಮಾಸಪತ್ರಿಕೆಯಲ್ಲಿ ಸುಮಾರು ೭೫ಕ್ಕಿಂತ ಹೆಚ್ಚು ಅಂಕಣ ಬರಹದ ಲೇಖನಗಳನ್ನು ಬರೆದು, ವಿಚಾರ ಸಾಹಿತ್ಯದಲ್ಲಿ ತಮ್ಮ ಚಾಪನ್ನು ಮೂಡಿಸಿದ್ದಾರೆ. ಅದಕ್ಕಾಗಿಯೇ ಇವರಿಗೆ ಕನ್ನಡ ಸಾಹಿತ್ಯ ಅಕಾಡೆಮಿಯಿಂದ ೧೯೯೭ರಲ್ಲಿ ಗೌರವ ಪ್ರಶಸ್ತಿ ದೊರೆತಿದೆ.

"ವೀರೇಂದ್ರ ಸಿಂಪಿಯವರು ಲಲಿತ ಪ್ರಬಂಧಗಳ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಂತೆ ಇತರ ಸಾಹಿತ್ಯ ಕೃಷಿಯಲ್ಲಿ ಬಹಳ ಕಡಿಮೆ ತೊಡಿಗಿಸಿಕೊಂಡರು. ಅವರು ಕತೆಗಳು ಸಾಹಿತ್ಯ ಕೃಷಿಯಲ್ಲಿ ಹಲವಾರು ಕತೆಗಳನ್ನು ರಚಿಸಿದರೂ ಅವುಗಳನ್ನು ಬೆಳಕಿಗೆ ತರುವ ಗೋಜಿಗೆ ಹೋಗಲೇ ಇಲ್ಲ. ಇದರಿಂದ ಅವರಲ್ಲಿಯ ಕತೆಗಾರನೊಬ್ಬ ಹೇಳ ಹೆಸರಿಲ್ಲದಂತೆ ಮಾಯವಾದನು. ಅದರ ಬದಲಾಗಿ ದೂರದ ಪ್ರಯಾಣ ಮಾಡುವಾಗಿನ ಅನುಭವಗಳೆಲ್ಲವನ್ನು ಹಾಗೂ ದಿನ ನಿತ್ಯದ ತಮ್ಮ ಸುತ್ತಲಿನ ಸಮಾಜದ ನೈಜ ಘಟನೆಗಳನ್ನು ಆಧರಿಸಿ ಲಲಿತ ಪ್ರಬಂಧದ ಚೌಕಟ್ಟಿನಲ್ಲಿ ಭಟ್ಟಿ ಇಳಿಸುವ ಕಾರ್ಯದಿಂದ ಒಬ್ಬ ಸಮರ್ಥ ಲಲಿತ ಪ್ರಬಂಧಕಾರರಾಗಿ ಹೊರ ಹೊಮ್ಮಿದರು."[೩]

## ಸಂಸಾರಿಕ ಜೀವನ

ವೀರೇಂದ್ರ ಸಿಂಪಿಯವರು ನೌಕರಿಗೆ ಸೇರಿದ ಪ್ರಾರಂಭಿಕ ವರ್ಷಗಳಲ್ಲೇ ಅವರ ತಾಯಿ ತಂದೆಯವರು ಇವರಿಗೆ ಮದುವೆ ಮಾಡಲು ಮಗನನ್ನು ಕರೆದುಕೊಂಡು ಅಲ್ಲಲ್ಲಿ ಹೆಣ್ಣು ನೋಡಿ ಬಂದರು. ಹುಡುಗ, ಎಂ.ಎ.ಪಾಸಾಗಿದ್ದಾನೆ ಉಪನ್ಯಾಸಕ ನೌಕರಿಯಲ್ಲಿದ್ದಾನೆ. ತಾಯಿ ಒಳ್ಳೆಯವಳು, ತಂದೆ ಹಿರಿಯ ಜಾನಪದ ಸಾಹಿತಿ ಎಂದು ತಿಳಿದರೂ ವರನು ವಿಕಲಾಂಗನಾಗಿದ್ದನೆ ಎಂದು ಯಾರು ವೀರೇಂದ್ರ ಸಿಂಪಿಯವರನ್ನು ಗಣನೆಗೆ ತೆಗೆದುಕೊಳ್ಳಲೇ ಇಲ್ಲ. ಇದರಿಂದ ಲಿಂಗಣ್ಣನವರಿಗೆ ಪರಿಸ್ಥಿತಿಯ

ಅರಿವಾಗಿ ಕೊನೆಗೆ ತಮ್ಮ ಸೋದರ ಮಾವನ ಮಗಳಾದ 'ಸುಲಭವ್ವ'ನನ್ನು ವೀರೇಂದ್ರ ಸಿಂಪಿಯವರಿಗೆ ಕೊಟ್ಟು ೧೯೬೬ರಲ್ಲಿ ಮದುವೆ ಮಾಡಿದರು. ವೀರೇಂದ್ರರ ತಾಯಿಯ ಹೆಸರು 'ಸುಲಭವ್ವ' ಇದ್ದ ಕಾರಣ ಇವರು ತಮ್ಮ ಹೆಂಡತಿಯ ಹೆಸರನ್ನು 'ಪಾರ್ವತಿ' ಎಂದು ಬದಲಾಯಿಸಿಕೊಂಡರು.

ಹೆಂಡತಿಯಾದ ಪಾರ್ವತಿಯನ್ನು ವೀರೇಂದ್ರರು "ದೇವಾತಾ ಸ್ತ್ರೀ"ಯೆಂದು ಪರಿಗಣಿಸಿದ್ದಾರೆ. ಅವರು ಅಷ್ಟೇ ಗೌರವದಿಂದ ತಮ್ಮ ಸೌಭಾಗ್ಯವತಿಯನ್ನು ನೋಡಿಕೊಂಡಿದ್ದಾರೆ. ಅವರ ದಾಂಪತ್ಯ ಹಾಲು ಜೇನಿನಂತೆ ಇದೆ. ಹದಿನಾಲ್ಕು ಹದಿನೈದು ವರ್ಷದ ಪಾರ್ವತಿಯವರು ಗಂಡನ ಮನೆಗೆ ಬಂದಾಗ ಇನ್ನೂ ಅನನುಭವಿಯಾಗಿದ್ದರು. ಈ ಸಮಯದಲ್ಲಿ ಸೋದರತ್ತೆ ಗುರುಬಾಯಿ ಕೇಶೆಟ್ಟಿಯವರು ಇವರಿಗೆ ಮಾರ್ಗದರ್ಶಿಯಾದರು. ಮದುವೆಯಾದ ಹೊಸತರಲ್ಲಿ ಮನೆಯಲ್ಲಿ ಸೋದರ ಮಾವಂದಿರ ಮಕ್ಕಳು, ಮೂರು ಜನ ತಮ್ಮಂದಿರು, ಅಕ್ಕನ ಮಕ್ಕಳೂ, ದೊಡ್ಡಪ್ಪನ ಮೊಮ್ಮಕ್ಕಳು, ತಮ್ಮನ ಮಕ್ಕಳು ಹೀಗೆ ಇವರೆಲ್ಲರಿಂದ ತುಂಬಿದ ಮನೆಯಲ್ಲಿ ಪಾರ್ವತಿಯವರು ಅವರೆಲ್ಲರ ಸೇವೆಯನ್ನು ಮಾಡುತ್ತಾ ನಿಜವಾದ ದೇವತಾ ಸ್ತ್ರೀಯಂತೆ ಕಂಗೊಳಿಸಿದರು. ಅದಕ್ಕಂತೆ ಸಿಂಪಿಯವರು "ಅವಳು ಕೇವಲ ನನ್ನ ಪತ್ನಿ ಮಾತ್ರವಲ್ಲ ಮಾರ್ಗದರ್ಶಕಿ, ತತ್ವಜ್ಞಾನಿ, ಹಾಗೂ ಗೆಳತಿಯೂ ಆಗಿದ್ದಾಳೆ. ನನ್ನ ನೂರೆಂಟು ಕೊರತೆಗಳನ್ನು, ನೂರೆಂಟು ಪ್ರಮಾದಗಳನ್ನು, ನನ್ನ ನೂರೆಂಟು ಅವಿವೇಕತನದ ದೌರ್ಜನ್ಯಗಳನ್ನು ಹೊಟ್ಟೆಯಲ್ಲಿ ಹಾಕಿ ಕೊಂಡು ಪ್ರತಿ ಸಮುದ್ರವೇ ಆಗಿದ್ದಾಳೆ. ಹೀಗೆ ಬಾಳು ಒಂದು ಕಡೆ ನನಗೆ ಅಂಗವಿಕಲತೆಯನ್ನು ಕೊಟ್ಟಿದೆ; ಅದನ್ನು ತುಂಬಿ ಕೊಡಲು ಇನ್ನೊಂದು ಕಡೆ ತಪಸ್ವಿನಿಯಾದ ಪತ್ನಿಯನ್ನು ಕೊಟ್ಟಿದೆ. ಅಂತೆಯೇ ನನ್ನ ಜೀವನ ನಿರಾತಂಕವಾಗಿ ಮುಂದೆ ಸಾಗಿದೆ"[೪] ಎಂದು ಹೇಳಿಕೊಂಡಿದ್ದಾರೆ.

ವೀರೇಂದ್ರ ಸಿಂಪಿ ಹಾಗೂ ಪಾರ್ವತಿ ದಂಪತಿಗಳಿಗೆ ೧೯೬೯ರಲ್ಲಿ ಜೇಷ್ಠ ಸುಪುತ್ರಿಯಾಗಿ ರೇಖಾ ಜನಿಸಿದರು. ಇವರಿಗೆ ಬಿ.ಎ ಬಿ.ಎಡ್.ಶಿಕ್ಷಣ ಕೊಡಿಸಿ ಚಡಚಣದ ಮಲ್ಲಪ್ಪ ಕೇಶೆಟ್ಟಿಯವರಿಗೆ ವಿವಾಹ ಮಾಡಿ ಕೊಟ್ಟಿದ್ದಾರೆ. ಸಿಂಪಿಯವರಿಗೆ ಸುಪುತ್ರನಾಗಿ ಎರಡನೇ ಮಗನಾಗಿ ಪ್ರವೀಣ ಎಂಬುವರು ಹಲವಾರು ವರ್ಷಗಳ ನಂತರ ೧೯೭೭ರಲ್ಲಿ ಜನಿಸಿದರು. ಇವರು ಆಯುರ್ವೇದದಲ್ಲಿ ಎಂ.ಡಿ. ಪದವಿ ಪಡೆದು ಕಲಿತ ಕಾಲೇಜಿನಲ್ಲಿಯೇ ಪ್ರಾಧ್ಯಾಪಕರಾಗಿದ್ದಾರೆ. ಇವರಿಗೆ ಕಾವ್ಯ ಎಂಬ ಕನ್ನೆಯೊಡನೆ ವಿವಾಹವಾಗಿದೆ. ಇತ್ತೀಚಿಗೆ 'ಅರವಿಂದ' ಎಂಬ ಗಂಡು ಮಗು ಜನಿಸಿದೆ. ಇದರಿಂದಾಗಿ ವೀರೇಂದ್ರ ಸಿಂಪಿಯವರು ಈಗ ಅಜ್ಜರಾಗಿದ್ದಾರೆ.

## ವೃತ್ತಿ ಮತ್ತು ಸೇವೆ

ವೀರೇಂದ್ರ ಸಿಂಪಿಯವರು ಉಪನ್ಯಾಸಕ ವೃತ್ತಿಯನ್ನೇ ತಮ್ಮ ಜೀವನೋಪಾಯಕ್ಕೆ ಆಯ್ದುಕೊಂಡರು. ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಪದವಿಯನ್ನು ಇಂಗ್ಲೀಷಿನಲ್ಲಿ ಪಡೆದ ನಂತರ ಹೈದರಾಬಾದಿನ ಅವರ ಗೆಳೆಯರಾದ ಬಿ.ಟಿ.ದೇಸಾಯಿಯವರಿಂದ ಸಾಂಗ್ಲಿ ಕಾಲೇಜಿನಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರೊಬ್ಬರು

ಬೇಕಾಗಿದ್ದಾರೆ ಎಂಬ ಮಾಹಿತಿ ತಿಳಿದು, ಇವರು ಅಲ್ಲಿಗೆ ಒಂದು ಅರ್ಜಿ ಸಲ್ಲಿಸಿ ೧೯೬೨ರಲ್ಲಿ ಆಯ್ಕೆಯಾದರು. ಸುಮಾರು ೨೦೦ ರೂ.ಗಳ ವೇತನದ ಮೇಲೆ ನಾಲ್ಕು ತಿಂಗಳು ಕೆಲಸ ಮಾಡಿದರು. ಅಲ್ಲಿ ಅವರ ಸೇವೆಯೂ ಒಂದೇ ಟರ್ಮಿನ ಅವಧಿಗೆ ಇದ್ದುದರಿಂದ ಸಾಂಗ್ಲಿ ಬಿಟ್ಟು, ಚಡಚಣಕ್ಕೆ ವಾಪಸಾದರು. ಆ ಮೇಲೆ ಬೀದರಿನ ಬಿ.ವಿ.ಭೂಮರೆಡ್ಡಿ ಕಾಲೇಜಿನಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರು ಬೇಕಾಗಿದ್ದಾರೆ ಎಂಬ ಜಾಹಿರಾತು ನೋಡಿ ಆ ಹುದ್ದೆಗೆ ಅರ್ಜಿ ಸಲ್ಲಿಸಿದರು. ಆಗ ಆ ಕಾಲೇಜಿನಲ್ಲ ಬಿ.ಟಿ.ಸಾಸನೂರರು ಪ್ರಾಚಾರ್ಯರಾಗಿದ್ದರು. ಸಾಸನೂರರು ಸಿಂಪಿ ಲಿಂಗಣ್ಣನವರಿಗೆ ಆತ್ಮೀಯರಾಗಿದ್ದರು. ಅಂಗವಿಕಲರಾದ ವೀರೇಂದ್ರರನ್ನು ನೋಡಿ ಅಂಗವಿಕಲರಾದ ಇವರು ಉಪನ್ಯಾಸಕ ವೃತ್ತಿ ನಿಭಾಯಿಸಬಲ್ಲರೇ? ಎಂಬ ಅನುಮಾನ ವ್ಯಕ್ತಪಡಿಸಿದರೂ ಇವರ ಆಗಾಧವಾದ ಪ್ರತಿಭೆ ಕಂಡು ಉಪನ್ಯಾಸಕ ವೃತ್ತಿಗೆ ಆಯ್ಕೆ ಮಾಡಿಕೊಂಡರು.

ವೀರೇಂದ್ರ ಸಿಂಪಿಯವರು ಬಿ.ವಿ.ಬಿ. ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇರಿದ ಪ್ರಾರಂಭದಲ್ಲಿಯೇ ಅವರಿಗೆ "ಸಾಹಿತಿಯಾಗಿ ಗಾಂಧೀಜಿ" (Gandhiji as a man of letter) ಎಂಬ ವಿಷಯದ ಮೇಲೆ ಮಾತನಾಡಲು ತಿಳಿಸಲಾಯಿತು. ಈ ವಿಷಯದ ಮೇಲೆ ಸಿಂಪಿಯವರು ಇಂಗ್ಲೀಷಿನಲ್ಲಿ ನಿರ್ಭೀತರಾಗಿ ನಿರರ್ಗಳವಾಗಿ ಮಾತನಾಡಿ ಸಹೋದ್ಯೋಗಿ ಉಪನ್ಯಾಸಕರು ಹಾಗೂ ವಿದ್ಯಾರ್ಥಿಗಳ ಮೆಚ್ಚುಗೆಗೆ ಪಾತ್ರರಾದರು. ವೀರೇಂದ್ರರು ಉಪನ್ಯಾಸಕ ವೃತ್ತಿಗೆ ಸೇರಿದ ಹೊಸತರದಲ್ಲಿಯೇ ಅವರ ತಂದೆ ಲಿಂಗಣ್ಣನವರು 'ಶ್ರೀ ಅರವಿಂದರ "Elements of yoga" ಎಂಬ ಕೃತಿಯನ್ನು ಕನ್ನಡಕ್ಕೆ ಅನುವಾದಿಸಲು ಸೂಚಿಸಿದರು. ಅದನ್ನು ವೀರೇಂದ್ರರರು. "ಯೋಗಾರಂಭ" ಎಂಭ ಶೀರ್ಷಿಕೆಯಡಿ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದರು.

ಬಿ.ಎ. ಪ್ರಥಮ ವರ್ಷದ ವಿದ್ಯಾರ್ಥಿಗಳಿಗೆ ಸಿಂಪಿಯವರು ಬೋಧಿಸುತ್ತಿದ್ದ ಇಂಗ್ಲೀಷ್ ಪಠ್ಯಪುಸ್ತಕದಲ್ಲಿ ಐದಾರು ಲಲಿತ ಪ್ರಬಂಧಗಳು ಇದ್ದವು. ಇವುಗಳನ್ನೆಲ್ಲಾ ಆಳವಾಗಿ ಅಧ್ಯಯನ ಮಾಡಿ ವಿದ್ಯಾರ್ಥಿಗಳಿಗೆ ಸರಳವಾಗಿ ಸುಲಭವಾಗಿ ಬೋಧಿಸುತ್ತಿದ್ದರು. ಇದೇ ಸಮಯದಲ್ಲಿ ಇಂತಹ ಪ್ರಬಂಧಗಳನ್ನು ಕನ್ನಡದಲ್ಲಿ ಏಕೇ ಬರೆಯಬಾರದೆಂಬ ಆಲೋಚನೆ ಬಂದು, ಅವತ್ತೇ ಅವರು ಕನ್ನಡದಲ್ಲಿ ಲಲಿತ ಪ್ರಬಂಧ ಬರೆಯಲು ಉತ್ಸಾಕರಾದರು. ಅವರು ಬೋಧಿಸುತ್ತಿದ್ದ ಇಂಗ್ಲೀಷ್ ಪಠ್ಯ ಪುಸ್ತಕದಲ್ಲಿಯ 'ಜಿ.ಕೆ.ಚೆಸ್ಟರ್ಟನ್' ಎಂಬುವರ 'A Piece of chalk' (ಖಡುವಿನ ತುಂಡು) ಎಂಬ ಲಲಿತ ಪ್ರಬಂಧವನ್ನು ಓದಿದ ಬಳಿಕ ಅದು ಇವರಿಗೆ ಬಹುವಾಗಿ ಹಿಡಿಸಿತು. ಇದೇ ಮಾದರಿಯಲ್ಲಿ ಅವರು 'ಕಾಗದದ ಚೂರು' ಎಂಬ ಲಲಿತ ಪ್ರಬಂಧ ಬರೆಯಲು ಸ್ಫೂರ್ತಿಯಾಯಿತು. ಹೀಗೆ ಸಿಂಪಿಯವರಲ್ಲಿ ಉಪನ್ಯಾಸಕ ವೃತ್ತಿಯ ಜೊತೆಯಲ್ಲಿ ಸಾಹಿತ್ಯವು ಪ್ರವೃತ್ತಿಯಾಗಿ ಬೆಳೆಯತೊಡಗಿತು. ವರ್ಗದಲ್ಲಿ ಬೋಧಿಸುವಾಗ ಪಡೆದ ಅನುಭವದ ಜೊತೆಗೆ ಅವರು ಮಾಡಿದ ಇಂಗ್ಲೀಷ್ ಅಧ್ಯಯನ ಹಾಗೂ ಸಮಾಜದ ಆಗು-ಹೋಗುಗಳು ಅವರನ್ನು ಅನುಭವಿ ಹರಟೆಗಾರರನ್ನಾಗಿ ಪರಿವರ್ತಿಸಿದವು."[೯]

ವೀರೇಂದ್ರ ಸಿಂಪಿಯವರು ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಉಪನ್ಯಾಸಕರಾಗಿ ಸಹೋದ್ಯೋಗಿಗಳೊಂದಿಗೆ ಉತ್ತಮ ಬಾಂಧವ್ಯ ಇರಿಸಿಕೊಂಡಿದ್ದರು. ವೃತ್ತಿಯಿಂದ ಉಪನ್ಯಾಸಕರಾದರೂ ವಿವಿಧ ಸಾಮಾಜಿಕ, ಶೈಕ್ಷಣೀಕ, ಸಾಂಸ್ಕೃತಿಕ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಬಂಧ ಹೊಂದಿ ಉತ್ತಮ ವಾಗ್ಮಿ ಹಾಗೂ ಭಾಷಣಕಾರರಾಗಿ, ಸಾಮಾಜಿಕ ಸಂಘಟಕ ಶಕ್ತಿಯಾಗಿ, ಮಾನವೀಯ ಮೌಲ್ಯಗಳ ಸಕಾರ ಮೂರ್ತಿಯಾಗಿ, ಸಮಾಜ ಸೇವಕರಾಗಿ, ಬೋಧನೆಯ ವೃತ್ತಿಯನ್ನು ನಿಭಾಯಿಸಿದ ಇವರು ಆದರ್ಶ ಶಿಕ್ಷಕರಾಗಿ ಕಂಡುಬರುತ್ತಾರೆ.

ವೀರೇಂದ್ರ ಸಿಂಪಿಯವರು ಬಿ.ವಿ.ಭೂಮರೆಡ್ಡಿ ಕಾಲೇಜಿನಲ್ಲಿ ಸತತವಾಗಿ ೩೨ ವರ್ಷಗಳ ಕಾಲ ಅಂದರೆ - ೧೯೬೩-೯೭ರವರೆಗೆ ಇಂಗ್ಲೀಷ್ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದರು. ನಂತರ ತಮ್ಮ ನಿವೃತ್ತಿ ಜೀವನದಲ್ಲಿಯೂ ಬೀದರಿನ 'ಶ್ರೀ ಚಂದ್ರಪ್ಪ ಗುರುಶೆಟ್ಟಿ' ಕಾಲೇಜಿನಲ್ಲಿ ೧೯೯೯ ರಿಂದ ೨೦೦೪ರವರೆಗೆ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಈಗ ಇವರು ಅನಾರೋಗ್ಯ ನಿಮಿತ್ತ ನಿವೃತ್ತಿಯನ್ನು ಪಡೆದು ತಮ್ಮ ಸಾಹಿತ್ಯ ಕೃಷಿಯೊಂದಿಗೆ ಜೀವನ ಸಾಗಿಸುತ್ತಿದ್ದಾರೆ. ಬಿಡುವಿಲ್ಲದ ಸಮಯದಲ್ಲಿಯೂ ಇವರ ಸಾಹಿತ್ಯ ಕೃಷಿ ನಿಂತಿಲ್ಲ. ಒಳ್ಳೆಯ ಕೃತಿ ರಚನೆಯಿಂದ ಬೇರೊಬ್ಬರಿಗೆ ಅನುಕರಣೀಯವಾಗುತ್ತದೆಂದು ನಂಬಿದ್ದಾರೆ. ಆದಕ್ಕಂತಲೇ ಅವರು ಆಡಂಬರದ ಜೀವನಕ್ಕೆ ಬೆಲೆ ಕೊಡದೆ ವ್ಯಕ್ತಿಗಿಂತ ತತ್ವಶ್ರೇಷ್ಠವೆಂದು ನಂಬಿ ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ಸಮಾಜಿಕ ಮನ್ನಣೆ ಪಡೆದು ಪರಿಶುದ್ಧ ಬದುಕು ಸಾಗಿಸುತ್ತಾ ಬೇರೊಬ್ಬರಿಗೆ ಮಾರ್ಗದರ್ಶಕರಾಗಿದ್ದಾರೆ.

### ಗೌರವ ಪ್ರಶಸ್ತಿಗಳು

ಕನ್ನಡ ಸಾಹಿತ್ಯದಲ್ಲಿ ತಮ್ಮ ಅಪೂರ್ವವಾದ ಬರವಣಿಗೆಯ ಮೂಲಕ ಬೀದರ ಜಿಲ್ಲೆಯ ಸಾಹಿತ್ಯಿಕ, ಸಾಂಸ್ಕೃತಿಕ ವಲಯದಲ್ಲಿ ತಮ್ಮನ್ನು ತೊಡಗಿಸಿಕೊಂಡು, ಕನ್ನಡ ಪಡೆಯನ್ನು ಕಟ್ಟಿ ನೀರೆರೆದು, ಪೋಷಿಸಿದರು. ಕನ್ನಡ ಪ್ರೇಮವನ್ನು ನಾಡಿನ ಅಭಿಮಾನವನ್ನು, ಜನರ ಪ್ರೀತಿ, ಸ್ನೇಹವನ್ನು ಪಡೆದ ಹಿರಿಯ ಜೀವಿ. ಸದಾ ಒಳಿತನ್ನೆ ಬಯಸುವ ಇವರು ಯಾವುದೇ ಅಧಿಕಾರ ಪ್ರಶಸ್ತಿಗಳಿಗೆ ಆಸೆ ಪಟ್ಟವರಲ್ಲ. ಆದರೂ ಇವರ ಪ್ರತಿಭೆಗೆ ತಕ್ಕಂತೆ ಹಲವಾರು ಪ್ರಶಸ್ತಿ ಗೌರವ ಸ್ಥಾನಮಾನಗಳು ಲಭಿಸಿವೆ.

೧. ಭಾವಮೈದುನ : ಲಲಿತ ಪ್ರಬಂಧಗಳ ಸಂಕಲನಕ್ಕೆ 'ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ'- ೧೯೮೧

೨. ಸ್ವಚ್ಛಂದ ಮನದ ಸುಳಿದಾಟ : ೧೯೮೪ ರಿಂದ ೧೯೮೬ರವರೆಗೆ. ೧೯೮೭ ರಿಂದ ೧೯೯೦ರವರೆಗೆ ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಶಿವಾಜಿ ವಿಶ್ವವಿದ್ಯಾಲಯದ ಬಿ.ಎ.I ಮತ್ತು ಬಿ.ಎಸ್ಸಿ.I ವಿದ್ಯಾರ್ಥಿಗಳಿಗೆ ಕಡ್ಡಾಯದ ಪಠ್ಯಪುಸ್ತಕ.

೩. ಪರಿಸರ ಸ್ಪಂದನ : ೧೯೯೮ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ಪ್ರೋತ್ಸಾಹ ಬಹುಮಾನ.

೪. ಗೌರವ ಪ್ರಶಸ್ತಿ : ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ೧೯೯೭ರ ಗೌರವ ಪ್ರಶಸ್ತಿ.

೫. ೧೯೯೦ರಲ್ಲಿ ಬೀದರ ಜಿಲ್ಲಾ ೩ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ.

೬. ಕಾಯಕ ಸನ್ಮಾನ ಪ್ರಶಸ್ತಿ : ೨೦೦೦ನೇ ವರ್ಷದ ಉದಯೋನ್ಮುಖ ಯುವ ಬರಹಗಾರರ ಬಳಗ ಗುಲ್ಬರ್ಗಾ.

೭. ಪ್ರಭುರಾವ ಕಂಬಳಿವಾಲೆ : ಕರ್ನಾಟಕ ಬರಹಗಾರರು ಮತ್ತು ಕಲಾವಿದರ ಸಂಘ ಬೀದರ ಇವರ ಪ್ರಶಸ್ತಿ.

೮. ೧೯೯೨ ರಿಂದ ೧೯೯೫ರವರೆಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯ ಮತ್ತೆ ೧೯೯೮-೨೦೦೧ರವರೆಗೆ

೯. ೨೦೦೧ರಲ್ಲಿ ಬಿಜಾಪುರ ಜಿಲ್ಲಾ ೮ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ.

೧೦. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಜಿಲ್ಲಾ ಗೌರವಾಧ್ಯಕ್ಷ, ಬೀದರ ಜಿಲ್ಲೆ.

೧೧. ಅಖಿಲ ಕರ್ನಾಟಕ ಶಕ್ತಿ ಕೇಂದ್ರದ ಬೀದರ ಜಿಲ್ಲಾ ಗೌರವಾಧ್ಯಕ್ಷ.

೧೨. ವೀರೇಂದ್ರ ಸಿಂಪಿಯವರ ಬದುಕು ಬರಹದ ಮೇಲೆ ಮಹನಂದಾ ಶಿವಶರಣಪ್ಪ ಅವರು ಎಂ.ಫಿಲ್. ಮಾಡಿದ್ದಾರೆ.

೧೩. ವೀರೇಂದ್ರ, ಸಿಂಪಿಯವರ ಅಭಿಮಾನಿಗಳು, ಸ್ನೇಹಿತರು, ವಿದ್ಯಾರ್ಥಿಗಳು ಸೇರಿ. ಕನ್ನಡ ಪ್ರಗತಿ ಸಂಘದ ಅಡಿಯಲ್ಲಿ "ಲಲಿತಾರವಿಂದ" ಎಂಬ ಅಭಿನಂದನ ಗ್ರಂಥ ಸಮರ್ಪಣೆ - ೨೦೦೭.

ಹೀಗೆ, ಹತ್ತು ಹಲವಾರು ಗೌರವ ಪ್ರಶಸ್ತಿಗಳು. ಇವರನ್ನು ಹುಡುಕಿಕೊಂಡು ಬಂದಿವೆ. ಬರುತ್ತಲಿವೆ. ಅವರ ಸರಳ, ಮುಗ್ಧ ಮನೋಭಾವದ ಉದಾತ್ತ ಜೀವನ ಸಾಹಿತ್ಯ ಪ್ರೀತಿಯೊಂದಿಗೆ ಬರಹಗಳ ಮೂಲಕ ಸಾಹಿತ್ಯ ಕೃಷಿ ಸಾಗಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಒಂದು ಸ್ಥಾನ ಪಡೆದುಕೊಂಡಿದ್ದಾರೆ. ವೃತ್ತಿಯಲ್ಲಿ ಪ್ರಾಧ್ಯಾಪಕರಾದರೂ ಪ್ರವೃತ್ತಿಯಲ್ಲಿ ಖ್ಯಾತ ಸಾಹಿತಿಗಳಾಗಿದ್ದಾರೆ.

**ಅಡಿಟಿಪ್ಪಣಿಗಳು**

೧. 'ಲಲಿತಾರವಿಂದ', ಲಲಿತ ಪ್ರಬಂಧ ಶಿಲ್ಪಿ ವೀರೇಂದ್ರಸಿಂಪಿ, ಪು.೨೪

೨. ಅದೇ, ಪು.೩೨,

೩. ಅದೇ, ಪು.೪೭

೪. ಅದೇ, ಬದುಕು ಕಲಿಸಿದ ಪಾಠಗಳು, ಪು.೩

೫. ಅದೇ, ಪು.೪೬

೩

# ಲಲಿತ ಪ್ರಬಂಧ ಪರಂಪರೆ ಮತ್ತು ವೀರೇಂದ್ರ ಸಿಂಪಿ

ಕನ್ನಡ ಸಾಹಿತ್ಯದಲ್ಲಿ ಹೊಸ ಸಾಹಿತ್ಯ ರೂಪಗಳು ದಿನದಿಂದ ದಿನಕ್ಕೆ ವೈವಿಧ್ಯಮಯವಾಗಿ ಬೆಳೆಯುತ್ತಿವೆ. ಹೊಸಗನ್ನಡ ಸಾಹಿತ್ಯದಲ್ಲಿ ಅನೇಕ ಪಾಶ್ಚಿಮಾತ್ಯ ಸಾಹಿತ್ಯ ರೂಪಗಳು ಕನ್ನಡದಲ್ಲಿ ಬೆಳೆದು ಬಂದವು. ಅವುಗಳೆಂದರೆ ಕಾದಂಬರಿ, ಕಾವ್ಯ, ಸಣ್ಣಕತೆ, ಪ್ರಬಂಧ, ವಿಮರ್ಶೆ, ಚುಟುಕು, ಆತ್ಮಚರಿತ್ರೆ, ಜೀವನ ಚರಿತ್ರೆ, ಇಂಥ ಹತ್ತು ಹಲವಾರು ಸಾಹಿತ್ಯ ರೂಪಗಳು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಂದರ್ಭಕ್ಕೆ ತಕ್ಕಂತೆ ಬೆಳೆದುಬಂದವು. ಅಷ್ಟೇ ಅಲ್ಲದೆ, ಆಧುನಿಕ ಕನ್ನಡ ಸಾಹಿತ್ಯವು ಪ್ರಮುಖವಾಗಿ ನವೋದಯ, ನವ್ಯ, ಪ್ರಗತಿಶೀಲ, ದಲಿತ-ಬಂಡಾಯ ಎಂಬ ಸಾಹಿತ್ಯ ಘಟ್ಟಗಳಾಗಿ ಅತ್ಯಂತ ಜನಪ್ರಿಯವಾಗಿ ಕನ್ನಡ ಸಾಹಿತ್ಯ ಬೆಳೆದುಬಂದವು. ಇದರ ಫಲವೇ ಇಂದು ಲಲಿತ ಪ್ರಬಂಧ ಸಾಹಿತ್ಯ ರೂಪ ಅತ್ಯಂತ ಹುಲುಸಾಗಿ ಬೆಳೆಯಲು ಸಾಧ್ಯವಾಯಿತು. ಇಂಥ ಜನಪ್ರಿಯ ಸಾಹಿತ್ಯರೂಪ ಗದ್ಯರೂಪದಲ್ಲಿರುವ ಭಾವ ಪ್ರಧಾನವಾದ ಲಲಿತ ಪ್ರಬಂಧವು ಆಧುನಿಕ ಸಾಹಿತ್ಯ ರೂಪಗಳಲ್ಲಿ ಒಂದಾಗಿ ಕನ್ನಡದಲ್ಲಿ ಬೆಳೆದು ನಿಂತಿದೆ.

ಸಾಮಾನ್ಯವಾಗಿ ನಾವು 'Essay' 'ಎಸ್ಸೆ' ಎಂಬುದಕ್ಕೆ ಸಂವಾದಿಯಾಗಿ 'ನಿಬಂಧ' ಇಲ್ಲವೆ 'ಪ್ರಬಂಧ' ಎಂಬ ಪದವನ್ನು ಬಳಸುತ್ತೇವೆ. ನಿಬಂಧಕ್ಕಿಂತ ಪ್ರಬಂಧ ಹೆಚ್ಚು ಗಂಭಿರವಾದದ್ದು ಎಂಬ ಭಾವನೆಯೂ ಇದೆ. ಸಂಶೋಧನಾ ಪ್ರಬಂಧ, ಮಹಾಪ್ರಬಂಧ ಎಂಬೂದು ರೂಢಿಯಲ್ಲಿದೆ. ಅದರ ಜೊತೆಗೆ ಲಘು ಪ್ರಬಂಧ ಎಂಬ ಪದವನ್ನು ಸೃಷ್ಟಿಸಿಕೊಂಡಿದ್ದೇವೆ. ಇದು ಹರಟೆಗೆ ಹತ್ತಿರವಾದದ್ದು ಎಂದು ಹೇಳಬಹುದು.

ಕನ್ನಡ ಪ್ರಬಂಧಗಳ ಸಿಂಹಾವಲೋಕನ ಮಾಡುವ ಮೊದಲು ಇಂಗ್ಲೀಷ್‌ನಲ್ಲಿಯ ಅದರ ಮೊದಲ ಹೆಜ್ಜೆಗಳನ್ನು ಗುರುತಿಸಬೇಕಾಗುತ್ತದೆ. ನವೋದಯದ ಕನ್ನಡ ಸಾಹಿತ್ಯವನಕ್ಕೆ ಲಲಿತ ಪ್ರಬಂದಧ ಗಾಳಿ ತಾಗಿದ್ದು ಬಂಗಾಳಿಯಿಂದ ಎಂಬ ಮಾತು ಇದೆ. ಕನ್ನಡ ಸಾಹಿತ್ಯಕ್ಕೆ ಇಂಗ್ಲೀಷ್ ಪ್ರಭಾವ ಬಂಗಾಳಿ ಭಾಷೆಯ ಮೂಲಕ ಆಗಿರುವಂತೆ ಪ್ರಬಂಧ ಸಾಹಿತ್ಯವು ಕನ್ನಡಕ್ಕೆ ಬಂದಿದೆ. ಇದಕ್ಕೆ ಆಧಾರವಾಗಿ 'ಬಂಕಿಮ ಚಂದ್ರರ'. "ಲೋಕ ರಹಸ್ಯ" (೧೮೯೮) ಇದನ್ನು ಬಿ.ವೆಂಕಟಾಚಾರ್ಯರು ಬಂಗಾಳಿಯಿಂದ ಕನ್ನಡಕ್ಕೆ

ಅನುವಾದಿಸಿದರು. ಇದೇ ಕನ್ನಡದ ಮೊದಲ ಪ್ರಬಂಧ ಸಂಕಲನ ಎಂದು ಹೇಳಬಹುದು. ಹಾಗೇ ಅದೇ ವರ್ಷ ಗು.ಹ.ಹೊನ್ನಾಪುರ ಮಠ ಅವರು "ನೀತಿ ಮಂಜರಿ' ಎಂಬ ಸ್ವತಂತ್ರ ಬರಹಗಳ ಸಂಕಲನವನ್ನು ಪ್ರಕಟಿಸಿದರು. ಇಷ್ಟೇಲ್ಲಾ ಇದ್ದರೂ ಪ್ರಬಂಧ ಪ್ರಕಾರದ ಗಾಢ ಪ್ರಭಾವ ಮಾತ್ರ ಇಂಗ್ಲೀಷ್ ಪ್ರಬಂಧದಿಂದಲೇ ಆಗಿ ಸತ್ವ, ಸಾರ, ಸ್ವರೂಪದಲ್ಲಿ, ಈ ಶತಮಾನದ ಲಲಿತ ಪ್ರಬಂಧ ಬೆಳೆದು ನಿಂತಿರುವುದು ಇಂಗ್ಲೀಷ್ ಪ್ರಬಂಧದಿಂದಲೇ ಎಂದು ಹೇಳಬಹುದು.

'ಪ್ರಬಂಧ' ಇಂಗ್ಲೀಷನ 'Eassy' ಎಂಬುದಕ್ಕೆ ಸಂವಾದಿಯಾಗಿ ಬಳಸುವ ಕನ್ನಡ ಪದ ಇದಕ್ಕೆ 'ಪ್ರಬಂಧ' 'ಲಘು ಪ್ರಬಂಧ', 'ಭಾವ ಪ್ರಬಂಧ', 'ಆತ್ಮೀಯ ಹರಟೆ', 'ಗದ್ಯ ಚಿತ್ರ', 'ಭಾವಚಿತ್ರ', 'ಪ್ರಸಂಗ ಶಿಥಿಲಬಂಧ' ಎನ್ನುವ ಪರ್ಯಾಯ ಹೆಸರುಗಳನ್ನು ಬಳಸಲಾಗಿದೆ. ಆದರೆ ಹೆಚ್ಚು ಪ್ರಚಲಿತವಾಗಿರುವುದು. 'ಲಲಿತ ಪ್ರಬಂಧ' ಎನ್ನುವ ಪದ ಮಾತು, ಮೂಲತಃ ಫ್ರೆಂಚ್ ಭಾಷೆಯ "Eassy" ಪದವನ್ನು ಒಂದು ಪ್ರಯೋಗ ಎಂಬಂತೆ ಮೊದಲಬಾರಿಗೆ ನಾಮಕರಣ ಮಾಡಿದವನು. ಫ್ರಾನ್ಸಿನ 'ಮೈಕಲ್ ಮೊಂಟೇನ್', (Michel montaigne) ಈತನೇ ಪ್ರಬಂಧ ಸಾಹಿತ್ಯದ ಆದ್ಯ ಪುರುಷನೆಂದು ಪರಿಗಣಿಸಲಾಗುತ್ತಿದ್ದರೂ ಗ್ರೀಸ್ ದೇಶದ 'ಥಿಯೋ ಪ್ರಾಸ್ಟಸ್' ಕ್ರಿ.ಪೂ.ದಲ್ಲಿಯೇ ಪ್ರಬಂಧ ಬರೆದವನೆಂದು ಹೇಳಲಾಗುತ್ತಿದೆ. ಮಂ.ಗೋವಿಂದ ಪೈಗಳು ಇವನಿಗಿಂತ ಪೂರ್ವದಲ್ಲಿದ್ದ ರೋಮಿನ 'ಸಿಸಿರೋ' ವೃದ್ಧಾಪ್ಯವನ್ನು ಕುರಿತು (on old age) ಮತ್ತು 'ಮೈತ್ರಿ'ಯನ್ನು ಕುರಿತು (on friendship) ಎಂಬ ಲ್ಯಾಟಿನ್ ಭಾಷೆಯಲ್ಲಿ ಪ್ರಬಂಧ ಬರೆದುದನ್ನು ಗುರುತಿಸುತ್ತಾರೆ. ಈ ಪ್ರಾಚೀನತೆ ಏನಿದ್ದರೂ "ಮೊಂಟೇನ್" ಪ್ರಬಂಧ ಬರೆದವರಲ್ಲಿ ಮೊದಲಿಗನೆಂಬುದು ಸಂಶೋಧಕರು. ವಿದ್ವಾಂಸರು. ಒಪ್ಪಿಕೊಂಡ ಮಾತಾಗಿದೆ. ಮೈಕಲ್ ಮೊಂಟೇನ್‌ನ 'ಎಸ್ಸೆ'ಯ ಎರಡು ಸಂಕಲನಗಳನ್ನು ಪ್ರಕಟಿಸಿರುವನು. ಇವನ ಕಾಲ ಕ್ರಿ.ಶ.೧೫೩೩-೧೫೯೨. ಈತನೊಬ್ಬ ದಾರ್ಶನಿಕ ಕವಿಯಾಗಿದ್ದಾನೆ. ಈತನ ಪ್ರಬಂಧಗಳನ್ನು ಇಂಗ್ಲೀಷ್ ಗೆ ತರ್ಜುಮೆ ಮಾಡಿದವನು 'ಪ್ಲೋರಿಯೋ' (florla) ಎಂಬಾತ. ಇತನು ಕ್ರಿ.ಶ.೧೬೦೩ರಲ್ಲಿ ಅವನ ಪ್ರಬಂಧಗಳನ್ನು ಅನುವಾದಿಸಿ ಪ್ರಕಟಿಸಿದಾಗ ಈ ವಿಶಿಷ್ಟ ಪ್ರಕಾರ ಆರಂಭವಾಯಿತು. ಪ್ರಬಂಧಗಳಲ್ಲಿ ಎರಡು ವಿಧ ಒಂದು ಚಿಂತನಪರ ಇನ್ನೊಂದು ವಿನೋದಪರ ಇಂಗ್ಲೀಷ್ ಪ್ರಬಂಧಕಾರ ಬೇಕನ್ ಚಿಂತನಪರ ಪ್ರಬಂಧಗಳನ್ನು ಬರೆದರೆ, ಫ್ರೆಂಚ್ ಪ್ರಬಂಧಕಾರ ಮಾಂಟೇನ್ ವಿನೋದಪರ ಪ್ರಬಂಧಗಳನ್ನು ಬರೆದಿದ್ದಾನೆ. ಕನ್ನಡದಲ್ಲಿ ಚಿಂತನಪರ ಭಾವಪೂರ್ವ ಪ್ರಬಂಧಗಳಿಗೆ 'ಲಲಿತ ಪ್ರಬಂಧ'ಗಳೆಂದು ವಿನೋದಪರ ಪ್ರಬಂಧಗಳಿಗೆ 'ಹರಟೆ'ಗಳೆಂದು ಕರೆಯುವರೆಂದು"[೧] ವೀರೇಂದ್ರ ಸಿಂಪಿಯವರು ಅಭಿಪ್ರಾಯ ಪಟ್ಟಿದ್ದಾರೆ.

'ಪ್ರಾನ್ಸಿಸ್ ಬೇಕನ್'(೧೫೬೧-೧೬೨೬) ಇಂಗ್ಲೀಷ್‌ನ ಪ್ರಥಮ ಪ್ರಬಂಧಕಾರ ಹಾಗೂ ಈ ಪ್ರಕಾರದ ಜನಕನೆಂದು ಕರೆಯುತ್ತಾರೆ. ಇತನು ವಿಲಿಯಂ ಶೆಕ್ಸಪಿಯರನ ಸಮಕಾಲೀನನಾಗಿದ್ದ. ಈತನು

ಜೀವನದ ವಿಸ್ತಾರವಾದ ಅನುಭವವುಳ್ಳವನಾಗಿದ್ದನು. ವಿಜ್ಞಾನಿ, ತತ್ವಜ್ಞಾನಿ ಕೂಡ ಆಗಿದ್ದನು. ಇತ ತನ್ನ ಜೀವಮಾನದಲ್ಲಿ ನೂರಾರು ಪ್ರಬಂಧಗಳನ್ನು ಬರೆದಿದ್ದು ಅಲ್ಲಿ ಆತನ ಲೋಕಾನುಭವ, ವ್ಯುತ್ಪತ್ತಿ, ಪಾಂಡಿತ್ಯ, ಪ್ರಕಟಗೊಂಡಿದೆ. ಈತನ ಪ್ರಬಂಧಗಳು ಚಿಂತನಪರವಾಗಿ ಸಂಕ್ಷಿಪ್ತವಾಗಿ ಭಾಷೆಯಲ್ಲಿ ಬಿಗಿಯಿದೆ. ನಿರೂಪಣೆ ನೇರವಾಗಿದ್ದು ತನ್ನ ಪ್ರಬಂಧಗಳು ನಿಧಾನವಾಗಿ ಓದಿ ಜೀರ್ಣಿಸಿಕೊಳ್ಳಬೇಕೆಂದು ಆತನೇ ಹೇಳಿದ್ದಾನೆ.

ಬೇಕನ್ ನ ತರುವಾಯ ಮುಂದೆ ಹಲವಾರು ಲೇಖಕರು ಪ್ರಬಂಧಗಳನ್ನು ಬರೆಯುತ್ತಾ ಬಂದರು. ಅವರುಗಳಲ್ಲಿ 'ಟೆಂಪ್ಲೆ', 'ಅಬ್ರಾಹಮ್ ಕೌಲ', ಇಂಗ್ಲೀಷ್ ಭಾಷೆಯಲ್ಲಿ ಬರೆದರು. ಮುಂದೆ ಹದಿನೆಂಟನೇ ಶತಮಾನ ಇಂಗ್ಲೀಷ್ ಪ್ರಬಂಧಗಳ ಒಂದು ಪರ್ವಕಾಲವಾಯಿತು. 'ಅಡಿಸನ್', 'ಗೋಲ್ಡಸ್ಮಿತ್', 'ಜಾನ್‌ಸನ್', 'ಹಾಸಲಿಟ್', 'ಸ್ವಿಫ್ಟ್', 'ಸ್ಟೀಲ್', 'ಮೇರಿರಸೆಲ್', 'ಮಿಟ್ ಪೋರ್ಡ', 'ಕೋಲರೀಜ್', ಈ ಲೇಖಕರಿಂದ ಈ ಸಾಹಿತ್ಯ ಪ್ರಕಾರ ಸಮೃದ್ಧವಾಗಿ ಬೆಳೆಯುವಂತಾಯಿತು. ಇದೇ ಸಮಯದಲ್ಲಿ ಪತ್ರಿಕಾ ವೇದಿಕೆ ದೊರೆತದ್ದರಿಂದ ಅವುಗಳ ಸಮರ್ಪಕ ಪ್ರಚಾರ ಕಾರ್ಯದಿಂದ ಈ ಸಾಧನೆ ಸಫಲವಾಯಿತು. ಸಂಸ್ಕೃತಿಯ ಪ್ರಸಾರದಲ್ಲಿ, ಜ್ಞಾನದ ಬೆಳವಣಿಗೆಯಲ್ಲಿ, ಜೀವನ ವಿಧಾನವನ್ನು ಉತ್ತಮ ಪಡಿಸುವುದರಲ್ಲಿ ಪ್ರಬಂಧಗಳು ಮಹತ್ವದ ಪಾತ್ರ ವಹಿಸಿದವು. ಇದೇ ಶತಮಾನದಲ್ಲಿ ಡೇನಿಯಲ್ ಡಿಪೊ 'ರಾಬಿನ್‌ಸನ್' 'ಕ್ರೂಸೋ' ಎಂಬ ಕಥೆಯನ್ನು ರಚಿಸಿ ಪ್ರಬಂಧಕ್ಕೆ ಸಂಭಾಷಣೆಯ ಮೆರಗನ್ನು ತಂದು ಕೊಟ್ಟನು. ಮುಂದೆ ಅಡಿಸನ್‌ನು ಮನುಷ್ಯನಲ್ಲಿರುವ ನಾಸ್ತಿಕತೆ, ಸೋಮಾರಿತನ, ಆಡಂಬರ ಮೊದಲಾದವು ಗಳನ್ನು ತನ್ನ ಪ್ರಬಂಧದಲ್ಲಿ ತೋರಿಸಿಕೊಟ್ಟನು, 'ರಿಚರ್ಡ್ ಸ್ಟೀಲ್‌ನು' ಪತ್ರಿಕಾ ವ್ಯವಸಾಯದ ಮೂಲಕ ಪ್ರಬಂಧ ರಚನೆಗೆ ತೊಡಗಿದ. ಈತನು ಸಮಾಜದ 'ಅಜ್ಞತೆ', ಅನೀತಿ, ಮುಂತಾದವುಗಳನ್ನು ಎತ್ತಿ ತೋರಿಸುತ್ತಾ, ಬಡತನ, ಸಿರಿತನ, ದುಂದುಗಾರಿಕೆ, ಮಿತವ್ಯಯ ಮುಂತಾದವುಗಳನ್ನು ಕುರಿತು ತನ್ನ ಪ್ರಬಂಧದಲ್ಲಿ ಆಲೋಚಿಸಿದನು. ಅದೇ ರೀತಿಯಾಗಿ 'ಆಲಿವರ್ ಗೋಲ್ಡ್ ಸ್ಮಿತ್' ತುಂಬಾ ಪ್ರಸಿದ್ಧಿಯನ್ನು ಪಡೆದ ಮತ್ತೊಬ್ಬ ಪ್ರಬಂಧಕಾರ. ಇತನು ಸಾತ್ವಿಕ, ಉದಾರಿ, ಸರಸಿಯಾಗಿದ್ದನು. ಬಡವರಲ್ಲಿ ತುಂಬಾ ಅನುಕಂಪ ಉಳ್ಳವನಾಗಿದ್ದನು. ತಿಳಿಹಾಸ್ಯದ ಸರಳ ಶೈಲಿಯ ಈತನ ಪ್ರಬಂಧಗಳು ಹೆಚ್ಚು ಜನಪ್ರಿಯವಾಗಿವೆ. "ನಗರದಲ್ಲಿ ಒಂದಿರುಳು". 'ಕರಿ ಉಡುಪಿನವರು' ಮುಂತಾದವುಗಳಲ್ಲಿ ಸೊಗಸಾದ ಜೀವನ ಚಿತ್ರಣವಿದೆ.

'ಗೋಲ್ಡಸ್ಮಿತ್'ನ ತರುವಾಯ ಹತ್ತೊಂಬತ್ತನೆ ಶತಮಾನದಲ್ಲಿ ಗಮನಿಸಬೇಕಾದ ಪ್ರಮುಖ ಪ್ರಬಂಧಕಾರರೆಂದರೆ 'ವಿಲಿಯಂ ಹ್ಯಾಜ್ಲಿಟ್, ಥಾಮಸ್ ಡಿಕ್ವೆನ್ಸಿ', ಚಾರ್ಲ್ಸ್ ಲ್ಯಾಂಬ' ಮುಂತಾದವರು ಇವರು ಸಹ ತಮ್ಮ ಜೀವನದ ನೋವಿನೊಂದಿಗೆ ಸಮಾಜದ ಕಾಯಿಲೆಗೆ ಔಷಧ ನೀಡುವ ಕಾವ್ಯಾತ್ಮಕ ಶೈಲಿಯ ಪ್ರಬಂಧಗಳನ್ನು ರಚಿಸಿದ್ದಾರೆ. ಮುಂದೆ 'ರಾಬರ್ಟ್ ಲೂಯಿಸ್' 'ಸ್ಟೀವನ್ ಸನ್' ತಮ್ಮದೇ ಆದ ಶೈಲಿಯಲ್ಲಿ ಪ್ರಬಂಧಗಳನ್ನು ಬರೆದರು. ಅದರಲ್ಲೂ ಇತನ 'ಧೂಳು ಮತ್ತು ನೆರಳು' ಅತ್ಯಂತ

ಪ್ರಸಿದ್ಧವಾದ ಪ್ರಬಂಧ. ಇಪ್ಪತ್ತನೆಯ ಶತಮಾನದಲ್ಲಿ ಚೆಸ್ಟರಸನ್, ಲಿಂಡ್, ಮಾರ್ಕ್ಸ್ ಬೀರ್ ಬ್ಯಾಮ್ ಎ.ಜಿ.ಗಾರ್ಡಿನರ್ ಇ.ವಿ.ಲ್ಯೂಕಾಸ್, ಮೊದಲಾದವರು ತಮ್ಮ ತಿಳಿಹಾಸ್ಯದ ವಿಚಾರಪೂರ್ಣ. ಅಲಂಕಾರಿಕ ಭಾಷೆಯೊಂದಿಗೆ ಸೊಗಸಾದ ವಿಡಂಬನೆ ವ್ಯಕ್ತವಾಗಿರುವುದನ್ನು ಇವರ ಪ್ರಬಂಧಗಳಲ್ಲಿ ಕಾಣುತ್ತವೆ. ಈಗೆ ಮೋಂಟೇನ್‌ನಿಂದ ಪ್ರಾರಂಭವಾದ ಇಂಗ್ಲೀಷ್ ಪ್ರಬಂಧ ಸಾಹಿತ್ಯ, ಲ್ಯೂಕಾಸ್‌ನವರೆಗೂ ವೈವಿಧ್ಯತೆಯಿಂದ ಬೆಳೆದು ಬಂದಿತು. ಈ ಸಾಹಿತ್ಯ ಪ್ರಕಾರ ಉಳಿದ ಸಾಹಿತ್ಯ ಪ್ರಕಾರಗಳಿಗೆ ಸರಿ ಸಮನಾಗಿಯೇ ಇಂಗ್ಲೀಷಿನಲ್ಲಿ ಬೆಳೆದಿದೆ. ಈ ಎಲ್ಲಾ ಲೇಖಕರ ಸಂಕೀರ್ಣ ಬರವಣಿಗೆಯೂ ಲಲಿತ ಪ್ರಬಂಧದ ಲವಲವಿಕೆ ಹೆಚ್ಚುವಂತೆ ಮಾಡಿದ್ದು ವಿಶೇಷವಾಗಿ ಕಂಡುಬರುತ್ತದೆ.

'ಲಲಿತ ಪ್ರಬಂಧ' ಎಂದರೆ ಏನು? ಎಂಬ ಪ್ರಶ್ನೆಗೆ ವಿವಿಧ ವಿದ್ವಾಂಸರ ಹೇಳಿಕೆಗಳನ್ನು ಗಮನಿಸುವುದು ಇಲ್ಲಿ ಸೂಕ್ತವೆನಿಸುತ್ತದೆ.

* ಜಾನ್ಸನ್ ಪ್ರಕಾರ : "ಮನಸ್ಸಿನ ಸ್ವಚ್ಛಂದ ಲಹರಿ, ಕ್ರಮ ರಹಿತವಾದ ಮತ್ತು ಚಿಂತನೆಗೊಳಗಾಗದ ಸಣ್ಣ ಕೃತಿ, ಇದು ನಿಯತವಾದ ಕ್ರಮಬದ್ದ ರಚನೆಯಲ್ಲ" ಎಂದು ಅಭಿಪ್ರಾಯಪಟ್ಟಿದ್ದಾರೆ.

* ಮರ್ರೆ : "ಯಾವುದೇ ಒಂದು ವಿಷಯವನ್ನು ಅಥವಾ ವಿಷಯ ಶಾಖೆಯನ್ನು ಕುರಿತ ಮಿತವಾದ ರಚನೆ, ಅದು ಮುಕ್ತಾಯದ ಅಭಾವವನ್ನು ಸೂಚಿಸುತ್ತದೆ. ಆದರೆ ವ್ಯಾಪ್ತಿಯಲ್ಲಿ ಮಿತಿ ಇದ್ದರೂ ವಿವರಪೂರ್ಣವಾದ ಶೈಲಿಯನ್ನುಳ್ಳ ರಚನೆ" ಎಂದಿದ್ದಾರೆ.

* ಫ್ರಾನ್ಸಿಸ್ ಬೇಕನ್ : "ಪ್ರಬಂಧಗಳು ತೂರಿಬಿಟ್ಟ ಚಿಂತನೆಗಳಾಗಿವೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ.

* ಎ.ಎನ್ .ಮೂರ್ತಿರಾಯರು : "ಪ್ರಬಂಧ ಅಥವಾ ಹರಟೆ ಯೌವನದಿಂದ ತುಂಬಿ ತುಳುಕುವ ಮುಗ್ದೆಯ ಕಣ್ಣಿನಂತೆ. ಅದರ ಚಾಂಚಲ್ಯವೇ ಅದರ ಸೊಬಗು ಎಂದು ಅಭಿಪ್ರಾಯಪಟ್ಟಿದ್ದಾರೆ.

ಇವೆಲ್ಲದರ ಸ್ವರೂಪ ನೋಡಿ ಹೇಳುವುದಾದರೆ "ಯಾವುದೇ ಒಂದು ವಿಷಯವನ್ನು ಕುರಿತು ಮಿತವಾದ, ಸರಳ ಸುಲಲಿತವಾದ ಶೈಲಿಯನ್ನೊಳಗೊಂಡ, ಸಂಪೂರ್ಣತೆಯ ಅಭಾವವನ್ನು ಹೊಂದಿರುವ ರಚನೆಯನ್ನು ಲಲಿತ ಪ್ರಬಂಧ" ಎಂದು ಹೇಳಬಹುದು. ಇದರಲ್ಲಿ ಲೇಖಕನ ಸುಸಂಸ್ಕೃತ ಚಿಂತನೆ, ನಾಗರಿಕ ಸಂವೇದನೆ, ಉತ್ತಮ ಅಭಿರುಚಿ ಮತ್ತು ವ್ಯಾಪಕ ಅನುಭಾವಗಳಿಂದ ಪುಷ್ಟಗೊಂಡು ಎತ್ತೆತ್ತಲೂ ಹರಿಯುವ ಒಂದು ವಿಶಿಷ್ಟ ಪ್ರಕಾರ ಎಂದು ಹೇಳಬಹುದು. ಹಾಗೇನೇ ವೀರೇಂದ್ರ ಸಿಂಪಿಯವರು "ಕವಿ ತನ್ನ ಮನದಲ್ಲಿ ಮೂಡಿದ ಭಾವಗಳನ್ನು ಛಂದೋಬದ್ಧವಾದ ಭಾಷೆಯಲ್ಲಿ ರೂಪಿಸಿದಾಗ ಅವು ಭಾವ ಗೀತೆಗಳಾಗುತ್ತವೆ. ಅವೇ ಭಾವಗಳನ್ನು ಛಂದಸ್ಸಿನಲ್ಲಿ ಅಳವಡಿಸಿಕೊಳ್ಳಲಾರದೆ ಗದ್ಯದಲ್ಲಿ ರೂಪಿಸಿದರೆ ಲಲಿತ ಪ್ರಬಂಧಗಳಾಗುತ್ತವೆ"[೩] ಎಂದು ವಿ.ಸೀ.ಅವರು ಅಭಿಪ್ರಾಯ ಪಟ್ಟಿದ್ದಾರೆ.

## ಕನ್ನಡದಲ್ಲಿ ಲಲಿತ ಪ್ರಬಂಧ ಪರಂಪರೆ

ಕನ್ನಡದಲ್ಲಿ ಲಲಿತ ಪ್ರಬಂಧ ಪ್ರಾರಂಭವಾದದ್ದು ನವೋದಯ ಸಾಹಿತ್ಯ ಕಾಲದಲ್ಲಿ. "ಪೌರಾಣಿಕ ವೀರರು, ಸಂತರು, ಅಲ್ಲದೆ ನೈತಿಕ ವಿಮರ್ಶೆಯನ್ನು ಬದಿಗಿಟ್ಟು, ಸಾಹಿತ್ಯ ಮನುಷ್ಯ ಸ್ವಭಾವದಲ್ಲಿ ಅದರ ವೈವಿಧ್ಯ, ವೈಚಿತ್ರಗಳಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡಾಗ ಬಂಗಾಳಿಯ ಬಾಗಿಲಿನಿಂದ ಬಂದಂತೆ ತೋರುತ್ತದೆ."[೪]

ಹೀಗಾಗಲೇ ಹೇಳಿದಂತೆ ಕನ್ನಡಕ್ಕೆ ಲಲಿತ ಪ್ರಬಂಧ ಬಂಗಾಳಿ ಮೂಲಕ ಪ್ರವೇಶ ಪಡೆಯಿತು. ಅದು. ಕ್ರಿ.ಶ.೧೮೮೮ರಲ್ಲಿ ಬಿ.ವೆಂಕಟಾಚಾರ್ಯರು ಬಂಕಿಮಚಂದ್ರರ 'ಲೋಕ ರಹಸ್ಯ' ಎಂಬ ಪ್ರಬಂಧ ಸಂಕಲನವನ್ನು ಅನುವಾದಿಸಿಸುವುದರ ಮೂಲಕ. ಇದೇ ಕನ್ನಡದಲ್ಲಿ ಪ್ರಕಟವಾದ ಮೊದಲ ಪ್ರಬಂಧ. ಪ್ರಾಯಶಃ ಕನ್ನಡದಲ್ಲಿ ಮೊದಲನೆಯ ಸ್ವತಂತ್ರ ಲಲಿತ ಪ್ರಬಂಧ ವೆಂಕಟಾಚಾರ್ಯರ "ದಾಡಿಯ ಹೇಳಿಕೆ"ಯಾಗಿದೆ. ಆನಂತರ ಕನ್ನಡ ಲಲಿತ ಪ್ರಬಂಧದ ಮೇಲೆ ಗಾಢವಾದ ಪ್ರಭಾವ ಬೀರಿದ್ದು ಇಂಗ್ಲೀಷ ಲಲಿತ ಪ್ರಬಂಧ. ಇಲ್ಲಿಂದ ಸುಮಾರು ಇಪ್ಪತ್ತು ವರ್ಷಗಳ ಕಾಲ ಕನ್ನಡದಲ್ಲಿ ಲಲಿತ ಪ್ರಬಂಧ ಆಮೆಯ ನಡಿಗೆಯಂತೆ ಬೆಳೆದು ಬಂದಿತು.

ಕನ್ನಡದ ಮೊದಲ ಪ್ರಬಂಧಕಾರರೆಂದರೆ ಮುದ್ದಣ ಮತ್ತು ಪಂಜೆ ಮಂಗೇಶರಾಯರು. ಇವರಲ್ಲಿ ಮುದ್ದಣ - 'ಜೋಗುಳ' ಎಂಬ ಪ್ರಬಂಧ ಬರೆದರೆ ಪಂಜೆಯವರು 'ಹಲ್ಲಿ' ಎಂಬ ಪ್ರಬಂಧ ಬರೆಯುವುದರ ಮೂಲಕ ಕನ್ನಡದ ನವೋದಯಕ್ಕೆ ಪ್ರಬಂಧದ ಬುನಾದಿ ಹಾಕಿದರು. ಮೊದಲಿಗೆ ಅಲ್ಲೊಂದು ಇಲ್ಲೊಂದು ಎಂಬಂತೆ ಬಿಡಿ ಬರಹಗಳಾಗಿ ಕಾಣಿಸಿಕೊಂಡ ಪ್ರಬಂಧ ಪರಂಪರೆ ಮುಂದೆ ೧೯೧೨ರಲ್ಲಿ ಆರ್.ಶ್ರೀನಿವಾಸರ 'ವಿವೇಕ ಮಂಜರಿ' ಬಿ.ವೆಂಕಟಾಚಾರ್ಯರ 'ದಾಡಿಯ ಹೇಳಿಕೆ' 'ಚಿತ್ರ ವಿಚಿತ್ರಾವಳಿ', ಎಂಬ ಪ್ರಬಂಧಗಳ ಪ್ರಕಟಣೆಯ ನಂತರ ಈ ಪರಂಪರೆಗೆ ಒಂದು ನೆಲೆ ಕಂಡುಬಂತು. ಮುಂದೆ ವಿ.ಸಿ., ಎ.ಎನ್.ಮೂರ್ತಿರಾವ್, ಮತ್ತು ಅವರ ಸಮಕಾಲೀನರ ಬರಹಗಳಿಂದ ಶ್ರೀಮಂತಿಕೆಯನ್ನು ಪಡೆಯಿತು. (೧೯೩೧ ರಿಂದ ೧೯೫೦)ರವರೆಗೆ ಮೊದಲ ಹೆಜ್ಜೆಯಾಗಿ ಎಂ.ಜಿ.ವೆಂಕಟೇಶ್ವರಯ್ಯನವರು, ಧಾರವಾಡದ ಗೆಳೆಯರ ಗುಂಪಿನವರು, ಪು.ತಿ.ನರಸಿಂಹಚಾರ್, ಎಂ.ವಿ.ಕಾಮತ್, ಎ.ಎನ್.ಮೂರ್ತಿರಾವ್, ಕುವೆಂಪು, ಬೇಂದ್ರೆ, ಕಾರಂತ, ಗೋಕಾಕ, ಎನ್ಕೆ, ಸಿಂಪಿಲಿಂಗಣ್ಣ, ಸುನಂದಾ ಬೆಳಗಾಂವಕರ್, ಟಿ.ಸುನಂದಮ್ಮ, ಬೀಚಿ, ರಾ.ಯ.ಧಾರವಾಡಕರ, ಅ.ರಾಮಿತ್ರ ಮೊದಲಾದ ಪ್ರಮುಖ ಪ್ರಬಂಧಕಾರರು ಕನ್ನಡದಲ್ಲಿ ಬೆಳೆಸಿದರು. ಇಂದಿಗೂ ವಿಸೀ, ಪ್ರಭುಶಂಕರ, ಪಿ.ಎಸ್.ರಾಮಾನುಜಂ, ಅ.ರಾ.ಸೆ. ವೀರೇಂದ್ರ ಸಿಂಪಿ, ವೈದೇಹಿ, ಅನಂತ ಕಲ್ಲೋಳ, ಆರ್.ನಿರ್ಮಲಾ, ಎಸ್.ಮಂಜುನಾಥ, ಬಿ.ಆರ್.ವಾಡಪ್ಪಿ, ಈರಪ್ಪ ಕಂಬಳಿ, ಮೊಗಳ್ಳಿ ಗಣೇಶ, ಚಂದ್ರಶೇಖರ ಆಲೂರು ಮುಂತಾದವರು ಪ್ರಬಂಧ ಸಾಹಿತ್ಯವನ್ನು ಬೆಳೆಸುತ್ತಿದ್ದಾರೆ.

ನವೋದಯ ಕನ್ನಡ ಸಾಹಿತ್ಯಕ್ಕೆ ಉತ್ತರ ಕರ್ನಾಟಕದ ಕೊಡುಗೆ ಅಪಾರವಾದುದು. ಅದರಲ್ಲೂ ಧಾರವಾಡದಂತಹ ಪ್ರದೇಶದ ಕೊಡುಗೆ ಅಪಾರ. ನವೋದಯ ಕಾವ್ಯದ ಉಗಮ ಧಾರವಾಡದಲ್ಲಾಗಿರುವಂತೆ 'ಲಲಿತ ಪ್ರಬಂಧ' ಸಾಹಿತ್ಯದ ಉಗಮವೂ ಧಾರವಾಡದಲ್ಲಿಯೇ ಆಗಿರುವಂತೆ ಕಾಣುತ್ತದೆ. 'ಧಾರವಾಡದ ಗೆಳೆಯರ ಗುಂಪು'ನಿಂದ ಪ್ರಕಟವಾದ 'ಹರಟೆಗಳು' (೧೯೩೧) ಎಂಬ ಸಂಗ್ರಹ ಲಲಿತ ಪ್ರಬಂಧಕ್ಕೆ 'ಹರಟೆ' ಎಂದು ನಾಮಕರಣ ಮಾಡಿ ಈ ಹೊಸ ಸಾಹಿತ್ಯ ಪ್ರಕಾರದ ಹರಿಕಾರಿಕೆಯನ್ನು ಘೋಷಿಸಿತು. ಹಾಗೆ ೧೯೩೪ರಲ್ಲಿ ಇಪ್ಪತ್ತಾರು ಪ್ರಬಂಧಗಳ "ಸುಳುವು-ಹೊಳವು" ಎಂಬ ಸಂಕಲನ ಪ್ರಕಟಿಸಿದ್ದು ಐತಿಹಾಸಿಕವಾಗಿ ನೆನಪಿಡತಕ್ಕ ಸಂಗತಿಯಾಗಿದೆ. ಇದರಲ್ಲಿ ದ.ರಾ.ಬೇಂದ್ರೆ, ಮಧುರ ಚೆನ್ನ, ವಿ.ಕೃ.ಗೋಕಾಕ್, ರಂ.ಶ್ರೀ.ಮುಗುಳಿಯವರ, ಪ್ರಬಂಧಗಳಿವೆ. ೧೯೩೧ರಲ್ಲಿಯೇ ಪ್ರಕಟವಾದ 'ರಾಮಾಚಾರಿಯ ನೆನಪು' ಪು.ತಿ.ನ. ರವರ ಪ್ರಥಮ ಲಲಿತ ಪ್ರಬಂಧಗಳ ಸಂಕಲನವಾಗಿದೆ. ಮೂವತ್ತರ ದಶಕದಲ್ಲಿ ಕನ್ನಡದಲ್ಲಿ ಮಹತ್ವದ ಸಾಹಿತಿಗಳಲ್ಲದೆ, ಬೇರೆ ಕೆಲವರು ಲಲಿತ ಪ್ರಬಂಧಕಾರರಾಗಿ ಆ ಪ್ರಕಾರದಲ್ಲಿಯೇ ವಿಶೇಷವಾಗಿ ಸಾಧನೆ ಮಾಡಿದ್ದರಿಂದ ನವೋದಯದ ಸಂದರ್ಭದಲ್ಲಿ 'ಲಲಿತ ಪ್ರಬಂಧ ಸಾಹಿತ್ಯ ಚೆನ್ನಾಗಿಯೇ ಬೆಳೆಯಿತು. ನಾ ಕಸ್ತೂರಿ, ಎ.ಎನ್.ಮೂರ್ತಿರಾವ್, ವಿ.ಸೀ., ರಾ.ಕು. ಮುಂತಾದವರು. ಈ ಕ್ಷೇತ್ರವನ್ನು ಬೆಳಸಿದವರಲ್ಲಿ ಪ್ರಮುಖರಾಗಿದ್ದಾರೆ.

ಕನ್ನಡ ಲಲಿತ ಪ್ರಬಂಧ ನವೋದಯ ಸಂದರ್ಭದಲ್ಲಿ ಹುಟ್ಟಿಕೊಂಡು ತನ್ನ ಪ್ರಾರಂಭಿಕ ಸ್ಥಿತಿಯಲ್ಲಿಯೇ ಸಿದ್ಧಿಯ ಪರಾಕಾಷ್ಠತೆಯನ್ನು ತಲುಪಿತು. ಮಾಸ್ತಿಯವರು ಸಣ್ಣಕತೆಯಲ್ಲಿ ಸಾಧಿಸಿದ ಸಿದ್ಧಿಯನ್ನು ಎ.ಎನ್.ಮೂರ್ತಿರಾವ್‌ರು ಅದೇ ಕಾಲಕ್ಕೆ ಲಲಿತ ಪ್ರಬಂಧದಲ್ಲಿ ಸಾಧಿಸಿದರು. ಮುಂದೆ ೧೯೩೧ ರಿಂದ ಮೂವತ್ತು ವರ್ಷ ಈ ಪ್ರಕಾರದ 'ಸ್ವರ್ಣ ಯುಗ' ಎಂದು ಗುರುತಿಸಬಹುದು. ಆ ವರ್ಷ ಎಂ.ಜಿ.ವೆಂಕಟೇಶಯ್ಯನವರು. "ಪುಲ್ಲಯ್ಯನ ಪ್ರಬಂಧಗಳು" ಪ್ರಕಟವಾಯಿತು. ಬೇಂದ್ರೆ, ಗೋಕಾಕ್, ಚೆನ್ನಮಲ್ಲಪ್ಪ, ರಂ.ಶ್ರೀ.ಮುಗುಳಿ ಮೊದಲಾದವರ ಪ್ರಬಂಧಗಳನ್ನೊಳಗೊಂಡ 'ಹರಟೆಗಳು' ಪ್ರಕಟವಾದ ನಂತರ ಮುಂದಿನ ಮೂವತ್ತು ವರ್ಷಗಳಲ್ಲಿ ಶ್ರೀರಂಗ, ಶಿವರಾಮ ಕಾರಂತ, ವಿ.ಸಿ, ತೀ.ನಂ.ಶ್ರೀಕಂಠಯ್ಯ, ಪು.ತಿ.ನ., ಕುವೆಂಪು, ರಾಯ ಧಾರವಾಡಕರ್, ಪಂಜೆಮಂಗೇಶರಾಯ, ಕೆ.ಎಸ್. ನರಸಿಂಹಸ್ವಾಮಿ, ಜೆ.ವಾಮನಭಟ್ಟ, ರಾವ್‌ಬಹೂದ್ದೂರ್, ಎ.ಎನ್.ಮೂರ್ತಿರಾವ್, ಗೋರೂರು, ಪಡುಕೋಣೆ ರಾಮನಂದರಾಯರು, ನಾ ಕಸ್ತೂರಿ, ಎಚ್ಚೆಸ್ಕೆ, ರಾಕು ಎನ್.ಎಸ್.ಗದಗಕರ, ಹೀಗೆ ಅನೇಕರು ಲಲಿತ ಪ್ರಬಂಧಗಳನ್ನು ಬರೆದಿದ್ದಾರೆ. ಹಾ.ಮಾ.ನಾಯಕರ 'ನಮ್ಮ ಮನೆಯ ದೀಪ' (೧೯೫೬) ಒಂದು ವಿಶಿಷ್ಟ ಪ್ರಬಂಧಗಳ ಸಂಗ್ರಹ. 'ರಮಾ' ಎಂಬ ಎಳೆಯ ಮಗು ಇಲ್ಲಿನ ಏಳು ಪ್ರಬಂಧಗಳ ಕೇಂದ್ರ ಬಿಂದುವಾಗಿದೆ.

ಪ್ರಬಂಧಕಾರರಲ್ಲಿ ಗಮನಾರ್ಹ ಹೆಸರು ಪು.ತಿ.ನರಸಿಂಹಾಚಾರ್ ಅವರದು. ಅವರು ೧೯೩೧ರಲ್ಲಿಯೇ ತಮ್ಮ ಮೊದಲ ಪ್ರಬಂಧ ಸಂಕಲನ 'ರಾಮಾಚಾರಿಯ ನೆನಪುಗಳು' ಪ್ರಕಟಿಸಿದ್ದಾರೆ. ಇಲ್ಲಿಯ

ಲೇಖನಗಳೂ ಪ್ರಬಂಧದ ಬರವಣಿಗೆಗೆ ಬಹಳ ಹತ್ತಿರವಾಗಿದ್ದರೂ, ಪು.ತಿ.ನ.ರವರು ಅವುಗಳನ್ನು ಭಾವನಾ ಚಿತ್ರಗಳೆಂದು ಕರೆದಿದ್ದಾರೆ. ಹೆಚ್ಚಾಗಿ ಅವು ಕಥನಾತ್ಮಕ ಅಂಶಗಳನ್ನು ಒಳಗೊಂಡಿವೆ. ಪು.ತಿ.ನ. ಅವರಿಗೆ ಕಾವ್ಯದ ಕಡೆಗೆ ಹೆಚ್ಚಿನ ಒಲವಿದ್ದರೂ ಅವರು ಪ್ರಬಂಧ ಬರವಣಿಗೆಯನ್ನು ಮುಂದುವರೆಸಿದರು. ೧೯೪೫ರಲ್ಲಿ ಪ್ರಕಟವಾದ ಅವರ 'ರಥಸಪ್ತಮಿ' ಮತ್ತು 'ಇತರ ಚಿತ್ರಗಳು' ಸಂಕಲನ ವೈವಿಧ್ಯಮಯ ವಸ್ತುಗಳನ್ನು ಒಳಗೊಂಡಿವೆಯಾದರೂ ಅಲ್ಲಿಯ ಬರಹಗಳು ಒಂದು ರೀತಿಯ ಸಂಕೀರ್ಣ ಸ್ವರೂಪದ್ದವುಗಳಾಗಿವೆ. ವರಕವಿ ಬೇಂದ್ರೆಯವರು ಹರಟೆಗಳು ಎನ್ನುತ್ತಲೇ 'ಸಾವಿನೊಡನೆ ಸರಸ' 'ಸೋಮಾರಿತನವೆಂಬ ಸದ್ಗುಣ', 'ಉಗುಳುವುದು' ಇತ್ಯಾದಿ ಲಲಿತ ಪ್ರಬಂಧಗಳನ್ನು ಬರೆದರು. ಅವರ ಭಾಷೆ ಅವರ ಕಾವ್ಯದಂತೆಯೇ ಲಯಬದ್ಧ ಶ್ಲೇಷೆಯನ್ನು ಹಿಡಿದುಕೊಂಡ ಚಮತ್ಕಾರಿಕೆ ವಿನೋದದ ಒಳಗೆ ವಿಡಂಬನೆಯನ್ನು ಬೆರೆಸಿರುವುದನ್ನು ಅವರ ಪ್ರಬಂಧಗಳಲ್ಲಿ ಕಾಣಬಹುದು. ಇವರಂತೆ ಕುವೆಂಪು ಸಹ ಪ್ರಬಂಧ ಬರೆದಿದ್ದಾರೆ. ಇವರ ಸಾಹಿತ್ಯ ಯಾವಾಗಲೂ ಗಂಭೀರವಾದದ್ದೇ ಹಾಗಿದ್ದರೂ ಹಾಸ್ಯ ಆಗಾಗ ಮಿಂಚುವುದುಂಟು. 'ಮಲೆನಾಡಿನ ಚಿತ್ರಗಳು' ವರ್ಣನಾತ್ಮಕವಾಗಿದ್ದರೂ ಬದುಕಿನ ಪದರುಗಳನ್ನು ಬಿಚ್ಚಿಡುತ್ತದೆ. ಮಲೆನಾಡಿನ ಬದುಕು, ಅಲ್ಲಿಯ ಜನರ ಭಾವನೆಗ್ಗಳು ಅವರ ಪ್ರಬಂಧಗಳಲ್ಲಿ ಸೊಗಸಾಗಿಯೇ ಮೂಡಿರುವುದನ್ನು ಕಾಣಬಹುದು.

ಕನ್ನಡ ಲಲಿತ ಪ್ರಬಂಧಗಳನ್ನು ಎರಡು ವಿಧಗಳಾಗಿ ವಿಂಗಡಿಸಬಹುದಾಗಿದೆ. ೧. ಹಾಸ್ಯ ಪ್ರಧಾನವಾದವು. ೧. ಚಿಂತನಾ ಪ್ರಧಾನವಾದವು ಎಂದು. ವೀರೇಂದ್ರ ಸಿಂಪಿಯವರು ಈ ವಿಭಜನೆಯ ಮೂಲಕ ಕನ್ನಡ ಪ್ರಬಂಧಕಾರರನ್ನು ವಿಂಗಡಿಸಿ ನೋಡಿದ್ದು ಗಮನಿಸತಕ್ಕ ಸಂಗತಿಯಾಗಿದೆ. ಹಾಸ್ಯ ಪ್ರಬಂಧಗಳು ಹರಟೆಗಳಾಗಿ ಪರಿಣಮಿಸುತ್ತಿದ್ದರೆ, ಚಿಂತನೆ ಪ್ರಬಂಧಗಳು ನಿಜವಾದ ಅರ್ಥದಲ್ಲಿ ಲಲಿತ ಪ್ರಬಂಧಗಳಾಗಿ ನಿಲ್ಲುತ್ತವೆ. ಹಾಸ್ಯ ಪ್ರಬಂಧಕಾರರಲ್ಲಿ ಮೊದಲು ಬರುವ ಹೆಸರು ಗೊರೂರು ರಾಮಸ್ವಾಮಿ ಅಯ್ಯಂಗಾರರದು. ಅವರ 'ಗರುಡ ಗಂಬದ ದಾಸಯ್ಯ' ನಮ್ಮ ಊರಿನ ರಸಿಕರು ಮೊದಲಾದ ಕೃತಿಗಳು ವಿಡಂಬನೆ, ಕಟಕಿ ಹಾಗೂ ವ್ಯಂಗ್ಯಗಳಿಲ್ಲದ ಶುದ್ಧ ಹಾಸ್ಯ ಬರಹಗಳಾಗಿವೆ. ಇನ್ನೊಬ್ಬ ಮುಖ್ಯ ಹಾಸ್ಯ. ಪ್ರಬಂದಕಾರರೆಂದರೆ, ನಾ.ಕಸ್ತೂರಿಯವರು. ಇವರ 'ಉಪಾಯ ವೇದಾಂತ' ಹಾಸ್ಯ ಬರಹಗಳಲ್ಲಿ ಒಂದಾಗಿದೆ. ಹಾಗೇನೇ ಬೀಚಿಯವರ 'ತಿಮ್ಮನ ತಲೆ', ನಾಡಿಗೇರ ಕೃಷ್ಣರಾಯರ 'ಮೆಲ್ಲೊಗರ', ದಾಶರಥಿ ದೀಕ್ಷೀತರ 'ಗಾಂಪರ ಹರಟೆಗಳು', ಎನ್ಕೆಯವರ 'ಮುಂಗಾಲ ಪುಟಿಗೆ', ಜಿ.ಪಿ.ರಾಜರತ್ನಂ ಅವರ 'ರಾಘುವಾಂಕನ ಹಲ್ಲು', ಅರಾಸೇ ಅವರ 'ಸವಿನಗು' ಮುಂತಾದ ಸಂಗ್ರಹಗಳು ಹಾಸ್ಯವನ್ನು ನೀಡುವ ಕೃತಿಗಳಾಗಿವೆ. ಹಾಗೇನೇ 'ಕೊರವಂಜಿ' ಮಾಸಪತ್ರಿಕೆ ಮತ್ತು ಅದರ ಸಂಪಾದಕರಾದ ರಾ.ಶಿ. ಅವರು 'ತುಟಿವೀರಿದುದು' ಎಂಬ ಪ್ರಬಂಧವನ್ನು ಬರೆದಿದ್ದಾರೆ. ಹಾಗೇನೇ ಬೇಂದ್ರೆ, ಲಾಂಗೂಲಾಚಾರ್ಯ ಹಾಸ್ಯ ಸಾಹಿತ್ಯದಲ್ಲಿ ಪ್ರಮುಖರಾಗಿ ಕಾಣುತ್ತಾರೆ.

ಚಿಂತನಶೀಲ ಪ್ರಬಂಧಗಳಲ್ಲಿ ವಿಮರ್ಶಾತ್ಮಕ ಪ್ರಬಂಧಗಳ ಪಾಲೇ ದೊಡ್ಡದು. ದೇವರು ಧರ್ಮಗಳಂತಹ ಪ್ರೌಢ ವಿಷಯದಲ್ಲಿಯೂ ಚಿಂತನಪರ ಪ್ರಬಂಧಗಳು ರಚಿತವಾಗಿವೆ. 'ದೇವರು ಋತು' ಎಂಬ ವಿಷಯದಲ್ಲಿ ಡಿ.ವಿ.ಜಿ.ಯವರ ಪ್ರಬಂಧಗಳು ಹೆಸರುವಾಸಿಯಾಗಿವೆ. ಕಾವ್ಯಶಾಸ್ತ್ರದ ಪರಣತಿಯನ್ನೆಲ್ಲಾ ಹೊರಗೆಡಹುವ ಡಿ.ವಿ.ಜಿ, ವಿ.ಕೃ.ಗೋಕಾಕ್, ಮುಗುಳಿ, ವೀ.ಸಿ, ಕುವೆಂಪು, ಎಸ್ .ವಿ.ರಂಗಣ್ಣ, ಸ.ಸ.ಮಾಳವಾಡ, ಡಿ.ಕೆ.ಭೀಮಸೇನರಾವ್, ಎ.ಎನ್.ಮೂರ್ತಿರಾವ್ ಪು.ತಿ.ನ. ಮೊದಲಾದವರು ಪ್ರಮುಖ ರಾಗಿದ್ದಾರೆ. ಸಮ್ಮೇಳನ, ವಿಚಾರಗೋಷ್ಠಿ ಇಂಥ ಸಂದರ್ಭದಲ್ಲಿ ಮಂಡಿಸುವ ಪ್ರಬಂಧಗಳು ಇದೇ ಮಾದರಿಗೆ ಸೇರಿದವುಗಳಾಗಿವೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಇಲ್ಲಿಯವರೆಗೂ ಪ್ರಬಂಧ ಸಾಹಿತ್ಯದಲ್ಲಿ ವಿಶೇಷ ಕೊಡುಗೆ ಕೊಟ್ಟು ಅದರ ಬೆಳವಣಿಗೆಗೆ ಕಾರಣರಾದ ಕೆಲವು ಪ್ರಮುಖ ಲೇಖಕರು ಹಾಗೂ ಅವರ ಲಲಿತ ಪ್ರಬಂಧ ಕುರಿತಾಗಿ ಈ ಕೆಳಗಿನಂತೆ ವಿವರಿಸಲಾಗಿದೆ.

### ಗೊರೂರು ರಾಮಸ್ವಾಮಿ ಅಯ್ಯಂಗಾರ

ಹಾಸ್ಯ ಪ್ರಬಂದಕಾರರಲ್ಲಿ ಮೊದಲು ಬರುವ ಹೆಸರು ಗೊರೂರು ಅವರದು. ಕನ್ನಡ ಸಾಹಿತ್ಯದಲ್ಲಿ ಇವರ ಸಾಧನೆ ವಿಶಿಷ್ಟವಾದುದು. ರಾಷ್ಟ್ರೀಯ ಕಾರ್ಯದಲ್ಲಿ ತೊಡಗಿಕೊಂಡಿದ್ದರೂ ಹಳ್ಳಿಯ ಬದುಕನ್ನೆ ನೆಚ್ಚಿಕೊಂಡವರು. ಅದಕ್ಕೆಂದೇ ಅವರ ಸಾಹಿತ್ಯದಲ್ಲಿ ಹಳ್ಳಿಯ ಸೊಗಡನ್ನು ಕಾಣಬಹುದು. ಅವರ 'ಹಳ್ಳಿಯ ಚಿತ್ರಗಳು'.(೧೯೩೦) 'ನಮ್ಮ ಊರಿನ ರಸಿಕರು(೧೯೩೨)', 'ಗರುಡಗಂಬದ ದಾಸಯ್ಯ'(೧೯೩೯), 'ಬೆಸ್ತರ ಕರಿಯ'(೧೯೪೪), 'ಹೇಮಾವತಿಯ ತೀರದಲ್ಲಿ', 'ಬೆಟ್ಟದ ಮನೆ' ಮುಂತಾದ ಪ್ರಬಂಧಗಳಲ್ಲಿ ವಿಡಂಬನೆ, ಕಟಕಿ, ವ್ಯಂಗ್ಯವಿಲ್ಲದೆ ನವುರಾದ ಹಾಸ್ಯದೊಂದಿಗೆ ನಿತ್ಯ ಬದುಕಿನ ಸಹಜತೆ, ಸ್ವಚ್ಛತೆ, ನೋವು-ನಲಿವು ಮುಂತಾದವುಗಳನ್ನು ಜಾನಪದ ಹಿನ್ನಲೆಯಿಂದ ಅವರ ಪ್ರಬಂಧಗಳಲ್ಲಿ ಒಡಮೂಡಿರುವುದನ್ನು ಗುರುತಿಸಬಹುದು.

### ಎ.ಎನ್.ಮೂರ್ತಿರಾಯ

ಲಲಿತ ಪ್ರಬಂಧ ಪ್ರಕಾರದಲ್ಲಿ ಅತ್ಯಂತ ಶ್ರೇಷ್ಠ ಸಾಧನೆ ಮಾಡಿದವರು ಎ.ಎನ್.ಮೂರ್ತಿರಾಯರು. ಇವರು ಕನ್ನಡ ಪ್ರಬಂಧದ ಬೆಳವಣಿಗೆಯ ಪ್ರಾರಂಭಿಕ ಘಟ್ಟದಿಂದಲೂ ಬರೆಯುತ್ತಾ ಬಂದು ಆ ಪ್ರಕಾರಕ್ಕೊಂದು ಭದ್ರ ಬುನಾದಿ ಹಾಕಿದವರು. ಇವರು ಬದುಕಿನ ವಿವಿಧ ಅನುಭವಗಳಿಗೆ ಸ್ಪಂದಿಸಿ ರಚಿಸಿದ ಅವರ ವೈವಿಧ್ಯಮಯ ಪ್ರಬಂಧಗಳು ಕಲಾತ್ಮಕವಾಗಿವೆ. ಅಪೂರ್ವವಾಗಿವೆ. ಬುದ್ದಿ ಮತ್ತು ಹೃದಯಗಳ ಬೆಸುಗೆಯಿಂದಾಗಿ ಇವರ ಕೃತಿಗಳು ಓದುಗರಿಗೆ ಆತ್ಮೀಯವಾಗಿವೆ. ಆಳವಾದ ಅನುಭವ, ವಿಸ್ತಾರವಾದ ಓದು, ಸೂಕ್ಷ್ಮ ವಿವೇಚನಾ ಶಕ್ತಿ, ವಿಶ್ಲೇಷಣಾ ಸಾಮಾರ್ಥ್ಯ, ಮಾನವೀಯ ದೃಷ್ಟಿ, ಶ್ರೇಷ್ಠ ನಿರೂಪಣೆ, ಮಾರ್ಮಿಕ ವಿಡಂಬನೆ ಹಾಗೂ ಚಿತ್ತಾಕರ್ಷಕ ಕಲ್ಪಕತೆಯಿಂದ ಕೂಡಿದ ಮೂರ್ತಿರಾಯರ

ಪ್ರಬಂಧಗಳು ಕನ್ನಡಕ್ಕೆ ಅಮೂಲ್ಯ ಸಂಪತ್ತು ಎನಿಸಿವೆ. ಅವರ ಮೊದಲ ಪ್ರಬಂಧ ಸಂಕಲನ 'ಹಗಲು ಗನಸುಗಳು' (೧೯೩೭)ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಒಟ್ಟು ಏಳು ಪ್ರಬಂಧಗಳು ಸೇರಿವೆ. ಅವುಗಳಲ್ಲಿ 'ಗೌರಜ್ಜಿ' ಒಂದು ಶ್ರೇಷ್ಠ ವ್ಯಕ್ತಿಚಿತ್ರ, ಗೌರಜ್ಜಿಯ ಮದುವೆ, ಅತ್ತೆಯ ಕಿರುಕುಳ, ಮಕ್ಕಳ ಪ್ರೀತಿ ವ್ಯಕ್ತಿಯೊಬ್ಬಳ ವ್ಯಕ್ತಿತ್ವ ಪ್ರಬಂಧದುದ್ದಕ್ಕೂ ಬೆಳೆದುಬಂದಿದೆ.

ಮೂರ್ತಿರಾಯರ ಇನ್ನೆರಡು ಸಂಕಲನಗಳಾದ 'ಅಲೆಯುವ ಮನ'(೧೯೫೭) ಮತ್ತು 'ಮಿನುಗು ಮಿಂಚು'(೧೯೭೨)ಗಳು ಅವರನ್ನು ಪ್ರಬಂಧಕಾರರಲ್ಲಿ ಅಗ್ರಸ್ಥಾನವನ್ನು ಸ್ಥಿರಗೊಳಿಸಿವೆ. ಹಾಗೇ ಅವರ 'ದಿವಾನಖಾನೆಯ ಅಂದಚೆಂದ' 'ಚಿತ್ರಗಳು-ಪತ್ರಗಳು' ಇನ್ನೂ ಕೆಲವು ಲಲಿತ ಪ್ರಬಂಧಗಳನ್ನು ಗಮನಿಸಿದರೆ 'ಲಲಿತ ಪ್ರಬಂಧ' ಎಂಬ ಜಾತಿಗೆ ಹಾಗೂ ಅದರ ಬರವಣಿಗೆಗೆ ಇವರು ಹೇಗೆ ಆಚಾರ್ಯರಾದರು ಎಂಬ ಅಂಶ ಸ್ಪಷ್ಟವಾಗುತ್ತದೆ. ಲಲಿತವಾದ ಬರವಣಿಗೆಯ ಉದ್ದಕ್ಕೂ ಚಿಮ್ಮುವ ತಿಳಿ ಹಾಸ್ಯದ ಹೊನಲು, ನವ ಪ್ರಣಯಿಗಳ ಮನೋವ್ಯಾಪಾರದ ಸೂಕ್ಷ್ಮ ವಿಶ್ಲೇಷಣೆ, ಗಂಭೀರ ವಿಷಯಗಳನ್ನೆತ್ತಿಕೊಂಡು ಹಗುರವಾದ ಶೈಲಿಯಲ್ಲೇ ನಡೆಸುವ ಮಾರ್ಮಿಕ ವಿಮರ್ಶೆ, ಜೀವನದ ಎಲ್ಲಾ ಮಗ್ಗಲುಗಳನ್ನು ಕಾಣಿಸುತ್ತಾ ಸಾಗುವ ವೈಚಾರಿಕ ದೃಷ್ಟಿ, ಚಿಂತನೆ ಹಾಸ್ಯಗಳ ಅನನ್ಯ ಹೆಣಿಗೆ, ಲವಲವಿಕೆಯ ಪ್ರಸನ್ನವಾದ ಶೈಲಿಯೊಡನೆ ಬರೆದ ಪ್ರಬಂಧಗಳು ಮೂರ್ತಿರಾಯರನ್ನು ಈ ಕ್ಷೇತ್ರದಲ್ಲಿ ಅದ್ವಿತೀಯರನ್ನಾಗಿ ಮಾಡಿದೆ.

### ವಿ.ಸೀತಾರಾಮಯ್ಯ

ಕನ್ನಡ ಲಲಿತ ಪ್ರಬಂಧ ಸಾಹಿತ್ಯ ಪರಂಪರೆಯಲ್ಲಿ ಗುರುತಿಸಿಕೊಂಡ ಪ್ರಮುಖರಲ್ಲಿ ವಿ.ಸೀ.ಯವರು ಕೂಡ ಒಬ್ಬರು. ಇವರು ಲಲಿತ ಪ್ರಬಂಧ ಪ್ರಕಾರಕ್ಕೆ ನೀಡಿದ ಕಾಣಿಕೆ ಮಹತ್ವದ್ದಾಗಿದೆ. 'ಪಂಪಾಯಾತ್ರೆ' ಇವರ ಲಲಿತ ಪ್ರಬಂಧ ಎಂದು ವರದರಾಜ ಹುಯಿಲಗೋಳರು ಗುರುತಿಸಿದ್ದಾರೆ. ಇದೊಂದು ಪ್ರವಾಸ ಕಥನ. ವಿ.ಸೀ.ಯವರು ಮೂಲತಃ ಕವಿಗಳು, ಚಿಂತಕರು. ಅವರ ಸಾಹಿತ್ಯ ಕೃಷಿ ವೈವಿಧ್ಯವುಳ್ಳದ್ದಾಗಿದೆ. ಅಂತೆಯೇ ಅವರು 'ಬೆಳದಿಂಗಳು'(೧೯೫೯) ಮತ್ತು 'ಸೀಕರಣೆ'(೧೯೭೦) ಎಂಬ ಎರಡು ಪ್ರಬಂಧ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಕವಿ ಮನಸ್ಸಿನ ವರ್ಣನೆಗಳಿಂದ ತಿಳಿಯಾದ ಹಾಸ್ಯದಿಂದ, ಹಾಸ್ಯದ ಒಡಲಲ್ಲಿರುವ ಸಾಂಸ್ಕೃತಿಕ ಕಾಳಜಿಯಿಂದ ಅದರ ವಸ್ತುವಿನಲ್ಲಿರುವ ಭಾವನಾತ್ಮಕ ಸಂಬಂಧದಿಂದ ಓದುಗರ ಮೇಲೆ ಪ್ರಭಾವ ಬೀರುತ್ತದೆ. 'ಮೈಸೂರು ರುಮಾಲು' ಯಾರು ಮರೆಯಲಾರದ ಒಂದು ವಿಶಿಷ್ಟ ಪ್ರಬಂಧ. ಅದರಲ್ಲಿ ಅವರು 'ಹೆಂಗಸಿನ ಮನಸ್ಸಿನ್ನೆಳೆಯಬಹುದು, ನೀರಿನಲ್ಲಿರುವ ಮೀನಿನ ಕಾಲನ್ನು ಕಾಣಬಹುದು. ಅದೃಷ್ಟದಲ್ಲಿ ಏನು ಬರೆದಿದೆಯೆಂದು ಗುಣಿಸಬಹುದು. ಮೃತ್ಯುವಿನ ಬಸಿರನ್ನೆ ಬಗೆದು ತೆಗೆದು ಬದುಕಿ ಹೊರಕ್ಕೆ ಬರಬಹುದು. ಆದರೆ, ರುಮಾಲನ್ನು ಕೆಡಿಸದೆ ಯಾವಾಗಲೂ ಸರಿಯಾಗಿಯೇ ಕಟ್ಟುತ್ತೇನೆನ್ನುವುದು ಮಾತ್ರ ಸಾಧ್ಯವಿಲ್ಲ" ಎನ್ನುತ್ತಾರೆ.

ವಿ.ಸೀ.ಯವರ ದೃಷ್ಟಿಯಲ್ಲಿ ಪ್ರಬಂಧವೆಂದರೆ 'ಮನಸ್ಸಿನ ಓಟದ ಒಂದು ಚಿತ್ರ'. ಸಾಮಾನ್ಯವಾಗಿ ಇದು ಎಲ್ಲರ ಅನುಭಾವದಲ್ಲಿ ಆಗಿರುತ್ತದೆ. ಆದರೆ ಅಂಥ ವಿಷಯಗಳನ್ನು ಬರವಣಿಗೆ ಮೂಲಕ ಸಾಹಿತ್ಯಕ್ಕೆ ಇಳಿಸುವುದು ವಿ.ಸೀ.ಯಂತವರಿಗೆ ಸಾಧ್ಯ. ಇವರ ಪ್ರಬಂಧಗಳಲ್ಲಿ ಕನ್ನಡ ಭಾಷೆ, ಸಂಸ್ಕೃತಿಗಳ ಗಾಢ ಸಂಬಂಧ, ನಯಗಾರಿಕೆ, ತಿಳಿಯಾದ ಹಾಸ್ಯ, ಲವಲವಿಕೆ ಮುಂತಾದ ಗುಣಗಳಿಂದ ಕೂಡಿದ ಹಾಗೂ ಓದುಗರಿಗೆ ಸಾತ್ವಿಕ ಅನುಭವ ನೀಡುವ ಇವರ ಪ್ರಬಂಧಗಳು ಮೇಲ್ಮಟ್ಟದಲ್ಲಿ ನಿಲ್ಲುತ್ತವೆ.

**ನಾ.ಕಸ್ತೂರಿ**

ಕನ್ನಡದಲ್ಲಿ ಹರಟೆಗಳ ಪರಂಪರೆಯನ್ನು ಹುಟ್ಟು ಹಾಕಿದವರಲ್ಲಿ ಇವರು ಒಬ್ಬರಾಗಿದ್ದಾರೆ. ಮಲಯಾಳಂನಿಂದ ಕನ್ನಡಕ್ಕೆ ಬಂದ ಅಪರೂಪದ ಲೇಖಕರೆಂದರೆ ನಾ.ಕಸ್ತೂರಿ. ಇವರು ಒಬ್ಬ ಹಾಸ್ಯ ಪ್ರಬಂಧಕಾರರು. "ಉಪಾಯ ವೇದಾಂತ" ಸರಸ-ವಿನೋದಗಳಿಂದ ತುಂಬಿದ ಒಂದು ಹಾಸ್ಯ ಕೃತಿ. ಹರಟೆ ಅವರ ಪ್ರಕೃತಿ ಸಿದ್ಧವಾದ ಗುಣವಾಗಿರುವಂತೆ ತೋರುತ್ತದೆ. ಮಾನವನ ಸ್ವಭಾವ, ಅಲ್ಲಿಯ ಕೊರತೆಗಳು, ನಾ ಕಸ್ತೂರಿಯವರಿಗೆ ಸಹಜವಾಗಿ ಗಮನಕ್ಕೆ ಬರುತ್ತವೆ. ಅವರ 'ಅನರ್ಥಕೋಶ' ವಿಡಂಬನೆಯಲ್ಲಿಯೇ ಹೊಸದೇನನ್ನು ಹೇಳುತ್ತದೆ. 'ಪಾತಾಳದಲ್ಲಿ ಪಾಪಚ್ಚಿ' ಕೂಡ ಒಂದು ಸೊಗಸಾದ ಪ್ರಬಂಧ, 'ನನ್ನ ಬೆನ್ನು' ಒಂದು ಪ್ರಸಿದ್ಧ ಪ್ರಬಂಧವಾಗಿದೆ. ಇಲ್ಲಿ ಬೆನ್ನು ನೋಡಿ ಯಾರು ಯಾರು ಏನೆಂದು ಭಾವಿಸುತ್ತಾರೆಂಬುದನ್ನು ಅಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ. ಹೀಗೆ ಹತ್ತು ಹಲವಾರು ಪ್ರಬಂಧಗಳನ್ನು ಬರೆದು ಪ್ರಬಂಧ ಪ್ರಪಂಚದಲ್ಲಿ ಮುಖ್ಯರಾಗಿ ಗುರುತಿಸಿಕೊಂಡಿದ್ದಾರೆ.

**ರಾ.ಕು.**

ಕನ್ನಡ ಲಲಿತ ಪ್ರಬಂಧ ಪರಂಪರೆಯಲ್ಲಿ ಎ.ಎನ್.ಮೂರ್ತಿರಾಯರಿಗೆ, ಅಗ್ರಗಣ್ಯ ಪಟ್ಟ ದೊರೆತರೆ. ಈ ತಲೆಮಾರಿನ ಪ್ರಬಂಧಕಾರರಲ್ಲಿ ರಾ.ಕು. ಅವರಿಗೆ ಆ ಪಟ್ಟ ಸಲ್ಲುತ್ತದೆ. ಇವರು ಪ್ರಬಂಧ ಪ್ರಕಾರದಲ್ಲಿ ಹಲವಾರು ಪ್ರಬಂಧಗಳನ್ನು ಬರೆದಿದ್ದಾರೆ. ಅದರಲ್ಲಿ 'ಗಾಳಿಪಟ', 'ದೇವಕನ್ನೆ' ಎಂಬ ಎರಡು ಸಂಕಲನಗಳನ್ನು ಪ್ರಕಟಿಸಿದ್ದರೂ ಪ್ರಬಂಧ ಸಾಹಿತ್ಯ ಪ್ರಕಾರದ ಎಲ್ಲಾ ಸಾಧ್ಯತೆಗಳನ್ನು ಪ್ರಕಟಪಡಿಸಿದ್ದು 'ಗಾಳಿಪಟ'ದಲ್ಲಿಯೇ. ಅವರು ಉಪಯೋಗಿಸುವ ವ್ಯಂಗೋಕ್ತಿ, ಕಟೋಕ್ತಿ, ತರ್ಕ, ಜಿಜ್ಞಾಸೆ, ಹಳೆಗನ್ನಡ ಕಾವ್ಯದ ಸಾಲುಗಳು, ಉಪಮೆಗಳು, ಸೂಕ್ತಿಗಳು ಹಾಗೂ ವಿಚಾರಗಳು, ಇವುಗಳ ಮಿಶ್ರಣ ತುಂಬಾ ಆಕರ್ಷಕವಾಗಿವೆ. ಈಚೆಗೆ ಬಂದ ಅವರ 'ಶೇಷ ವಿಶೇಷ' ನಿಸ್ಸಂದೇಹವಾಗಿ ಅವರ ಚಿಂತನೆಯ ಪಕ್ವತೆಯನ್ನು ಸೂಚಿಸುತ್ತದೆ. ಸಂಸ್ಕೃತ, ಕನ್ನಡ ಮತ್ತು ಇಂಗ್ಲೀಷ್ ಸಾಹಿತ್ಯದ ಗಾಢ ವ್ಯಾಸಂಗ, ಜೀವನವನ್ನು ಸೂಕ್ಷ್ಮವಾಗಿ ನೋಡುವ ದೃಷ್ಟಿ, ಭಾಷೆಯ ಮೇಲಿನ ಪ್ರಭುತ್ವ, ಅವರು ಬಳಸುವ ಸೂಕ್ಷ್ಮ ಕೌಶಲ್ಯಗಳಿಂದಾಗಿ ರಾ.ಕು. ಪ್ರಬಂಧಗಳು ಕನ್ನಡ ಪ್ರಬಂಧ ಸಾಹಿತ್ಯದಲ್ಲಿ

ಮೇಲ್ಪಂಕ್ತಿಯಲ್ಲಿ ನಿಲ್ಲುತ್ತವೆ. ದ.ರಾ.ಬೇಂದ್ರೆಯವರು ರಾ.ಕು. ಅವರ ವಾಣಿ ವಿಲಾಸದ ಬೆಡಗು, ಬಿನ್ನಾಣಗಳನ್ನು ಮುಕ್ತ ಮನಸ್ಸಿನಿಂದ ಪ್ರಶಂಸಿಸಿದ್ದಾರೆ. ರಂ.ಶ್ರೀ. ಮುಗುಳಿಯವರು ಅವರ ವಕ್ರೋಕ್ತಿ ವಿಲಾಸದ ಒಡಲಲ್ಲಿ ಗಾಂಭೀರ್ಯವಿರುವುದನ್ನು ಗುರುತಿಸಿದ್ದಾರೆ. ಇವರ ಲಲಿತ ಪ್ರಬಂಧಗಳು ತರ್ಕಪೂರ್ಣವಾಗಿ ಜಿಜ್ಞಾಸೆ ಮೂಡಿಸುವ, ವೈಚಾರಿಕ ದೃಷ್ಟಿಕೋನವುಳ್ಳ, ಉಪಮೆ, ಸೂಕ್ತಿಗಳಿಂದ ಕೂಡಿದ ವಿಚಾರಗಳಿಂದ ಇವರ ಪ್ರಬಂಧಗಳು ಆಕರ್ಷಕವಾಗಿವೆ.

**ಕುವೆಂಪು**

ನವೋದಯ ಸಾಹಿತ್ಯದ ಅಗ್ರಮಾನ್ಯ ಶ್ರೇಷ್ಠ ಕವಿಗಳೆಂದು ಗುರುತಿಸಿಕೊಂಡಿರುವ ಕುವೆಂಪುರವರು ಪ್ರಬಂಧ ಸಾಹಿತ್ಯದಲ್ಲಿ ಸಹ ತಮ್ಮ ಛಾಪನ್ನು ಮೂಡಿಸಿದ್ದಾರೆ. ಕುವೆಂಪುರವರ ಕಾವ್ಯದಲ್ಲಿ ಹೆಚ್ಚಾಗಿ ನಿಸರ್ಗ ಪ್ರಿಯತೆಯನ್ನು ಕಾಣುತ್ತೇವೆ. ಅವರ ಕಾವ್ಯ ಯಾವಾಗಲೂ ಗಂಭೀರವಾದದ್ದೆ ಹಾಗಿದ್ದರೂ, ಹಾಸ್ಯ ಆಗಾಗ ಮಿಂಚುವುದುಂಟು. "ಮಲೆನಾಡಿನ ಚಿತ್ರಗಳು" ವರ್ಣನಾತ್ಮಕವಾಗಿದ್ದರೂ ಬದುಕಿನ ಪದರುಗಳನ್ನು ಬಿಚ್ಚಿಡುತ್ತದೆ. ಮಲೆನಾಡಿನ ರಸಮಯ ದೃಶ್ಯ, ಮಲೆನಾಡಿನ ಬದುಕು, ಅಲ್ಲಿಯ ಸನ್ನಿವೇಶ ಚಿತ್ರಣ, ಜನರ ಭಾವನೆಗಳು ಅವರ ಪ್ರಬಂಧಗಳಲ್ಲಿ ಸೊಗಸಾಗಿಯೇ ಮೂಡಿರುವುದನ್ನು ಕಾಣಬಹುದು. ಈ ಪ್ರಬಂಧದಿಂದ ಅವರ ಪೂರ್ವಶ್ರಮದ ಅನುಭವಗಳನ್ನು ಹೇಳಿಕೊಂಡಂತಿವೆ. ಮಹೋಪಮೆ, ಭೂಮಾನುಭೂತಿ, ದಿವ್ಯ ನಿರ್ಲಕ್ಷ್ಯ, ಇವೆಲ್ಲಾ ಉತ್ತರಾಶ್ರಮದ ಕಲ್ಪನೆಗಳು, ನವಿಲು ಕಲ್ಲು, ಸಿಬ್ಬಲು ಗುಡ್ಡೆ, ಸಾರಿಕೆ ಬೇಟೆ, ಬೆಳ್ದಿಂಗಳ ಬೇಟೆ, ಇತ್ಯಾದಿ ಬಾಲ್ಯದಿಂದ ಕಂಡುಕೊಂಡ ಅನುಭವಗಳ ಚಿತ್ರಣಗಳಾಗಿವೆ. ಅವರ ಬೆರಗುಗೊಳಿಸುವ ಪ್ರಕೃತಿ ವರ್ಣನೆ ವಿಶಿಷ್ಟ ಲೋಕವನ್ನು ಕಣ್ಣಿಗೆ ಕಟ್ಟುವಂತೆ ಮಾಡುತ್ತದೆ. ಇವರ ಪ್ರಬಂಧಗಳಲ್ಲಿ ಮಲೆನಾಡಿನ ಪ್ರಕೃತಿ ವರ್ಣನೆ ಜೊತೆ ಜೊತೆಗೆ ಜೀವನಾನುಭವದ ಹಾಸ್ಯವನ್ನು ಬೆರೆಸಿ ಬರೆದಿದ್ದನ್ನು ಕಾಣಬಹುದು.

**ಬೇಂದ್ರೆ**

ವರಕವಿ ದ.ರಾ.ಬೇಂದ್ರೆ ಒಬ್ಬ ಗಾರುಡಿಗ. ಲಯ, ಪ್ರಾಸ, ಧ್ವನಿ ಶಕ್ತಿ ಮುಂತಾದವುಗಳ ಮೂಲಕ ಭಾವಗೀತೆಯ ಗುಂಗು ಹಿಡಿಸುವ ಈ ಕವಿ ಏಕಾಂಕ ನಾಟಕಗಳಲ್ಲಿ, ಹರಟೆಗಳಲ್ಲಿ, ಸಾರ್ವಜನಿಕ ಉಪನ್ಯಾಸಗಳಲ್ಲಿ, ವಿಲಕ್ಷಣವಾದ ಮಾತಿನ ಮೋಡಿಯನ್ನು ಹಾಕುತ್ತಾರೆ. ಶಬ್ದಕ್ಕೆ ಶಬ್ದ, ಮಾತಿಗೆ ಮಾತು ಹೆಣೆದು ಮರಳುಗೊಳಿಸುವ ಇವರ ಮಾತಿನ ಶೈಲಿ ಕೇಳುಗರನ್ನು ಬೆರಗುಗೊಳಿಸುತ್ತದೆ. ಇಂತಹ ಕವಿಗಳು ತಮ್ಮ ಸಾಹಿತ್ಯ ಕೃಷಿಯಲ್ಲಿ ಪ್ರಬಂಧ ಸಾಹಿತ್ಯಕ್ಕೂ ತಮ್ಮ ಕೊಡುಗೆಯನ್ನು ಸಲ್ಲಿಸಿದ್ದಾರೆ. ಇವರು ಹೆಚ್ಚಾಗಿ ನಗೆ ಹುಟ್ಟಿಸುವ ಯೋಚನೆಯಲ್ಲಿ ತೊಡಗಿಸುವ ಹಲವಾರು ಹರಟೆ ಪ್ರಬಂಧಗಳನ್ನು ಬರೆದಿದ್ದಾರೆ. ಇವರ 'ನಿರಾಭರಣ ಸುಂದರಿ'ಯಲ್ಲಿಯ ಹರಟೆಗಳು ನಮ್ಮ ಗಮನವನ್ನು ಸೆಳೆಯುತ್ತವೆ.

‘ಸಾವಿನೊಡನೆ ಸರಸ’ ‘ನನ್ನ ಅವತಾರ’ ‘ಉಗುಳುವುದು’ ಇತ್ಯಾದಿ ಹರಟೆಗಳಲ್ಲಿ ಅವರ ಮಾತಿನ ಮೋಡಿಯನ್ನು ಕಾಣಬಹುದಾಗಿದೆ.

**ಪು.ತಿ.ನ.**

ಇವರು ಒಟ್ಟು ನಾಲ್ಕು ಪ್ರಬಂಧ ಸಂಕಲನಗಳನ್ನು ಪ್ರಕಟಿಸಿದ್ದಾರೆ. ‘ರಾಮಾಚಾರಿಯ ನೆನಪು’ (೧೯೩೧) ರಥಸಪ್ತಮಿ (೧೯೪೯) ‘ಧೇನುಕ ಪುರಾಣ’ (೧೯೬೭) ಇವು ಅವರ ಪ್ರಬಂಧ ಸಂಕಲನಗಳು. ಆದರೆ ಎಲ್ಲವೂ ಲಲಿತವಾಗಿಲ್ಲ. ಪು.ತಿ.ನ ಅವರೇ ಹೇಳಿದಂತೆ ಕೆಲವು ಭಾವನಾ ಚಿತ್ರಗಳಾಗಿವೆ. ಇನ್ನೂ ಕೆಲವು ಕಥನಾತ್ಮಕವಾಗಿವೆ. ‘ಈಚಲು ಮರದ’ ಕೆಳಗೆ ಮತ್ತು ‘ಧೇನುಕ ಪುರಾಣ’ಗಳಲ್ಲಿ ಕೆಲವು ಪ್ರಬಂಧದ ಮಾದರಿಗಳಿವೆ. ಇವರ ಪ್ರಬಂಧಗಳು ತಾತ್ವಿಕ ಚಿಂತನೆಯಲ್ಲಿಯೇ ಹೊಸದಾರಿಯನ್ನು ಹುಡುಕಿಕೊಳ್ಳುತ್ತವೆ. ಇವರ ಪ್ರಬಂಧಗಳಲ್ಲಿನ ವಾದಸರಣಿ, ಮೆಚ್ಚುವಂತಹದ್ದು. ‘ಭೀತ ಮೀಮಾಂಸೆ’ಯಲ್ಲಿ ಪು.ತಿ.ನ ಅವರು ‘ದಯವೇ ಧರ್ಮದ ಮೂಲ’ ಎಂಬುದನ್ನು ‘ಭಯವೇ ಧರ್ಮದ ಮೂಲ’ ಎಂದು ಹೊರಳಿಸಿದ್ದಾರೆ. ಈ ಹರಿಭಕ್ತಿ ಕವಿ ಲಲಿತ ಪ್ರಬಂಧಗಳಲ್ಲಿಯೂ ತಮ್ಮ ಭಾವಲಹರಿಗಳನ್ನು ಹೊರಳಿಸಿದ್ದಾರೆ. ಹಾಗೂ ತರ್ಕ ಸಮ್ಮತವಾಗಿ ಹರಿಬಿಟ್ಟ ವಿಚಾರಗಳು ಅವರ ಸಾಧನೆಯ ಮೆರಗನ್ನು ನೆನಪಿಡುವಂತೆ ಮಾಡುತ್ತವೆ.

**ಅ.ರಾ.ಮಿತ್ರ**

ಅ.ರಾ.ಮಿತ್ರರು ಸ್ವತಃ ಲಲಿತ ಪ್ರಬಂಧಕಾರರಾಗಿ, ಸಂಪಾದಕರಾಗಿ, ಸಾಹಿತ್ಯ ಪ್ರಕಾರದ ಸ್ವರೂಪ ಹಾಗೂ ಚರಿತ್ರೆಯ ಬಗೆಗೆ ವಿವರವಾದ ಲೇಖನಗಳನ್ನು ಬರೆದಿದ್ದಾರೆ. ಇವರು ಬಾಲ್ಕಾನಿಯ ಬಂಧುಗಳು, ಯಾರೋ ಬಂದಿದ್ದರು ಎಂಬ ಪ್ರಬಂಧಗಳನ್ನು ಬರೆದಿದ್ದಾರೆ. ತಮ್ಮ ಪ್ರಬಂಧಗಳಲ್ಲಿ ಮಾನವ ಸ್ವಭಾವದ ಅರೆ ಕೊರೆಗಳನ್ನು ವ್ಯಕ್ತಪಡಿಸುವ ರೀತಿ ಅನನ್ಯವಾಗಿದೆ. ನಯ, ನಾಜೂಕಿನ ಭಾಷೆ, ವಸ್ತುವನ್ನು ವಿವಿಧ ಮಗ್ಗಲುಗಳಿಂದ ನೋಡಿ ಅದರಲ್ಲಿ ಹರಿಗಡಿಯದ ಏಕ ಸೂತ್ರತೆಯ ರೀತಿ, ಹಾಗೂ ಪ್ರಸನ್ನ ಮನೋಧರ್ಮಗಳನ್ನು ಅವರ ಪ್ರಬಂಧಗಳಲ್ಲಿ ಕಾಣಬಹುದು. ಇವರ ಪ್ರಬಂಧಗಳು ಹಿರಿಯ ತಲೆಮಾರಿನ ಪ್ರಬಂಧಗಳನ್ನು ನೆನಪಿಗೆ ತರುತ್ತವೆ. ಇವರ ಸೂಚನೆ ಪದ ಪ್ರಯೋಗಗಳು ಕುತೂಹಲ ಎನ್ನುವ ಶಬ್ದಚ್ಛೇದಗಳು, ಪ್ರಾಚೀನ ಕವಿವಾಣಿಯ ನೂತನ ಅರ್ಥ ನಿರೂಪಣೆಗಳು ಕಚಗುಳಿಯಿಡುವ ಅವರ ಸಾಲುಗಳು ಅವರ ವಿನೋದ ಪರವಾದ ಶೈಲಿ, ಭಾವನೆಗಳು ಇವರ ಪ್ರಬಂಧಗಳಲ್ಲಿ ನೋಡಬಹುದಾಗಿದೆ.

**ಎಚ್ಚೆಸ್ಕೆ**

ವ್ಯಕ್ತಿ ಚಿತ್ರಗಳಲ್ಲಿ ಕುಸುರಿ ಕೆಲಸ ಮಾಡುವ ಮತ್ತೊಬ್ಬ ಮಹತ್ವದ ಪ್ರಬಂಧಕಾರರಾಗಿ ಎಚ್ಚೆಸ್ಕೆಯವರು ಕಾಣುತ್ತಾರೆ. ಇವರ ಬರವಣಿಗೆಯ ಶೈಲಿ ಅವರದ್ದೇ ಎನ್ನುವಷ್ಟು ವಿಶಿಷ್ಟ. ಅವರ ಹೆಸರಿಲ್ಲದ ಅವರ ವ್ಯಕ್ತಿ ಚಿತ್ರಗಳನ್ನು ಕನ್ನಡದ ಓದುಗರು ಶೈಲಿಯ ಮೂಲಕವೇ ಅವರದೆಂದು ತತ್

ಕ್ಷಣಕ್ಕೆ ಗುರುತಿಸಬಹುದಾಗಿದೆ. ಈ ವಿಶಿಷ್ಟ ಶೈಲಿಯ ಎಚ್ಚೆಸ್ಕೆ 'ಜೇಡನ ಬಲೆ' 'ಕಳ್ಳಹೊಕ್ಕ ಮನೆ' ಮುಂತಾದ ಪ್ರಬಂಧ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಸಾಮಾನ್ಯವಾಗಿ ಇವರ ಪ್ರಬಂಧಗಳು ಸುದೀರ್ಘವಾಗಿರುವುದಿಲ್ಲ ವ್ಯಾಪ್ತಿಯಿಲ್ಲದಿದ್ದರೂ ಅರ್ಥವಂತಿಕೆ ಬೇಕಾದಷ್ಟಿರುತ್ತದೆ. 'ಜೇಡನ ಬಲೆ' 'ಗಡಿಯಾರಗಳು' 'ನಾಯಿ ಬಾಲ' ಇತ್ಯಾದಿ ಪ್ರಬಂಧಗಳು ಅವರ ಕಲ್ಪಿಕ ಶಕ್ತಿ, ಹದವರಿತ ಪದಪ್ರಯೋಗಗಳಿಂದ ರಂಜನೆಯನ್ನು ನೀಡುತ್ತಲೇ ಬದುಕಿನ ಒಳಪದರುಗಳನ್ನು ಬಿಚ್ಚಿಡುತ್ತವೆ. 'ಕಳ್ಳ ಹೊಕ್ಕ ಮನೆ'ಯಂಥ ಕುತೂಹಲಕಾರಿ ಪ್ರಬಂಧಗಳು ವಿಶೇಷ ಆಕರ್ಷಣೆಯನ್ನು ನೀಡುತ್ತವೆ.

### ಕೆ.ಎಸ್.ನರಸಿಂಹಸ್ವಾಮಿ

ಕೆ.ಎಸ್.ಎನ್‌ರವರು 'ಉಪವನ' ಎಂಬ ಲಲಿತ ಪ್ರಬಂಧಗಳ ಸಂಕಲನ ೧೯೫೮ರಲ್ಲಿ ಪ್ರಕಟವಾಗಿದೆ. ಕವಿ ಹೃದಯ ನರಸಿಂಹಸ್ವಾಮಿಯವರು ತುಂಬಾ ಕಡಿಮೆ ಶಬ್ದಗಳನ್ನು ಬಳಸಿ ಆಕರ್ಷಕ ಚಿತ್ರಗಳನ್ನು ನೀಡುವ ರೀತಿ ಗಮನಾರ್ಹವಾಗಿದೆ. 'ಸಿಟಿಬಸ್ಸು', 'ತುಂಗಭದ್ರ' ಮುಂತಾದ ಪ್ರಬಂಧಗಳಲ್ಲಿ ನರಸಿಂಹ ಸ್ವಾಮಿಯವರ ಕಾವ್ಯ ಮತ್ತು ಗದ್ಯದ ಅಂಶಗಳು ಒಂದನ್ನೊಂದು ಹಿಂದೆ ಹಾಕುತ್ತಾ ಸ್ಪರ್ಧಿಸುವ ಪರಿ ಲಲಿತ ಪ್ರಬಂಧಗಳಿಗೆ ಹೊಸ ಆಯಾಮವನ್ನು ನೀಡಿದೆ. ವೆಂಕಣ್ಣಯ್ಯನವರನ್ನು ಕುರಿತು ಬರೆದ ಇವರ ಪ್ರಬಂಧ ವ್ಯಕ್ತಿ ಚಿತ್ರಕ್ಕೆ ಅತ್ಯುತ್ತಮ ನಿದರ್ಶನವಾಗಿದೆ.

### ಸಿಂಪಿ ಲಿಂಗಣ್ಣ

ಹಿರಿಯ ತಲೆಮಾರಿನ ಲೇಖಕರಾದ ಸಿಂಪಿ ಲಿಂಗಣ್ಣನವರು ಹಲವಾರು ಪ್ರಬಂಧ ಸಂಕಲನಗಳನ್ನು ರಚಿಸಿದ್ದಾರೆ. ಗೊರೂರು ಅವರಂತೆ ಗ್ರಾಮೀಣ ಸಂಸ್ಕೃತಿಯ ಸಂಕಲನಗಳನ್ನು ರಚಿಸಿದ್ದಾರೆ. ಇವರು ಗ್ರಾಮೀಣ ಜೀವನದ ಒಂದೆರಡು ತಲೆಮಾರಿನ ಚಿತ್ರಣವನ್ನು ಹಾಗೂ ಗ್ರಾಮೀಣ ಸೊಬಗನ್ನು ಸೆರೆ ಹಿಡಿದಿದ್ದಾರೆ. ಇದಕ್ಕೆ ಉದಾ 'ತಲೆಮಾರಿನ ಹಿಂದೆ' ಎಂಬ ಪ್ರಬಂಧದಲ್ಲಿ ಗುರುತಿಸಬಹುದು. ಇದು ಗೊರುರರ 'ನಮ್ಮೂರ ರಸಿಕರು', ಪುಸ್ತಕವನ್ನು ನೆನಪಿಗೆ ತರುತ್ತದೆ. 'ದಿಟ್ಟಿಸಿ ನೋಡಿದರೆ' 'ಮಕ್ಕಳಿವರೇ ನಮ್ಮ' 'ಅಸ್ತವ್ಯಸ್ತ' ಹಳ್ಳಿಗಳ ಹದಗೆಟ್ಟ ಸ್ಥಿತಿಗೆ ಕನ್ನಡಿ ಹಿಡಿದಿದೆ. 'ನೂರುಗಡಿಗೆ ಒಂದು ಬಡಿಗೆ' ಒಂದು ನೂರ ಹದಿನೆಂಟು ಪ್ರಬಂಧಗಳ ಸಂಕಲನ, ಇವರ ಪ್ರಬಂಧಗಳನ್ನು ನೋಡಿದಾಗ ತಮ್ಮ ಅನುಭವಿ, ಕಲಿಕೆ, ವಿಚಾರಗಳ ಹಿನ್ನೆಲೆಯಲ್ಲಿ ಸರಳವಾದ ದಾಟಿಯಲ್ಲಿ ನಿರೂಪಿಸುವ ಚಮತ್ಕಾರಿಕೆ ಮಾತಿನ ಶೈಲಿಯೊಂದಿಗೆ ಗಾದೆ ಮಾತಿನಂತೆ ಶೀರ್ಷಿಕೆ ಕೊಡುವ ತಮ್ಮ ಪರಿಸರದ ಸಾಮಾನ್ಯ ಸಂಗತಿಗಳಿಗೆ ನಿದರ್ಶನ ಕೊಡುವ, ಹಾಗೂ ಜಾನಪದ ಸಾಹಿತ್ಯದಿಂದ ವಚನಕಾರರ ಸಾಹಿತ್ಯ ಭಂಡಾರದವರೆಗಿನ ಅವರ ವಿದ್ವತ್ ಓದುಗರ ಮನವನ್ನು ನೇರವಾಗಿ ತಲುಪುತ್ತವೆ.

ಇಲ್ಲಿಯವರೆಗೆ ಬಂದ ಲೇಖಕರು ಪ್ರಬಂಧ ಸಾಹಿತ್ಯದ ಮೊದಲ ಹೆಜ್ಜೆಯ ಪ್ರಮುಖ ಲೇಖಕರೆಂದು ಗುರುತಿಸಬಹುದು. ಅ ಹೆಜ್ಜೆಗಳು ಸಾಕಷ್ಟು ಧೃಢವಾಗಿಯೇ ಇದ್ದವು. ಆ ಹೆಜ್ಜೆಗಳಲ್ಲೇ

ಮುಂದಿನ ತಲೆಮಾರಿನವರು ಹಾದಿ ತುಳಿದಿದ್ದಾರೆ. ಇತ್ತೀಚೆಗೆ ಲಲಿತ ಪ್ರಬಂಧಗಳ ಬರಹ ಕಡಿಮೆಯಾಗಿದೆ. ಬಾಳು ಹೆಚ್ಚು ಗಂಭೀರವಾದದು. ಇದಕ್ಕೆ ಒಂದು ಕಾರಣವಿರಬಹುದು. ಆದರೂ ಇತ್ತೀಚೆಗೆ ಕೆಲವು ಕವಿಗಳು ಈ ಪ್ರಕಾರದಲ್ಲಿ ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ. ಅಂತವರಲ್ಲಿ ಡಾ. ಪ್ರಭುಶಂಕರ, ಈರಪ್ಪ ಕಂಬಳಿ, ಎನ್ಕೆ, ಪಿ.ಎಸ್.ರಾಮಾನುಜಂ, ಅ.ರಾ.ಸೆ. ಸೂಗಯ್ಯ, ಹಿರೇಮಠ, ಮಲ್ಲಿಕಾರ್ಜುನ ಹುಲಗಬಾಳಿ, ಅನುಸೂಯ, ಸಿದ್ದರಾಮ, ವೈದೇಹಿ, ವಸುಮತಿ ಉಡುಪ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ರಾಮಚಂದ್ರ ದೇವ, 'ಚಂದ್ರಶೇಖರ ಆಲೂರು, ವೀರೇಂದ್ರ ಸಿಂಪಿ, ಮೊಗಳ್ಳಿ ಗಣೇಶ, ಹಿರೇಮಲ್ಲೂರು ಈಶ್ವರನ್, ಬಿ.ಆರ್.ವಾಡಪ್ಪಿ, ಎನ್.ಎಸ್.ಗದಗಕರ, ಚಿದಾನಂದ ಸಾಲಿ ಮುಂತಾದವರು ಇಂದಿಗೂ ಪ್ರಬಂಧ ಸಾಹಿತ್ಯವನ್ನು ಬೆಳೆಸುತ್ತಿದ್ದಾರೆ.

ಕನ್ನಡ ಪ್ರಬಂಧ ಲೋಕದ ಕಡೆ ದೃಷ್ಟಿ ಹಾಯಿಸಿದಾಗ ಪ್ರಬಂಧಕಾರರಲ್ಲಿ ವಿಷಯ ನಿರೂಪಣ ಸ್ಪಷ್ಟತೆ ಮರ್ಯಾದೆ ಮೀರದ ಹಾಸ್ಯ, ಭಾಷಾ ಸೌಷ್ಮವ, ಆತ್ಮನಿಷ್ಮತೆ, ಕೃತಕವಲ್ಲದ ಚಮತ್ಕಾರ, ವಾಚಕನೊಂದಿಗೆ ಸಾಮೀಪ್ಯ ಬಂಧನ, ಒಂದು ದೃಷ್ಟಿಕೋನದಿಂದ ವಸ್ತುವನ್ನು ಕೆಣಕಿ ಮತ್ತೊಂದು ದೃಷ್ಟಿ ಕೇಂದ್ರವನ್ನು ನಿರ್ಮಾಣ ಮಾಡುವ ಚಾತುರ್ಯ, ಒಳ್ಳೆಯ ಅಂತಃಕರಣ, ವಸ್ತು ವೈವಿಧ್ಯತೆ, ಶೈಲಿ ಈ ಎಲ್ಲಾ ಉತ್ತಮ ಪ್ರಬಂಧ ಲಕ್ಷಣಗಳನ್ನು ನಮ್ಮ ಪ್ರಬಂಧ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಈ ಪ್ರಬಂಧ ಇಂಗ್ಲೀಷ್‌ನ ಮೂಲ ಪ್ರಬಂಧದ ಪ್ರೇರಣೆ ಪಡೆದಿದ್ದರೂ ಮಣ್ಣಿನ ಮಗಳೇ ಆಗಿ ಬೆಳೆದಿರುವುದು ಮೆಚ್ಚತಕ್ಕ ವಿಷಯವಾಗಿದೆ. ಕನ್ನಡಿಗರ ರಸಿಕತೆ, ವಿನೋದಶೀಲತೆ, ಸಹೃದಯತೆ, ಭಾಷೆಯೊಂದಿಗೆ ಆಡುವ ಚೆಲ್ಲಾಟ ಈ ಎಲ್ಲಾ ಗುಣಲಕ್ಷಣಗಳನ್ನು ಪ್ರಬಂದಕಾರರಲ್ಲಿ ಕಾಣಬಹುದಾಗಿದೆ.

ಕನ್ನಡ ಲಲಿತ ಪ್ರಬಂಧ ಸಾಹಿತ್ಯವನ್ನು ನಾವು ಅಧ್ಯಯನಕ್ಕೆ ಒಳಪಡಿಸಿದಾಗ ಈ ಮೇಲೆ ಉಲ್ಲೇಖಿಸಲಾದ ಎಲ್ಲಾ ಹಿರಿ ಕಿರಿಯ ಸಾಹಿತಿಗಳು ಕನ್ನಡ ಲಲಿತ ಪ್ರಬಂಧ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟ ಸೇವೆ, ಕೊಡುಗೆ ನೀಡಿದ್ದಾರೆ. ಅಂಥವರ ಸಾಲಿನಲ್ಲಿ ನಿಲ್ಲತಕ್ಕವರು ಉತ್ತರ ಕರ್ನಾಟಕದ ಬೀದರ ಪರಿಸರದ ಪ್ರಮುಖ ಲೇಖಕರಲ್ಲಿ ವೀರೇಂದ್ರ ಸಿಂಪಿಯವರು ಒಬ್ಬರು. ಇವರು ಒಬ್ಬ ಬರಹಗಾರ, ವಿಮರ್ಶಕ, ವಿಚಾರವಾದಿ, ಅಂಕಣ ಬರಹಗಾರರಾಗಿ ಗುರುತಿಸಿಕೊಂಡಿದ್ದಾರೆ. ಅದರಲ್ಲೂ ಮುಖ್ಯವಾಗಿ ಒಬ್ಬ ಖ್ಯಾತ ಲಲಿತ ಪ್ರಬಂಧಕಾರರಾಗಿ ಕಂಡುಬರುತ್ತಾರೆ. ಅದಕ್ಕಂತಲೇ ಅವರ ಇತರ ಸಾಹಿತ್ಯಕ್ಕಿಂತ 'ಲಲಿತ ಪ್ರಬಂಧ' ಸಾಹಿತ್ಯ ನನ್ನನ್ನು ಆಕರ್ಷಿಸಿರುವುದು ಮಹತ್ವದ ಸಂಗತಿ.

ಕನ್ನಡ ಲಲಿತ ಪ್ರಬಂಧ ಸಾಹಿತ್ಯವನ್ನು ಮೂರು ಘಟ್ಟಗಳಲ್ಲಿ ವಿಂಗಡಿಸಿ ನೋಡಲಾಗಿದೆ. ಆಯಾ ಕಾಲದ ಸಾಮಾಜಿಕ, ಹಾಗೂ ಪರಿಸರದ ಹಿನ್ನಲೆಯ ಮೇಲೆ ವಸ್ತು, ವೈವಿಧ್ಯತೆಯನ್ನು ಆಧರಿಸಿ ಮೂರು ತಲೆಮಾರುಗಳಲ್ಲಿ ವಿಂಗಡಿಸಿಲಾಗಿದೆ. ಹೀಗಾಗಲೇ ಮೊದಲನೆ ಮತ್ತು ಎರಡನೇ ತಲೆಮಾರಿನ ಅಗ್ರೇಸರ ಹೆಸರು ಹಾಗೂ ಅವರ ಪ್ರಬಂಧ ಸಾಹಿತ್ಯದ ಬಗ್ಗೆ ನೋಡಲಾಗಿದೆ. ಮೂರನೇಯ ತಲೆಮಾರು ಸುನಂದಾ

ಬೆಳಗಾಂವಕರರಿಂದ ಪ್ರಾರಂಭವಾಗಿ ಮುಂದೆ ಅದು ಮ.ಸು.ಕೃಷ್ಣಮೂರ್ತಿ, ವೀರೇಂದ್ರ ಸಿಂಪಿ, ಲಂಕೇಶ, ಯು.ಆರ್.ಅನಂತಮೂರ್ತಿ, ವೈದೇಹಿ, ಈರಪ್ಪ ಕಂಬಳಿ, ಈ ರೀತಿಯಾಗಿ ಸಾಗುವ ಲೇಖಕರಲ್ಲಿ ವೀರೇಂದ್ರ ಸಿಂಪಿಯವರೇ ಅಗ್ರಮಾನ್ಯರಾಗಿ ಗೋಚರಿಸುತ್ತಾರೆ.

ವೀರೇಂದ್ರ ಸಿಂಪಿಯವರು ಕನ್ನಡ ಲಲಿತ ಪ್ರಬಂಧ ಸಾಹಿತ್ಯಕ್ಕೆ ಸಲ್ಲಿಸಿದ ಕೊಡುಗೆಯನ್ನು ಗಮನಿಸಿದಾಗ ಅವರು ಪ್ರಬಂಧಗಳನ್ನು ಅರ್ಥೈಸುವ ರೀತಿ, ವಿಶಿಷ್ಟ ವಸ್ತು, ಭಾಷೆಯಿಂದ ಗಂಭೀರವಾದ ವಿಚಾರವನ್ನು ಸೂಕ್ಷ್ಮ ಒಳನೋಟಗಳಿಂದ ಮನವರಿಕೆ ಮಾಡಿಕೊಡುವ ಅವರ ಪ್ರಬಂಧಗಳು ಹಿಂದಿನ ಪ್ರಬಂಧಕಾರರಿಗಿಂತ ಭಿನ್ನವೆನಿಸಿಕೊಳ್ಳುತ್ತಾರೆ. ನವ್ಯದ ಸಕಲ ಸಿದ್ಧಿಗಳನ್ನು ಬಲ್ಲ ಇವರು ಆ ಕಾಲದ ಲಲಿತ ಪ್ರಬಂಧಕ್ಕೆ ಹಾಗೂ ಅವರ ಹಳೆಯ ಗತ ವೈಭವವನ್ನು ಮರಳಿ ಪಡೆಯಲು ಬಹುವಾಗಿ ಶ್ರಮಿಸಿದವರಲ್ಲಿ ಇವರೇ ಪ್ರಮುಖರು. ತಮ್ಮ ತಂದೆ ಸಿಂಪಿ ಲಿಂಗಣ್ಣ ಹಾಗೂ ಹಲಸಂಗಿ ಗೆಳೆಯರ ಪ್ರಭಾವ ಪ್ರೇರಣೆಗಳಿಂದ ಹಲವಾರು ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಕೊಡುಗೆ ನೀಡಿದ್ದಾರೆ. ಇತರೆ ಸಾಹಿತ್ಯಕ್ಕಿಂತ ಲಲಿತ ಪ್ರಬಂಧಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಟ್ಟಿದ್ದಾರೆ. ಇವರ ಮೊದಲ ಪ್ರಬಂಧ ಸಂಕಲನವೆಂದರೆ 'ಕಾಗದ ಚೂರು' ಇದನ್ನು ೧೯೬೭ರಲ್ಲಿ ಬರೆದು ಪ್ರಕಟಿಸಿದರೆ ಇದರ ಯಶಸ್ಸಿನ ನಂತರ 'ಭಾವ ಮೈದುನ', ೧೯೮೧ರಲ್ಲಿ ಪ್ರಕಟಿಸಿದರು. 'ಸ್ವಚ್ಛಂಧ ಮನದ ಸುಳಿದಾಟ' - ೧೯೮೪ರಲ್ಲಿ ಹೊರ ತಂದರು. ಹಾಗೇನೇ 'ಪರಿಸರ ಸ್ಪಂದನ'-೧೯೮೮. 'ಲಲಿತ ಪ್ರಬಂಧಗಳು' - ೨೦೦೦. ಹೀಗೆ ಒಟ್ಟು ಐದು ಲಲಿತ ಪ್ರಬಂಧ ಸಂಕಲನಗಳಲ್ಲಿ ೫೮ಕ್ಕೂ ಅಧಿಕ ಪ್ರಬಂಧ ಪ್ರಕಟಿಸಿ ಕನ್ನಡ ಲಲಿತ ಪ್ರಬಂಧ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

ವೀರೇಂದ್ರ ಸಿಂಪಿಯರಿಗೆ ನವೋದಯ ಸಂದರ್ಭದ ಸಕಲ ತತ್ವವನ್ನು ತಮ್ಮ ಪ್ರಬಂಧಗಳಲ್ಲಿ ಮೇಳೈಸುವ ಕಾರಣದಿಂದ ಇವರು ಮೊದಲನೇ ತಲೆಮಾರಿನ ಪ್ರಬಂಧಕಾರರ ಪರಂಪರೆಗೆ ಹತ್ತಿರದವರಾಗಿ ಕಂಡುಬರುತ್ತಾರೆ. ಇವರ ಲಲಿತ ಪ್ರಬಂಧಗಳು ಅರ್ಥೈಸುವ ರೀತಿ, ಭಾಷೆ, ವಸ್ತು, ಶೈಲಿಗಳಿಂದ ಸಿಂಪಿ ಲಿಂಗಣ್ಣ ಹಾಗೂ ಮಾಸ್ತಿ ವೆಂಕಟೇಶ ಅಯ್ಯಂಗಾರರ ಸಾಹಿತ್ಯ ಕೃತಿಗಳಲ್ಲಿ ಮೂಲ ಸಾಹಿತ್ಯವನ್ನು ಗಂಭೀರವಾಗಿ ತೆಗೆದುಕೊಂಡು ಅದರ ಸೂಕ್ಷ್ಮತೆಯನ್ನು ಗುರುತಿಸುವ ಕಾರ್ಯ ಇವರ ಪ್ರಬಂಧಗಳಲ್ಲಿ ನೋಡಬಹುದು.

ಇಂಗ್ಲೀಷ್ ಪ್ರಬಂಧಕಾರರಾದ ಎ.ಜಿ.ಗಾರ್ಡಿನರ್ ಅವರ ಶ್ರೀಮಂತ ಬರಹಗಳಿಗೆ ಮನಸೋತ ಇವರು ಇಂಗ್ಲೀಷ್ ಪ್ರಬಂಧಗಳಿಗೆ ಸರಿಸಾಟಿಯಾಗಿ ನಿಲ್ಲಬಲ್ಲ "ಕಾಗದದ ಚೂರು" ಎಂಬ ಪ್ರಬಂಧ ಬರೆದಿದ್ದಾರೆ. ಈ ರೀತಿಯಾಗಿ ಲಲಿತ ಪ್ರಬಂಧವನಕ್ಕೆ ಮೂಲದಿಂದ ಇಂದಿನ ಆಧುನಿಕ ಕಾಲದವರೆಗಿನ ವಿಭಿನ್ನ ಅಂಶಗಳನ್ನು ಬಳಸಿಕೊಂಡು ಎಲ್ಲರಿಗಿಂತ ವಿಭಿನ್ನವಾಗಿ ಇವರ ಪ್ರಬಂಧ ಕಂಡುಬರುತ್ತದೆ.

ಇಂದು ಕನ್ನಡ ಲಲಿತ ಪ್ರಬಂಧಕಾರರ ಸಂಖ್ಯೆ ತುಂಬಾ ಕಡಿಮೆ ಇದೆ. ಅದರಲ್ಲಿ ಮುಖ್ಯರಾಗಿ ಕಾಣುವವರಲ್ಲಿ ವೀರೇಂದ್ರ ಸಿಂಪಿಯವರು ಒಬ್ಬರು. ಇವರ ಪ್ರಬಂಧದ ವೈಶಿಷ್ಟ್ಯತೆಯನ್ನು ಗುರುತಿಸುವುದಾದರೆ ಮೊದಲ ತಲೆಮಾರಿನ 'ಶಿಷ್ಟತೆ', ಎರಡನೇ ತಲೆಮಾರಿನ 'ವೈವಿಧ್ಯತೆ' ಮೂರನೇ ತಲೆಮಾರಿನ 'ಸೃಜನಶೀಲತೆ'ಯನ್ನು ಅವರ ಪ್ರಬಂಧಗಳಲ್ಲಿ ನೋಡಬಹುದು. ಈ ನಿಟ್ಟಿನಲ್ಲಿ ವೀರೇಂದ್ರ ಸಿಂಪಿಯವರು ಹಲವು ಬಗೆಯ ಸಾಹಿತ್ಯ ಸೃಷ್ಟಿಸಿದರೂ ಅದರ ಅಂತಃ ಸತ್ವ ಪೂರ್ತಿಯಾಗಿ ಹರಿದು ಬಂದಿದ್ದು 'ಪ್ರಬಂಧ' ಪ್ರಕಾರದಲ್ಲಿ. ಇದರಲ್ಲೇ ಅವರ ವ್ಯಕ್ತಿತ್ವ ಕಂಡುಕೊಳ್ಳಬಹುದು. ಇವರ ಪ್ರಬಂಧಗಳಲ್ಲಿನ ಭಾಷೆ, ಶಿಷ್ಟತೆ, ಹಾಸ್ಯ, ವಿಡಂಬನೆಗಳು ಇತರರಿಗಿಂತ ವಿಭಿನ್ನವಾಗಿ ಕಂಡುಬರುತ್ತವೆ. ಸಮಾಜದಲ್ಲಿ ವಿವಿಧ ಘಟನೆಗಳನ್ನು ವೈಭವೀಕರಿಸಿ, ಅದರ ಅಂತಃಸತ್ವದ ವಿಚಾರವನ್ನು ಮನೋಜ್ಞವಾಗಿ ತಿಳಿಸುವ ಶೈಲಿ ಇವರದು. ಒಂದು ಸಣ್ಣ ಕ್ಷುಲ್ಲಕವೆನಿಸಬಹುದಾದ ವಸ್ತುವಿನ ಮೇಲೂ ಅವರ ಪ್ರಬಂಧದ ರಚನೆ, ಇರುವುದರಿಂದ ಇತರರಿಗಿಂತ ಭಿನ್ನರಾಗಿಯೇ ಹೊರಹೊಮ್ಮಿದ್ದಾರೆ.

ವೀರೇಂದ್ರ ಸಿಂಪಿಯವರ ಎಲ್ಲಾ ಪ್ರಬಂಧಗಳನ್ನು ಗಮನಿಸಿದಾಗ ಅವರ ಪ್ರಬಂಧಗಳಲ್ಲಿನ ವಸ್ತು ವ್ಯಕ್ತಿನಿಷ್ಠವಾಗಿದೆ. ಅವರ ನಿರೂಪಣಾ ಶೈಲಿ ಸರಳವಾಗಿಯೂ ಅಹ್ಲಾದಕಾರವಾಗಿಯೂ ಓದುಗರ ಭಾವನೆ, ಆತ್ಮೀಯತೆಯನ್ನು ಹಿಡಿದಿಡುವ ಅವರ ಶೈಲಿ ಹಾಗೂ ವೈಚಾರಿಕ ಅಂಶಗಳ ಪರಾಮರ್ಶೆಯನ್ನು ವೈಜ್ಞಾನಿಕ ತಳಹದಿಯ ಮೇಲೆ ಮಾಡಿ ಅವುಗಳು ಜೀವನದ ನಿರಂತರತೆಯನ್ನು ಕಾಯ್ದುಕೊಂಡು ಹೋಗುವ ರೀತಿಯಲ್ಲಿ ಇವರ ಪ್ರಬಂಧದ ಶೈಲಿ ಇದೆ. ಇವರ ಎಲ್ಲಾ ಲಲಿತ ಪ್ರಬಂಧಗಳಲ್ಲಿ ಆಯ್ದ ಲಲಿತ ಪ್ರಬಂಧ' ಸಂಕಲನದಿಂದ ಒಟ್ಟು ೩೯ ಲಲಿತ ಪ್ರಬಂಧಗಳ ಕುರಿತಾಗಿ ಅದರ ಸಾರಸತ್ವವನ್ನು ಕುರಿತಾಗಿ ವಿಮರ್ಶಾಲೋಕಕ್ಕೆ ಪರಿಚಯಿಸುವುದರ ಜೊತೆಗೆ ಅವುಗಳ ಮಹತ್ವವನ್ನು ಗುರುತಿಸುವುದು. ಅಧ್ಯಯನದ ಪ್ರಮುಖ ಉದ್ದೇಶಗಳಲ್ಲಿ ಒಂದಾಗಿದೆ. ಅಲ್ಲದೆ, ನಗರೀಕರಣ, ಆಧುನೀಕರಣದ ಮತ್ತು ಮನುಷ್ಯನ ತಾಕಲಾಟದ ಸಂದರ್ಭಗಳ ಮಟ್ಟಿಗೂ ಅಧ್ಯಯನದ ಪ್ರಸ್ತುತತೆಯನ್ನು ಪರಾಮರ್ಶಿಸಲಾಗುವುದು. ವೀರೇಂದ್ರ ಸಿಂಪಿಯವರ ಎಲ್ಲಾ ಲಲಿತ ಪ್ರಬಂಧ ಸಾಹಿತ್ಯದ ಹಿಂದಿರುವ ಒಟ್ಟು ದರ್ಶನವನ್ನು ದಿಗ್ದರ್ಶಿಸುವುದು, ಪ್ರಾದೇಶಿಕವಾಗಿ ಇವರ ಸಾಹಿತ್ಯ ಜೀವನಕ್ಕೆ ಅವರ ಸಾಹಿತ್ಯದ ಕೊಡುಗೆ ಮುಂತಾದ ವಿಷಯಗಳ ಕುರಿತಾಗಿ ಈ ಪ್ರಬಂಧದ ಸೌಧವನ್ನು ಕಟ್ಟಲಾಗಿದೆ.

ಅಡಿಟಿಪ್ಪಣಿಗಳು

೧. ವೀರೇಂದ್ರ, ಸಿಂಪಿ, ಕನ್ನಡ ಲಲಿತಪ್ರಬಂಧಗಳು, ಪು.೫

೨. ಗುರುಲಿಂಗ ಕಾಪಸೆ, ಕನ್ನಡ ನವೋದಯ ಸಾಹಿತ್ಯ, ಪು.೬೧

೩. ವೀರೇಂದ್ರ, ಸಿಂಪಿ, ಕನ್ನಡ ಲಲಿತಪ್ರಬಂಧಗಳು, ಪು.೨

೪. ಶೇಷಗಿರಿರಾವ್ ಎಲ್.ಎಸ್., ಪ್ರಬಂಧ ಪ್ರಪಂಚ, ಪು.೪೨

೫. ನಾಗೇಶ್ ಎಚ್.ವಿ., ಪ್ರಬಂಧ ಪ್ರಪಂಚ, ಪು.೪೨

೪

# ವೀರೇಂದ್ರ ಸಿಂಪಿ ಅವರ ಲಲಿತ ಪ್ರಬಂಧಗಳ ಸ್ವರೂಪ ವಸ್ತು/ಆಶಯ

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪಾಶ್ಚಾತ್ಯ ಸಾಹಿತ್ಯದಿಂದ ಪ್ರೇರಣೆ ಪ್ರಭಾವಗಳಿಂದ ಕನ್ನಡದಲ್ಲಿ ಉದಯಿಸಿದ ಲಲಿತ ಪ್ರಬಂಧ ಸಾಹಿತ್ಯ ಪ್ರಕಾರವು ನವೋದಯ ಕಾಲಘಟ್ಟದಲ್ಲಿ ತನ್ನ ಛಾಪನ್ನು ಮೂಡಿಸಿ, ನವ್ಯ ಕಾಲಘಟ್ಟದಲ್ಲಿ ಸೊರಗಿ ಮತ್ತು ಪ್ರಗತಿಶೀಲ, ದಲಿತ ಬಂಡಾಯ ಕಾಲದಲ್ಲಿ ತನ್ನ ಛಾಪನ್ನು ಕನ್ನಡ ನೆಲದಲ್ಲಿ ಘಟ್ಟಿಯಾಗಿ ನೆಲೆಗೊಳಿಸಿದ ಪ್ರಕಾರವಾಗಿದೆ. ಹೊಸಗನ್ನಡ ಸಾಹಿತ್ಯದಲ್ಲಿ ಲಲಿತ ಪ್ರಬಂಧ ಪ್ರಕಾರವು ಬಹುಮುಖ್ಯವಾದ ಪಾತ್ರವನ್ನು ವಹಿಸಿದೆ. ಗದ್ಯ ಸಾಹಿತ್ಯದ ಮೂಲಕ, ನವೋದಯ ಕಾಲದಿಂದ ಇಂದಿನವರೆಗೆ ವಿವಿಧ ಲೇಖಕರಿಂದ ಅರ್ಥಪೂರ್ಣವಾಗಿ ಬೆಳೆದು ಬಂದಿದೆ. ಕನ್ನಡದ ಕೆಲವೇ ಜನ ಲಲಿತ ಪ್ರಬಂಧಕಾರರಲ್ಲಿ ವೀರೇಂದ್ರ ಸಿಂಪಿಯವರು ಪ್ರಮುಖರಾಗಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಲಲಿತ ಪ್ರಬಂಧ ಪ್ರಕಾರ ವಿಪುಲವಾಗಿ ಬೆಳೆದಿದೆ. ವೀರೇಂದ್ರ ಸಿಂಪಿಯವರು ಅಪೂರ್ವ ಲಲಿತ ಪ್ರಬಂಧಗಳಿಂದ ಕನ್ನಡದಲ್ಲಿ ಲಲಿತ ಪ್ರಬಂಧ ಸಾಹಿತ್ಯ ಶ್ರೀಮಂತಗೊಂಡಿದೆ. ಅವರ ಪ್ರಬಂಧಗಳು ಸಮಾಜದ ಎಲ್ಲಾ ವಿಷಯಗಳನ್ನು ತನ್ನ ವ್ಯಾಪ್ತಿಗೆ ಒಳಪಡಿಸಿಕೊಂಡು, ಓದುಗರ ಅಭಿರುಚಿಯನ್ನು ಹೆಚ್ಚಿಸುತ್ತಾ, ಜೀವನಾನುಭವದ ನಿರ್ಲಿಪ್ತತೆಯನ್ನು ದಾಖಲಿಸಿ, ತಿಳಿಹಾಸ್ಯದ ಮೂಲಕ ಸದ್ಯದ ಶೋಧನೆ ಹಾಗೂ ಸಾಮಾಜವನ್ನು ತಿದ್ದುವ ಉದ್ದೇಶದಿಂದ ತಮ್ಮನ್ನೆ ವಸ್ತುವಾಗಿಟ್ಟುಕೊಂಡು ರಚಿಸಿರುವ ಪ್ರಬಂಧಗಳಲ್ಲಿ ಅವರ 'ಕಾಗದದ ಚೂರು', 'ಭಾವ ಮೈದುನ', 'ಸ್ವಚ್ಛಂದ ಮನದ ಸುಳಿದಾಟ', 'ಪರಿಸರ ಸ್ಪಂದನ', ನಾಲ್ಕು ಪ್ರಬಂಧ ಸಂಕಲನಗಳಿಂದ ಆಯ್ದ ಉತ್ತಮ ಲಲಿತ ಪ್ರಬಂಧ ಗಳನ್ನು 'ಕನ್ನಡ ಸಾಹಿತ್ಯ ಪರಿಷತ್ತು' ೨೦೦೨ರಲ್ಲಿ ಸುವರ್ಣ ಸ್ವಾತಂತ್ರೋತ್ಸವ ಮಾಲಿಕೆಯಡಿ ಒಟ್ಟು ೩೯ ಲಲಿತ ಪ್ರಬಂಧಗಳನ್ನು ಆಯ್ದು ಪ್ರಕಟಿಸಲಾಗಿದೆ. ಈ ಆಯ್ದ ಲಲಿತ ಪ್ರಬಂಧಗಳ ಸಂಕಲನವೇ ನನ್ನ ಸಂಶೋಧನೆಗೆ ಒಳಪಡಿಸಿಕೊಂಡಿದ್ದೇನೆ.

ವೀರೇಂದ್ರ ಸಿಂಪಿಯವರು ವಿದ್ಯಾರ್ಥಿ ಜೀವನದಿಂದಲೇ ಸಾಹಿತ್ಯದಲ್ಲಿ ಆಸಕ್ತಿಯನ್ನು ಬಳಸಿಕೊಂಡಿದ್ದರು. ಇವರು ಲಲಿತ ಪ್ರಬಂಧಸಾಹಿತ್ಯ ಹೆಚ್ಚಿನ ಆಸಕ್ತಿ ತೋರಿಸಿ ಹಲವಾರು ವೈವಿಧ್ಯಮಯ ಪ್ರಬಂಧಗಳನ್ನು ಬರೆದು ನುರಿತ ಪ್ರಬಂಧಕಾರರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಸಾಹಿತ್ಯದಲ್ಲಿ ಸಂಶೋಧನಾತ್ಮಕವಾದ ವಿಷಯದ ಮೇಲೆ ಬೆಳಕು ಚೆಲ್ಲುವ ಕಾರ್ಯ ಮಾಡಿದ್ದಾರೆ.

ವೀರೇಂದ್ರ ಸಿಂಪಿಯವರ ಲಲಿತಪ್ರಬಂಧಗಳಿಗೆ ವಸ್ತುವಿನ ನಿಯಮವಿಲ್ಲ. ಇಲ್ಲಿ ನರನಿಂದ ಹರನವರೆಗೆ, ಕಡ್ಡಿಯಿಂದ ಗುಡ್ಡದವರೆಗೆ ಎಲ್ಲಾ ಬಗೆಯ ವಸ್ತು, ವ್ಯಕ್ತಿಗಳಿಗೆ ಅವರು ಧ್ವನಿಯಾಗುವಂತೆ ಲಲಿತ ಪ್ರಬಂಧಗಳನ್ನು ರಚಿಸಿದ್ದಾರೆ. ಪ್ರಬಂಧದ ವಸ್ತು, ತಂತ್ರ, ಭಾಷೆ, ಶೈಲಿ ಹೀಗೆ ಹಲವಾರು ರೀತಿಯಲ್ಲಿ ಅನೇಕ ಬದಲಾವಣೆಗಳಾದರೂ ವೀರೇಂದ್ರ ಸಿಂಪಿಯವರ ಪ್ರಬಂಧಗಳು ಈಗಲೂ ಹೆಚ್ಚು ಪ್ರಿಯವೆನಿಸುವುವು. ಇವರ ಪ್ರಬಂಧಗಳು ಸಂಕೀರ್ಣವಾಗಿರದೇ, ಸರಳವಾಗಿದ್ದು, ಜೀವನದ ಬಿಕ್ಕಟ್ಟಿನ ಸಂದರ್ಭವನ್ನು ನೇರವಾಗಿ ಹೇಳುವುದರಿಂದ ಓದುಗನಿಗೆ ಭಾವನಾತ್ಮಕವಾಗಿ ತಟ್ಟುವ ಅನುಭವವಾಗುತ್ತದೆ.

ಈ ರೀತಿಯಾದ ಭಾವದ ಜೊತೆ ಲೇಖಕನು ತನ್ನ ಆತ್ಮವೃತ್ತವನ್ನು ತನ್ನ ಜೀವನದ ಅನುಭವ ಸಾರವನ್ನು ಹಾಸ್ಯ, ವಿಡಂಬನೆ, ವ್ಯಂಗ್ಯ, ಕಟೋಕ್ತಿ ಮೂಲಕ ಸ್ವಗತ ಭಾಷಣದಂತೆ ಸಂಭಾಷಣಾ ಸ್ವಾತಂತ್ರ್ಯ ಪಡೆದು, ವಿಶಿಷ್ಟ ಬರವಣಿಗೆಯ ಮೂಲಕ ಓದುಗರ ಮನ ಸೆಳೆಯುವ ಕಾರ್ಯ ಈ ಲಲಿತ ಪ್ರಬಂಧಗಳು ಮಾಡುತ್ತವೆ. ಇಂತಹ ಲಲಿತ ಪ್ರಬಂಧಗಳ ವಿಷಯ ಎಲ್ಲಿಂದಲೋ ಆರಂಭಿಸಿ, ಎಲ್ಲಿಗೋ ಕೊಂಡ್ಯೊಯುವ ಕಾರ್ಯ ಮಾಡುತ್ತದೆ. ಇಲ್ಲಿ ಲಘುವಾದ ವಿಷಯವನ್ನು ಗಂಭೀರವಾಗಿ, ಗಂಭೀವಾದದ್ದನ್ನು ಲಘುವಾಗಿ ಚಿತ್ರಿಸುವುದನ್ನು ಇವರ ಲಲಿತ ಪ್ರಬಂಧಗಳಲ್ಲಿ ಕಾಣಬಹುದು.

ವೀರೇಂದ್ರ ಸಿಂಪಿಯವರು ಅತ್ಯಂತ ಸಮರ್ಪಕವಾಗಿ ದುಡಿದ ಸಾಹಿತ್ಯ ಕ್ಷೇತ್ರವೆಂದರೆ ಅದು ಲಲಿತ ಪ್ರಬಂಧ ಸಾಹಿತ್ಯದಲ್ಲಿ. ಇವರು ತಮ್ಮ ಜೀವನದ ಪ್ರತಿಯೊಂದು ಅನುಭವ, ವಿಶೇಷತೆಯನ್ನು ಅತ್ಯಂತ ಮನೋಹರವಾಗಿ, ಮೋಹಕವಾಗಿ ತಮ್ಮ ಪ್ರಬಂಧಗಳಲ್ಲಿ ಬಿಂಬಿಸಿದ್ದಾರೆ. ಇಂದಿನ ಸಾಮಾಜಿಕ ಜೀವನದ ವಿವಿಧ ಮುಖಗಳನ್ನು ತಮ್ಮ ಕಲ್ಪನಾಲಹರಿಯು ಗರಿಗೆದರಿ ಜೀವನದ ಏರುಪೇರುಗಳ, ಮಾನವ ಸ್ವಭಾವದ ಓರೆ ಕೊರೆಗಳನ್ನು ತಿದ್ದುವ ಕಾರ್ಯ ಮಾಡಿದ್ದಾರೆ. ವೀರೇಂದ್ರ ಸಿಂಪಿಯವರು ತಮ್ಮ ಸುತ್ತಲಿನ ಜೀವನವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ, ರಮ್ಯವಾಗಿ ಬಣ್ಣಿಸಿದ್ದಾರೆ. ಒಮ್ಮೆ ಅದನ್ನು ಕಥೆಯಾಗಿ ಹೇಳಿದರೆ ಮತ್ತೊಮ್ಮೆ ಹರಟೆಯ ರೂಪದಲ್ಲಿ ಸೊಂಪಾಗಿ ವಿವರಿಸುತ್ತಾರೆ. ಹಾಸ್ಯದ ಮೂಲಕ ಜೀವನದ ಕೆಲವು ಶಾಶ್ವತವಾದ ಮೌಲ್ಯಗಳನ್ನು ಅವರ ಲಲಿತ ಪ್ರಬಂಧಗಳ ಮೂಲಕ ಮಾಡಿರುವುದನ್ನು ನೋಡಬಹುದಾಗಿದೆ. ಈ ಹಿನ್ನೆಲೆಯಲ್ಲಿ ಸಿಂಪಿಯವರ ಲಲಿತ ಪ್ರಬಂಧಗಳನ್ನು ವ್ಯಂಗ್ಯ, ಹಾಸ್ಯ, ವಿಡಂಬನೆ, ಪರಿಸರ, ಸ್ಥಳ, ವಸ್ತು, ವ್ಯಕ್ತಿ, ಘಟನೆ, ಶಿಕ್ಷಣ, ವೈಚಾರಿಕ ಎಂಬ ವಿಭಾಗಗಳಾಗಿ ವಿಂಗಡಿಸಿ ಅವರ ಪ್ರಬಂಧಗಳ ಸ್ವರೂಪ ವಸ್ತು ಆಶಯವನ್ನು ವಿವೇಚಿಸಲಾಗಿದೆ.

## ೪.೧. ವ್ಯಂಗ್ಯ ಹಾಸ್ಯ-ವಿಡಂಬನೆ

ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳಲ್ಲಿ ತಿಳಿಯಾದ ಹಾಸ್ಯದೊಂದಿಗೆ ವ್ಯಂಗ್ಯ, ವಿಡಂಬನೆಯನ್ನು ತಮ್ಮ ಸುತ್ತಮುತ್ತಲಿನ ಘಟನೆ, ಸನ್ನಿವೇಶ, ಪರಿಸರವನ್ನು ಆಧರಿಸಿ ಅದರಲ್ಲೇ ವಸ್ತುವೊಂದನ್ನು ಸ್ವೀಕರಿಸಿ, ಚಮತ್ಕಾರಿಕ ತಿರುವುಗಳಿಂದ ಸ್ವಾಭಾವಿಕ ಹಾಸ್ಯದೊಂದಿಗೆ, ಸಮಾಜವನ್ನು ತಿದ್ದುವ ಕೆಲಸ ಮಾಡುತ್ತಾರೆ. ಗಂಭೀರವಾಗಿ ಉಪದೇಶ ಮಾಡಿದಾಗ ಸಮಾಜ ಸುಧಾರಣೆ ಅಷ್ಟಕಷ್ಟೆ. ಅದಕಂತಲೇ ಒಳ್ಳೆಯ ಹಾಸ್ಯಗಾರ ಬೇಸರವನ್ನು ದೂರ ಮಾಡಿ ಕಾಂತೆಯಂತೆ ಸಲಹೆ ಸೂಚನೆ ನೀಡುವನು. ನಗೆಯಲ್ಲಿಯೇ ಜನರನ್ನು ತಿದ್ದುವ ಕೆಲಸ ಮಾಡುತ್ತಾರೆ. ಜೊತೆಗೆ ವ್ಯಂಗ್ಯ, ಕಟೋಕ್ತಿಗಳ ಮೂಲಕ ಮೊನಚಾದ ಪದ ಪ್ರಯೋಗದಿಂದ ಅತಿ ಸುಲಭವಾಗಿ ಅರ್ಥೈಸಿಕೊಳ್ಳುವ ರೀತಿಯಲ್ಲಿ ಇವರ ಪ್ರಬಂಧಗಳು ಮೂಡಿಬಂದಿವೆ. ಉದಾಹರಣೆಗೆ, “ಕಾಗದ ಚೂರು” ಈ ಪ್ರಬಂಧದಲ್ಲಿ ಒಂದು ಸಣ್ಣ ವಸ್ತು ‘ಕಾಗದದ’ ಚೂರಿನಿಂದ ಆಗ ಬಹುದಾದ ಉಪಯೋಗ ಹಾಗೂ ಅದರ ಮಹತ್ವವನ್ನು ಬೇರೆ ಬೇರೆ ದೃಷ್ಟಿಗಳಿಂದ ತೂಗಿ ನೋಡುವ ಈ ಪ್ರಬಂಧ ಹಾಸ್ಯದೊಂದಿಗೆ ವಿಡಂಬನೆಯನ್ನು ವ್ಯಕ್ತಪಡಿಸುತ್ತದೆ. “ಕಾಗದದ ಚೂರು ಎಂದು ನಿರ್ಲಕ್ಷತೆಯಿಂದ ಸಾಗಬೇಡಿ, ಅದರಲ್ಲಿ ಬ್ರಹ್ಮಾಂಡ ಅಡಗಿದೆ”[೧] ಎಂದು ಸೂಚ್ಯವಾಗಿ ಹೇಳುವಲ್ಲಿ ಅದರ ಮಹತ್ವದ ಅರಿವಾಗುತ್ತದೆ. ಈ ಪ್ರಬಂಧವು ಒಂದು ವಸ್ತುವಿಗೆ ಸೀಮಿತ ನಿರೂಪಣಾ ಕೇಂದ್ರವಾಗದೆ, ಸ್ವತಂತ್ರ ಮನೋಲಹರಿಯಲ್ಲಿ ಸಾಂದರ್ಭಿಕ ಆಶಯಗಳೊಂದಿಗೆ, ಸಮಾಜದಲ್ಲಿ ಜಾಗೃತಿ ಮೂಡಿಸುವ ಕಲೆಯನ್ನು ಸಹ ಒಳಗೊಂಡಿದೆ.

ನಗು ಮನುಷ್ಯನಿಗೆ ಎಷ್ಟು ಮುಖ್ಯ ಎಂಬುದನ್ನು ಲೇಖಕರು “ಮುಖದ ಮೇಲೆ ಅರಳಿದ ಮುಗುಳ್ನಗೆ ಶ್ರೀಮಂತಿಕೆಯ ಲಕ್ಷಣ”[೨] ಎಂಬಲ್ಲಿ ವ್ಯಕ್ತಪಡಿಸಿದ್ದಾರೆ. ಅದೇ ನಗುವಿಲ್ಲದವನು ದರಿದ್ರರಂತೆ ಕಂಡುಬರುತ್ತಾರೆ ಎಂದು ಸೂಚ್ಯವಾಗಿ ವಿಡಂಬಿಸಿ ಹೇಳುವಲ್ಲಿ ಸಫಲರಾಗಿದ್ದಾರೆ. ಜೇಬು ಮಾನವನಿಗೆ ಎಷ್ಟು ಮುಖ್ಯ ಎಂದು ಹೇಳುತ್ತಾ ವ್ಯಕ್ತಿಯ ವ್ಯಕ್ತಿತ್ವವನ್ನು ಅದರ ಮೇಲೆ ಅಳೆಯುತ್ತಾರೆ. “ವ್ಯಕ್ತಿಯ ಜೇಬಿನಲ್ಲಿ ಏನು ಇದೆಯೋ ಅದೇ ಅವನಾಗಿರುತ್ತಾನೆ”. ಜೇಬು ಇಂದಿನ ಫ್ಯಾಶನ್ ಯುಗಕ್ಕೆ ಕಂಠಾಭರಣದಂತೆ ದೇಹಾಭರಣ, “ಜೇಬಿದ್ದವನೇ ಆರ್ಯ, ಇಲ್ಲದವನು ಅನಾರ್ಯ”[೩] ಎಂಬುದನ್ನು ಬಡವ ಶ್ರೀಮಂತರಲ್ಲಿನ ಲಕ್ಷಣವನ್ನು ಮನೋಜ್ಞವಾಗಿ ವ್ಯಕ್ತಪಡಿಸಿದ್ದಾರೆ. ಜೇಬಿನಲ್ಲಿನ ಖಾಲಿ ಪರ್ಸು ಇಟ್ಟುಕೊಂಡು ತಿರುಗುವರು ಒಂದು ಜಾತಿಯ ಜನರೆಂದು, ಅವರ ಕಪಟತನವನ್ನು ಬಿಲ್ಲು ಕೊಡುವಂತೆ ನಟಿಸಿ, ಮುಂದೆ ನಡೆಯುವುದು ಅವರ ಕಾಯಕವೆಂದು ಟೀಕಿಸುತ್ತಾರೆ. ‘ಟರ್ಲಿನ್ ಷರ್ಟಿನಲ್ಲಿ ಹೊಸ ನೋಟನ್ನು ಇಟ್ಟುಕೊಂಡು ತಿರುಗುವ ಶೋಕಿಲಾಲರನ್ನು ಇನ್ನೊಂದು ವರ್ಗಕ್ಕೆ ಸೇರಿಸಿ, ಇಂದಿನ ಜನತೆಯ ಹತ್ತಾರು ಮುಖಗಳನ್ನು, ಅದರ ಹಿಂದಿನ ಇಂತಹ ಡೊಂಗಿತನವನ್ನು ಬಯಲಿಗೆಳೆಯುವ ಪ್ರಯತ್ನ ಮಾಡಿದ್ದಾರೆ. “ಜೇಬುಗಳ ತುಂಬ ಕಾಗದ ಚೂರುಗಳನ್ನು ತುಂಬಿಕೊಂಡವರನ್ನು ಅಧಮರ ವರ್ಗವೆಂದು

ಜರಿದು, ತಾವು ಆ ಜಾತಿಗೆ ಸೇರಿದವರೆಂದು, ಇದು ಅಧಮರ ಯುಗ ಅಧಮಶ್ರೀಗೆ ಜಯವಾಗುವ ಕಾಲ''[೪]ವೆಂದು ಹೇಳುವಲ್ಲಿ ಪ್ರಸ್ತುತ ಸಮಾಜದ ವ್ಯವಸ್ಥೆಯಲ್ಲಿ ಸಾಮಾನ್ಯ ಜನತೆಯನ್ನು ಕುರಿತ ವಿಡಂಬನೆ ಅಭಿವ್ಯಕ್ತವಾಗಿದೆ.

ಈ ಪ್ರಬಂಧದಲ್ಲಿ ಅಲ್ಲಲ್ಲಿ ತಿಳಿಹಾಸ್ಯ ಮನೋಜ್ಞವಾಗಿ ಮೂಡಿಬಂದಿದೆ. ಲೇಖಕರು ತಾವು ಒಮ್ಮೆ ಆಂಗ್ಲ ವೇಷಧಾರಿಯಾಗಿ ಸಾಹೇಬತನದಿಂದ ನಡೆದುಕೊಂಡು ಪ್ರಯಾಣಿಸಿ, ಸ್ಟೇಷನ್ನಿನಲ್ಲಿ ಜೇಬಿನಲ್ಲಿನ ಟಿಕೆಟ್ ಸಿಗದೆ ಮುಖದ ಮೇಲೆ ಬೇವರಿಳಿಸಿಕೊಂಡು ತನ್ನ ಸಾಹೇಬತನಕ್ಕೆ ಆದ ಅಪಮಾನ ಹಾಸ್ಯವನ್ನುಂಟು ಮಾಡುತ್ತದೆ. ಕಾಗದ ಚೂರಿನ ಬಹುಮುಖ ಬಳಕೆಯನ್ನು ಹೇಳುತ್ತಾ "ಕಾಗದದ ಚೂರುಗಳು ಪರೀಕ್ಷಾ ರಾಕ್ಷಸನನ್ನು ಸದೆ ಬಡಿಯಲು ತಯಾರಿಸಲ್ಪಡುವ ಆಯುಧಗಳು''[೫] ಎಂದು ಹೇಳುವಲ್ಲಿ ಇಂದಿನ ಪರೀಕ್ಷಾ ವ್ಯವಸ್ಥೆಯಲ್ಲಿನ ವಸ್ತು ಸ್ಥಿತಿಯನ್ನು ಬಿಂಬಿಸುತ್ತಾರೆ. ಹಾಗೆ ಇಂದಿನ ಆಧುನಿಕ ಮರಿ ಕವಿಗಳನ್ನು ಟೀಕಿಸುತ್ತಾ, ಅವರು ಬರೆದ ಸಾಹಿತ್ಯ "ಅಕಾಲಿಕ ಗರ್ಭಪಾತದಂತೆ ಗಟಾರವನ್ನು ಸೇರಲರ್ಹವಾದವು''[೬]ಗಳು ಎಂದು ಇಂದಿನ ಡೊಂಗಿ ಕವಿಗಳನ್ನು ಮತ್ತು ಅವರ ನಿಸತ್ವ ಸಾಹಿತ್ಯವನ್ನು ಟೀಕಿಸುವಲ್ಲಿ ವಿಡಂಬನೆ ವ್ಯಕ್ತವಾಗಿದೆ.

## ಜಡ್ಡಿನ ಜಾಪತ್ರಿ

ಈ ಪ್ರಬಂಧದಲ್ಲಿ ಮನುಷ್ಯನ ಜೀವನದಲ್ಲಿ ಬಿಡದೇ ಕಾಡುವ ಅನಾರೋಗ್ಯದ ಕುರಿತು ಜಡ್ಡಿನ ಜಾಪತ್ರಿಯಲ್ಲಿ ಹಾಸ್ಯತ್ಮಕವಾಗಿ ಹೇಳಿದ್ದಾರೆ. ಅನಾರೋಗ್ಯವೆಂದರೆ ಯಾರಿಗೂ ಇಷ್ಟವಿಲ್ಲ. ಆದರೆ ಇಲ್ಲಿ ಲೇಖಕರು 'ಜಡ್ಡನ್ನು' ಆಹ್ವಾನಿಸುವುದನ್ನು ಕಂಡಾಗ ಸಹಜವಾಗೇ ಹಾಸ್ಯ ವ್ಯಕ್ತವಾಗುತ್ತದೆ. ಸ್ನೇಹಿತನೊಬ್ಬನ ಹಳೆಯ ಹಾಸ್ಯಕ್ಕೆ 'ಇನ್ನು ಜೀವಂತವಿದ್ದೇನೆ ಆದ್ದರಿಂದ ಸತ್ತಿಲ್ಲ'[೭] ಎಂಬ ಕೊಂಕು ನುಡಿ ಹಾಸ್ಯವನುಂಟು ಮಾಡಿದರೂ, ಅರ್ಥವಂತಿಕೆಯಿಂದ ಅದು ಬೇರೆಯಾದುದಾಗಿದೆ. ಇಂದಿನ ಆಧುನಿಕ ಹೋಟೆಲುಗಳ ವಸ್ತುಸ್ಥಿತಿಯನ್ನು ಕುರಿತು ಹೇಳುವಲ್ಲಿ ಸಹ ವಿಡಂಬನೆ ವ್ಯಕ್ತವಾಗಿದೆ. ಹೆಸರಿಗೆ "ಮಾಡರ್ನ್ ಕೆಫೆ''ಯಾದರೂ ಅಲ್ಲಿ ಅದೇ ಕರಿಯಚಹಾ, ಅದೇ ಎಣ್ಣೆ ಗಮಟಿನ ಮಾಣಿ, ಅದೇ ತಿಂಡಿ, ಅದೇ ವಾತಾವರಣವೆಂದು ಸೂಚ್ಯವಾಗಿ ಟೀಕಿಸುತ್ತಾರೆ. ಮಾಣಿಯೊಬ್ಬ "ಫಿರ್ ವಹಿ ಭಾಜಿ ಲಾಯ ಹೂಂ'' ಎಂದಿದ್ದಕ್ಕೆ "ಫಿರ್ ವಹಿ ಪೇಟ್ ಲಾಯಾ ಹೂಂ''[೮] ಎಂಬ ಉತ್ತರ ಸಹಜವಾಗೇ ಹಾಸ್ಯವನ್ನುಂಟು ಮಾಡುತ್ತದೆ. ಹೀಗೆ ನಮ್ಮ ಅನುಭವಕ್ಕೂ, ಲೋಕ ಜೀವನಕ್ಕೂ ಸಂಬಂಧಿಸಿದ ಸಂಗತಿಗಳನ್ನು ಹಾಸ್ಯದ ಮೂಲಕ ಬೆರೆಸಿದ್ದು ವಿಶೇಷವಾಗಿದೆ.

ಮನುಷ್ಯನ ಆರೋಗ್ಯದ ವೈರಿಯಾಗಿರುವ ಜಡ್ಡು ಯಾರಿಗೂ ಬೇಕಾಗಿಲ್ಲ. ಆದರೆ ಜಡ್ಡಿನಿಂದಾಗುವ ಅನುಕೂಲತೆಯನ್ನು ಮನಗಂಡಿರುವ ಲೇಖಕರು "ಜಡ್ಡನ್ನು ನಾನು ದೇವರಿಂದ ಪಡೆದ ವರ. ದೇವರು

ನನಗೆ 'ನಿನ್ನ ಜನನ ಮರಣಗಳ ನಡುವೆ ಮಧ್ಯಂತರ ಅವಧಿಯಲ್ಲಿ, ಜಡ್ಡಿನ ರಾಜ್ಯದಲ್ಲಿ ವಿಹರಿಸು'" ಎಂದು ವರ ನೀಡಿದ್ದಾನೆ ಎಂಬ ವ್ಯಾಖ್ಯೆ, ಹಾಸ್ಯವನ್ನು ವ್ಯಕ್ತಪಡಿಸುತ್ತದೆ. ಅದನ್ನು ಸಿರಸಾವಹಿಸಿ ಪಾಲಿಸುವ ಲೇಖಕರು, ಅದಕ್ಕೆ ವಯರ್‌ಲೆಸ್ ಇಂಟಿಮೇಶನ್ ಕೊಟ್ಟು, ಮನೆಯ ಬಾಗಿಲಿಗೆ ಆಹ್ವಾನಿಸುವುದು, ರಾಮನಿಗೆ ಶಬರಿ ಕಾದಂತೆ ಇವರು ಜಡ್ಡಿಗಾಗಿ ಕಾದು, "ಯಾವಾಗ ಬರವನೋ ನನ್ನ ಜಡ್ಡಿಂಗರಾಯ" ಎನ್ನುವ ಸಾಲುಗಳಿಂದ ಹಾಸ್ಯದ ಹೊನಲೇ ಹರಿದುಬಂದಿರುವುದನ್ನು ಕಾಣಬಹುದು. ಜಡ್ಡಿನ ಸಮಯದಲ್ಲಿ ಡಾಕ್ಟರರ ಮುಖ ಕಳೆಗುಂದುವುದು. ಅವರ ಸಂಕಟದಿಂದ ಇವರು ಹಿಗ್ಗಿ ಹಿರೇಕಾಯಿಯಾಗುವುದು. ಡಾಕ್ಟರರಿಗೆ ಪ್ರಾಣ ಸಂಕಟವಾದರೆ ರೋಗಿಗೆ ಚೆಲ್ಲಾಟ ಎಂಬ ತದ್ವಿರುದ್ಧ ಹೇಳಿಕೆಯಲ್ಲಿಯೂ ತಿಳಿ ಹಾಸ್ಯ ವ್ಯಕ್ತವಾಗಿರುವುದನ್ನು ಕಾಣಬಹುದು.

ನಾವು ಅನಾರೋಗ್ಯದಿಂದ ಹಾಸಿಗೆ ಹಿಡಿದರೆ, ಮನೆ ಮಂದಿಯ ಪ್ರೀತಿ ಕಾಳಜಿ ಯಾವ ರೀತಿಯಾಗಿರುತ್ತದೆಂದು ಈ ರೀತಿ ಹೇಳುತ್ತಾರೆ. 'ಜಡ್ಡಿನಲ್ಲಿ ಡಾಕ್ಟರರ ಪ್ರಾಣ ಸಂಕಟವನ್ನು ಕಾಣುವ ಭಾಗ್ಯದ ಜೊತೆಗೆ, ಮನೆಯವರ ಪ್ರೀತಿಯ ಬಗ್ಗೆಯೂ ಹೇಳುತ್ತಾ, ತಾಯಿ ಬಂದು ಹಣೆ ಒತ್ತುತ್ತಾಳೆ. ನಿಮಿಷ ನಿಮಿಷಕ್ಕೆ ಚಹಾ ತರುತ್ತಾಳೆ. ಅದೇ ಚೆನ್ನಾಗಿದ್ದಾಗ, ನೀನೇ ಮಾಡಿಕೊಂಡು ಕುಡಿ ಎಂದಿರುತ್ತಾಳೆ. ತಮ್ಮನೊಬ್ಬ ತನ್ನ ಕಿಸೆಯಿಂದ ಜಿಬುಟಾದ ಪೇಪರಮೆಂಟನ್ನು ಬಾಯಿಗೆ ಹಾಕಿ ಮಿಕಿ ಮಿಕಿ ನೋಡುವ ಅವನ ಮುಗ್ಧತೆ, ತಂದೆಯ ರೌದ್ರಮುಖ, ಇಂದು ಪ್ರೀತಿ ಮಮಕಾರದ ಕೇಂದ್ರವಾಗಿದ್ದು, ಇಂತಹ ಘಟನೆಯನ್ನು ಹೇಲುವಲ್ಲಿಯೂ ಸಹ ತಿಳಿ ಹಾಸ್ಯ ವ್ಯಕ್ತವಾಗಿರುವುದನ್ನು ಗಮನಿಸಬಹುದು.

ಡಾಕ್ಟರರು ಹಾಗೂ ದವಾಖಾನೆಯನ್ನು ಕುರಿತು ಹೇಳುವಲ್ಲಿ ಹಾಸ್ಯದ ಜೊತೆ ವಿಡಂಬನೆ ವ್ಯಕ್ತವಾಗಿದೆ. ಲೇಖಕರು ಇಲ್ಲಿ "ದವಾಖಾನೆಯನ್ನು ದೇವಾಲಯವೆಂದು, ಡಾಕ್ಟರರನ್ನು ಶಿವನ ಅವತಾರವೆಂದು, ಇಂಜೆಕ್ಷನ್‌ನ್ನು ತ್ರಿಶೂಲವೆಂದು, ಸ್ಟೆಥಾಸ್ಕೊಪ್‌ನ್ನು ಬುಸುಗುಡುವ ಹಾವೆಂದು, ಗುಳಿಗೆ ಔಷಧಗಳ ಕಪಾಟೆಂದರೆ ಬೂದಿ ಎಂದು, ಸುಡುಗಾಡು ಶಿವನ ತವರು ಮನೆ" ಎಂದು ಹೇಳಿ ಡಾಕ್ಟರರನ್ನು ಆ ಸುಡುಗಾಡಿನ ಏಜೆಂಟರು" ಎಂದು ಕರೆದು ಪ್ರಸ್ತುತ ಸಮಾಜದಲ್ಲಿನ ಆಸ್ಪತ್ರೆಗಳ ವಸ್ತು ಸ್ಥಿತಿಯನ್ನು, ವಿವಿಧ ದೃಷ್ಟಿಕೋನಗಳ ಮೂಲಕ ಟೀಕಿಸಿದ್ದು ವಿಶೇಷವಾಗಿದೆ.

### ಉದ್ದನ್ನು ವ್ಯಕ್ತಿಯ ಅಡೆತಡೆಗಳು

ಈ ಪ್ರಬಂಧದಲ್ಲಿ ಉದ್ದನ್ನ ವ್ಯಕ್ತಿ, ತನ್ನ ಎತ್ತರದ ನಿಲುವಿನಿಂದ ಸಮಾಜದಲ್ಲಿ ಎದುರಿಸುವ ಸಮಸ್ಯೆಗಳ ಬಗ್ಗೆ ಲಘುವಾದ ದಾಟಿಯಲ್ಲಿ, ಒಂದು ಸಮಾಜದ ಸೂಕ್ಷ್ಮ ನಿರೀಕ್ಷೆಗಳನ್ನು ಹಾಗೂ ಸಾಮಾಜಿಕ ವರ್ತನೆಗಳನ್ನು ಇಂತಹ ಪ್ರಬಂಧಗಳ ಮೂಲಕ ಅಭಿವ್ಯಕ್ತಿಸುವುದು ವೀರೇಂದ್ರ ಸಿಂಪಿಯವರಿಗೆ

ಸಿದ್ಧಿಸಿದೆ ಎಂಬುದನ್ನು ಈ ಪ್ರಬಂಧದ ಮೂಲಕ ಕಂಡುಕೊಳ್ಳಬಹುದು. ಈ ಪ್ರಬಂಧದಲ್ಲಿ ಅಲ್ಲಲ್ಲಿ ಹಾಸ್ಯದ ಜೊತೆಗೆ ವಿಡಂಬನೆ ವ್ಯಕ್ತವಾಗಿರುವುದನ್ನು ಗುರುತಿಸಬಹುದು.

"ರಿಪವ್ಯಾನ್ ವಿಂಕಲನು ಹದಿನೆಂಟು ವರ್ಷ ನಿದ್ದೆ ಮಾಡಿ ಎದ್ದು ತನ್ನ ಮೊಳಕಾಲು ಮುಟ್ಟುವ ಗಡ್ಡವನ್ನು ಕಂಡಂತೆ. ನಾನು ವಿಪರೀತ ಎತ್ತರವಾಗಿದ್ದನ್ನು ಕಂಡೆ"[೧೩] ಎಂಬಲ್ಲಿ ಧಿಡಿರ್ ಬೆಳವಣಿಗೆ ವಿಸ್ಮಯದ ಜೊತೆ ಹಾಸ್ಯವನ್ನು ಸೂಚಿಸುತ್ತದೆ. ಎತ್ತರವಾಗಿದ್ದಕ್ಕೆ ಹಾಸಿಗೆಯ ಕೊರತೆಯಾಗಿ, ಮನೆ ಬಾಗಿಲಿನ ಎತ್ತರ ಕಡಿಮೆಯಾಗಿ ತಲೆಗೆ ಪಟ್ ಎಂದು ಬಡಿಯುವ ಅದನ್ನು ಶಪಿಸುವ ಘಟನೆ ಹಾಸ್ಯವನ್ನುಂಟು ಮಾಡುತ್ತದೆ. ಈ ಪ್ರಬಂಧದಲ್ಲಿ ಲೇಖಕರು ತಮ್ಮ ಪ್ರಾಥಮಿಕ ಶಾಲೆಯ ಗುರುಗಳನ್ನು ಅವರ ಕಾರ್ಯದಕ್ಷತೆಯನ್ನು ತಿಳಿದು. "ಮುಂಜಾನೆ ಅವರ ನೆನೆದರೆ, ಮಾಡಿದ್ದ ಮಾಡಿರದೆ ಪಾಪಗಳೆಲ್ಲಾ ತೊಳೆದುಕೊಂಡು ಹೋಗುವುದು ನನ್ನ ಮೂಢ ನಂಬಿಕೆ."[೧೪] ಎಂದು ಅವರ ಅಸ್ತಿತ್ವವನ್ನು ಟೀಕಿಸುವಲ್ಲಿ ಸೂಚ್ಯ ವಿಡಂಬನೆ ವ್ಯಕ್ತವಾಗಿದೆ. ಹಾಗೇ ಅವರಷ್ಟು ನನ್ನ ಲೋಪ ದೋಷಗಳನ್ನು ತಿದ್ದಿದವರು ಯಾರು ಇಲ್ಲ ಎಂದು ಹೇಳಿ, ಅವರು ಬೈಯುವ 'ಹೇಸಿ' ಪದಕ್ಕೆ ನಾನು "ಸಮಗಾರ ಶಿಷ್ಯ" ಎಂದು. 'ದರಿದ್ರ' ಎಂದುದಕ್ಕೆ ಅವರಲ್ಲಿನ ಶ್ರೀಮಂತಿಕೆಯನ್ನು ಹುಡುಕುತ್ತೇನೆ ಎನ್ನುವಲ್ಲಿ ಲೇಖಕರು ಪ್ರಸ್ತುತ ಗುರುಶಿಷ್ಯರ ಸಂಬಂಧ ಎಂತಹದ್ದು ಎಂದು ವಿಡಂಬಿಸುವ ರೀತಿಯಲ್ಲಿದೆ.

ಉದ್ದನ್ನವರಿಗೆ ಬುದ್ದಿಯಿಲ್ಲ ಎನ್ನುವ ಸಮಾಜದ ತಿರಸ್ಕಾರ ಪೂರಿತ ಗಾದೆಯ ಮಾತುಗಳೆಂದರೆ "ಸಮಾಜವು ಉಗುಳಿದ ತಂಗಳನ್ನ"[೧೫]ವೆಂದು ಜರಿಯುವುದು, ಬೇರೆಯವರ ಕುರಿತು ಮಾತನಾಡುವವರನ್ನು ವಿಡಂಬಿಸುವ ರೀತಿ ವ್ಯಕ್ತವಾಗಿದೆ. ಮಾಸ್ತರರಿಗೆ ಬುದ್ಧಿ ಇಲ್ಲ ಎಂದು ಜರಿದು ಮತ್ತೆ ಅದೇ ಮಾಸ್ತರನ ಹತ್ತಿರ ತಮ್ಮ ಮಕ್ಕಳನ್ನು ಕಳುಹಿಸುವ ಜನರನ್ನು ಮತ್ತು ವಕೀಲನನ್ನು ಸುಳ್ಳಿನ ಮೂಟೆಯೆಂದು ಜರಿದು. ಮತ್ತೇ ಅವನ ಮನೆಗೆ ಚಪ್ಪಲಿ ಹರಿಯುವಂತೆ ತಿರುಗುವ ಜನರನ್ನು, ರಾಜಕಾರಣಿಗಳು ವಿಶ್ವಾಸ ಘಾತಕಿಗಳೆಂದು ಜರಿದು, ಮತ್ತೇ ಅವರನ್ನು ಮುಖಂಡನನ್ನಾಗಿ ಮಾಡುವ ಜನರನ್ನು ಏನೆನ್ನಬೇಕೆಂದು ಸೂಚ್ಯವಾಗಿ "ಪುರಾಣದ ಬದನೆಕಾಯಿ ತಿನ್ನುವ ಪುರಾಣಿಕರ ಸಂತೆ ಈ ಜಗತ್ತು" ಎಂದು ಸಮಾಜವನ್ನು ಟೀಕಿಸುವಲ್ಲಿಯೂ ಮನೋಜ್ಞವಾದ ವಿಡಂಬನೆ ವ್ಯಕ್ತವಾಗಿದೆ.

ಎತ್ತರದ ನಿಲುವಿನ ವ್ಯಕ್ತಿಯನ್ನು ಸಮಾಜ ನೋಡುವ ದೃಷ್ಟಿಕೋನ ಎಂತಹದ್ದು ಎಂಬುದನ್ನು ಹೇಳುವಲ್ಲಿ ಸಹ ತಿಳಿಹಾಸ್ಯ ವ್ಯಕ್ತವಾಗಿದೆ. ಇವರು ಕುಂತರೆ ನಿಂತವರ ನಿಲುವಿಗೆ ಸಮನಾಗಿರುವರು. ಇವರ ಎತ್ತರಕ್ಕೆ ತಕ್ಕ ಬಟ್ಟೆ ಸಿಗದಿರುವುದು, ಚಪ್ಪಲಿ ಕೊಳ್ಳಲು ಹೋದರೆ ನಿಮಗೆ ಸ್ಪೇಷಲ್ ಆರ್ಡರ್ ಮಾಡಿಸಬೇಕೆಂದು ಜಾರಿಕೊಳ್ಳುವ ವ್ಯವಹಾರಿಕ ಬದುಕಿನವರು, ಇವರಿಗೆ ಮಾಡುವ ಮೋಸಗಾರಿಕೆ ಎಂತಹದ್ದು ಎಂಬ ಟೀಕೆಯೂ ಈ ಪ್ರಬಂಧದಲ್ಲಿ ಮೂಡಿಬಂದಿದೆ.

### ಮರೆವಿನ ಮೋಹದಲ್ಲಿ

ಈ ಲಲಿತ ಪ್ರಬಂಧದಲ್ಲಿ ಮನುಷ್ಯನ ಕಡು ವಿರೋಧಿಯಾದ ಮರೆವಿನಿಂದಾಗುವ ಅನಾಹುತಗಳೇನು? ಹಾಗೆ ಅದೇ ಮರೆವಿನಿಂದಾಗುವ ಪ್ರಯೋಜನಗಳೇನು? ಎಂಬುದನ್ನು ಚಿತ್ರಿಸುವಲ್ಲಿಯೇ ಹಾಸ್ಯ ವ್ಯಕ್ತವಾಗಿರುವುದನ್ನು ನಾವು ಈ ಪ್ರಬಂಧದಲ್ಲಿ ಗುರುತಿಸಬಹುದು. ಈ ಪ್ರಬಂಧದಲ್ಲಿ ಮರೆವಿನಿಂದಾಗುವ ಘಟನೆಗಳಿಂದ ಹಾಸ್ಯ ಹೇಗೆ ಹುಟ್ಟುತ್ತದೆ ಎಂಬುದನ್ನು ಅವರು ತಾವು ಚಿಕ್ಕವರಿದ್ದಾಗ ಅವ್ವನ "ಮೊಲೆ ಹಾಲು ಕುಡಿಯುತ್ತಿರುವಾಗ ಯಾರಾದರೂ ಚೇಷ್ಟೆಗೆಂದು ನಿಮ್ಮ ಅವ್ವ ಊರಿಗೆ ಹೋದಳಲ್ಲೋ ಎಂದಾಗ ಅವ್ವನ ತೊಡೆ ಮೇಲೆ ಹಾಯಾಗಿ ಕುಳಿತು ಅವಳಿಗಾಗಿ ಶಂಖ ಕುಟ್ಟುವ ಪ್ರಸಂಗ"[೧೮]ದಲ್ಲಿ ಹಾಸ್ಯದ ಹೊನಲನ್ನು ಹರಿಸಿರುವುದನ್ನು ಕಾಣಬಹುದು.

ಹಾಗೇನೆ ಮತ್ತೊಂದು ಘಟನೆಯಲ್ಲಿ ತಾವು ಊಟಕ್ಕೆ ಕುಳಿತು ಏನನ್ನೊ ನೋಡುತ್ತಾ ಊಟದ ತಟ್ಟೆಯನ್ನು ಮರೆಯುವ ಪ್ರಸಂಗ, ಈಗಲೂ ಊಟಕ್ಕೆ ಇಟ್ಟ ಹಪ್ಪಳ, ಸಂಡಿಗೆಗಳನ್ನು ಮರೆವಿನಿಂದ ಹಾಗೇ ತಟ್ಟೆಯಲ್ಲಿ ಉಳಿದಿರುತ್ತವೆ ಎಂಬ ಮಾತಿನಲ್ಲಿ ಹಾಸ್ಯ ವ್ಯಕ್ತವಾಗಿದೆ.

ಈ ಪ್ರಬಂಧದಲ್ಲಿ ತಿಳಿಹಾಸ್ಯಕ್ಕೆ ಮತ್ತೊಂದು ಉದಾಹರಣೆ ಎಂದರೆ ಪತ್ರ ಬರೆಯಲು ಪೋಸ್ಟ್ ಆಫೀಸ್ ಗೆ ಹೋದ ವ್ಯಕ್ತಿ ಆವತ್ತು ರಜಾದಿನವೆಂದು ತಿಳಿದು, ಕೆಲವು ದಿನಗಳಾದ ನಂತರ ಪತ್ರ ತಂದು ನಾಳೆ ಬರೆದರಾಯ್ತು ಎಂಬ ನಾಳೆಗಳ ನೂರ್ಕೋಟಿ ದಿನ ಕಳೆದ ಮೇಲೆ ಪತ್ರ ಬರೆದು ಅಡ್ರೆಸ್ ಬರೆಯದೇ ಪೋಸ್ಟ್ ಮಾಡಿದ್ದು, ಮರೆವಿನಿಂದಾದ ಅವಾಂತರವಾದರೂ, ಅದು ವಾಚಕರಲ್ಲಿ ಹಾಸ್ಯದ ಹೊನಲನ್ನು ಹರಿಸುತ್ತದೆ. ಹಾಗೇನೇ ಪರೀಕ್ಷೆ ಬರೆಯಲು ಹೊರಟ ವಿದ್ಯಾರ್ಥಿ ಸಿನಿಮಾ ಥೆಯಟರ್‌ಗೆ ಹೋಗಿದ್ದು, ಕಾಯಿಪಲ್ಲೆ ತರಲು ಹೋದ ತರುಣ, ಕ್ರಿಕೆಟ್ ಕಾಮೆಂಟರಿ ಕೇಳಿ ಸಾಯಂಕಾಲ ಮನೆಗೆ ಹಾಗೇ ವಾಪಸ್ಸು ಬಂದಿದ್ದು, ಎಲ್ಲಿಗೆ ಹೊರಟಿದ್ದೇನೆಂಬುದನ್ನು ಮರೆತು ಹಳ್ಳಿಯ ಸಂದಿ-ಗೊಂದಿ ತಿರುಗುವ ಚಪಲ ಸಂಚಾರಿಗಳ ಸನ್ನಿವೇಶದ ಆ ಮರೆವಿನ ಪ್ರಸಂಗವನ್ನು ಹೇಳುವಲ್ಲಿಯೂ ಹಾಸ್ಯ ನವುರಾಗಿ ಮೂಡಿಬಂದಿದೆ.

### ಹೊಗಳಿಕೆ

ಈ ಲಲಿತ ಪ್ರಬಂಧದಲ್ಲಿ ಮಾನವನ ಜೀವನದಲ್ಲಿ ಹೊಗಳಿಕೆ ಎಂಬ ಅಸ್ತ್ರ ಯಾವ ರೀತಿ ಬಳಕೆಯಾಗುತ್ತದೆ. ಹೊಗಳಿಕೆಯಿಂದಾಗುವ ಫಲಾಫಲಗಳೇನು? ಎಂಬುದನ್ನು ತಿಳಿಸುವ ಈ ಪ್ರಬಂಧದಲ್ಲಿ ಅಲ್ಲಲ್ಲಿ ನವುರಾದ ಹಾಸ್ಯ ವಿಡಂಬನೆಗಳು ಬಳಕೆಯಾಗಿರುವುದನ್ನು ಗುರುತಿಸಬಹುದು. ಹೊಗಳಿಕೆಯ ಮಹಿಮೆ ಎಂತಹದು ಎಂದು ಹೇಳುತ್ತಾ ಲೇಖಕರು "ಹಣವೆಂದರೆ ಹೆಣವೂ ಬಾಯಿ ತೆರೆಯುತ್ತದೆ ಎಂಬುದೊಂದು ಗಾದೆ, 'ಹೊಗಳಿಕೆ'ಯೆಂದರೆ ಹೆಣದಂತಿದ್ದವನೂ ಹುರುಪುದೊಟ್ಟು ನಿಲ್ಲುತ್ತಾನೆ ಎಂಬುದು ಪ್ರತಿಗಾದೆ"[೧೯] ಎಂದು ಹೇಳಿ ಅದರ ಮಹತ್ವವನ್ನು ತಿಳಿಸುತ್ತಾ, ಮಾನವನನ್ನು ಸೃಷ್ಟಿ ಮಾಡಿದ

ದೇವರು ಇಂದು ಸ್ತೂತ್ರ ಪ್ರಿಯ ಭಕ್ತರ ಹೊಗಳಿಕೆಗೆ ದಾಸಾನು ದಾಸನಾಗಿದ್ದಾನೆ. "ಭಕ್ತರು ಕೇಳಿದರೆ ತನ್ನ ಹೆಂಡತಿಯನ್ನೆ ಕೊಟ್ಟ ಬೊಳೆ ಶಂಕರನು" ಎನ್ನುವಲ್ಲಿ ದೇವರ ಕಲ್ಪನೆಯನ್ನು ಬಿಂಬಿಸುವಲ್ಲಿ ವಿಡಂಬನೆ ಇದೆ. ದೇವರು ಭಕ್ತರ ದಾಸನಾದಂತೆ ಭಕ್ತರು ದೇವರ ದಾಸನಾಗಿದ್ದಾನೆ. ಭಕ್ತಿ ಎಂಬ ಮೌಢ್ಯಕ್ಕೆ ಬಲಿಯಾಗಿ ತನ್ನ ಅಧಃ ಪತನದ ಹಾದಿ ತಾನೇ ಕಂಡುಕೊಂಡಿದ್ದಾನೆ. ಭಕ್ತನು ದೇವರನ್ನು ನಾಲ್ಕು ಗೋಡೆಗಳ ಮಧ್ಯೆ ಕೂಡಿ ಹಾಕಿ, ದೀಪ, ಧೂಪಗಳ ಹೊಗೆಯಲ್ಲಿ, ತಾವು ಹಾಕಿದ ಹೂವಿನ ಸಾಂಬಾರದಲ್ಲಿ, ಕಲ್ಲಾಗಿ ಬಿದ್ದುಕೊಂಡಿರುವ ಸ್ಥಿತಿಗೆ ತಂದಿದ್ದಾರೆ. ಎಂಬ ಸಾಲುಗಳಲ್ಲಿ ಸಮಾಜ ಇಂದು ದೇವರೆಂಬ ಸಾಂಸ್ಕೃತಿಕ ಸಂಕೇತವನ್ನು ಅಧಃ ಪತನದ ಹಿನ್ನಲೆಗೆ ತಂದಿದ್ದನ್ನು ವಿಡಂಬಿಸಿದ್ದಾರೆ.

'ಹೊಗಳಿಕೆ'ಯ ದಾಸ್ಯಕ್ಕೆ ಒಳಗಾಗದವರು ಯಾರು ಇಲ್ಲ ಎಂದು ಹೇಳುತ್ತಾ ದೇವಾಂಶ ಸಂಭೂತರಾದ ರಾಜ ಮಹಾರಾಜರು ಹೇಗೆ ಹೊಗಳಿಕೆಗೆ ದಾಸಾನುದಾಸರಾಗಿದ್ದರೆಂದು, ಅದಕ್ಕಾಗಿ ಒಬ್ಬ ವಿದೂಷಕನನ್ನು ನೇಮಿಸಿಕೊಂಡಿದ್ದು, ವಿದುಷಕನ ಅಪರಿಹಾಸ್ಯ ನುಡಿಯಿಂದ ತಳಿದು ಭೋಗ, ಲಾಲಸೆಯಲ್ಲಿ ಅರಮನೆಯಲ್ಲಿ ದಿನ ಕಳೆದ ಮೂಢ ರಾಜ ಮಹಾರಾಜರನ್ನು ಟೀಕಿಸಿದ್ದಾರೆ. "ಮಾನವನೆಂದರೆ ಆಸೆ ಆಮೀಷಗಳ ಮೊಟ್ಟೆ"[೭೭] ಇದರಲ್ಲಿ ಹೊಗಳಿಕಗೆ ಪ್ರಥಮ ಪ್ರಾಶಸ್ತ್ಯ. ನಾಲ್ಕು ಜನರಿಂದ ಹೊಗಳಿಸಿ ಕೊಳ್ಳಬೇಕೆಂಬ ಜನ ಏನೆಲ್ಲವನ್ನು ಮಾಡುತ್ತಾರೆ. ತಮ್ಮಲ್ಲಿ ಸ್ವಂತ ಬುದ್ಧಿ ಇದ್ದರೂ ಸಮಾಜಕ್ಕೆ ಬಿಂಬಿತವಾದ ವ್ಯಕ್ತಿತ್ವವನ್ನು ತೋರಿಸುವ ಇವರು "ಒಳಗಡೆ ಮಂಗತನವಿದ್ದರೂ ಹೊರಗಡೆ ಮಹಾತ್ಮನ ವೇಷ ಧರಿಸುವವರು"[೭೮] ಎಂದು ಪ್ರಸ್ತುತ ಸಮಾಜದಲ್ಲಿನ ಕೊಳ್ಳುಬಾಕ ಜನರನ್ನು ವಿಡಂಬಿಸಿರುವುದನ್ನು ಕಾಣಬಹುದು.

'ಹೊಗಳಿಕೆ' ನಿಷ್ಠುರ ನುಡಿಗೆ ತದ್ವಿರುದ್ಧ ಎಂದು ಹೇಳಿ, ಅದಕ್ಕೆ ಒಂದು ಘಟನೆಯನ್ನು ಉದಾಹರಿಸಿದ್ದಾರೆ. ಭೂಷಣರು, ಭಾಷಣ ಮಾಡಲು ಹಾತೊರೆದು ನಿಂತು ಭಾಷಣ ಮಾಡುವಾಗ ಕೈಕಾಲು ನಡುಗಿ, ಅಪಹಾಸ್ಯದ ನಗುವಿನೊಂದಿಗೆ ಕೆಳಗಿಳಿದ ಇವರನ್ನು ಕುಚೇಷ್ಟೆಯಿಂದ ಸ್ನೇಹಿತರು, ಕೈಕುಲಿಕಿ ಬೆನ್ನು ತಟ್ಟಿದರೆ ಲೇಖಕರು ನೇರವಾಗಿ "ಇನ್ನೊಮ್ಮೆ ವೇದಿಕೆಯ ಮೇಲೆ ಏರಬೇಡಿರಿ" ಎಂಬ ನಿಷ್ಠುರ ಮಾತು ಇವರ ಗೆಳತನದ ಸೌಧ ಕಳಚಿದ್ದನ್ನು ಹೇಳುವಲ್ಲಿ ವ್ಯಕ್ತವಾಗಿದೆ. ಹೊಗಳುವ ವ್ಯಕ್ತಿ ಬೇಟೆಗಾರನಾದರೆ, ಹೊಗಳಿಸಿಕೊಳ್ಳುವವ ಕುರಿಮರಿಯಾಗುತ್ತಾನೆ. ಇವನ ಕುತ್ತಿಗೆಯನ್ನು ಕರಕರನೆ ಕೊಯ್ಯುವ ಕಟುಕನಂತೆ ವಿಜಯೋತ್ಸವದ ಕೇಕೆ ಹಾಕುವ ಹೊಗಳುಭಟ್ಟ ಕೇವಲ ತನ್ನ ಲಾಭಕ್ಕಾಗಿ ತನ್ನ ವ್ಯವಹಾರ ಕುಶಲತೆಗಾಗಿ ಹೊಗಳಿಕೆ ಎಂಬ ಅಸ್ತ್ರ ಬಳಸಿಕೊಂಡಿದ್ದಾನೆ. ಇಂತಹ ನಮ್ಮ ಸಾಮಾಜಿಕ ಪರಿಸರದಲ್ಲಿ ಕಪಟತೆಯ ಛಾಯೇ ಅಡಗಿದೆ ಎಂಬುದನ್ನು ಹೇಳುವ ಈ ಪ್ರಬಂಧದಲ್ಲಿ ಮೊನಚಾದ ವಿಡಂಬನೆ ವ್ಯಕ್ತವಾಗಿರುವುದನ್ನು ಕಾಣಬಹುದು.

## ಮಂಗ ಮನಸ್ಸಿನ ಎರಡು ಮುಖಗಳು

ಈ ಪ್ರಬಂಧದಲ್ಲಿ ಮಂಗನಂತೆ ಚಪಲ-ಚಂಚಲ ಪ್ರಾಣಿಯಾಗಿ ಹುಟ್ಟಿದ ಮಾನವನು ತನ್ನ ಚಿತ್ತ ಚಂಚಲ ಬುದ್ಧಿಯಿಂದ ಹೇಗೆ ಅನಾವಶ್ಯಕ ಗೊಂದಲವನ್ನು ಸೃಷ್ಟಿ ಮಾಡಿಕೊಳ್ಳುತ್ತಾನೆ ಎಂದು, ಅವನ ಮನಸ್ಸಿನ ಸಂಪದ್ಭರಿತ ವಿಚಾರಗಳು ಯಾವ ರೀತಿ ಕೊಂಕು, ಕಟಕಿಗಳಿಂದ, ಅವಹೇಳನಕಾರಿ ಮಾತುಗಳಿಂದ, ತನ್ನ 'ಮಂಗತನ'ವನ್ನು ಪ್ರತಿಬಿಂಬಿಸುತ್ತಾನೆ ಎಂಬುದನ್ನು, ಆತ್ಮವಿವೇಚನೆಯ ಮೂಲಕ ಲೇಖಕರೇ ಪ್ರಬಂಧದ ವಸ್ತುವಾಗಿ ಎಲ್ಲರ ಮನೋಕಾಮನೆಗಳ ಪ್ರತಿನಿಧಿಯಾಗಿ ಈ ಪ್ರಬಂಧದಲ್ಲಿ ವಿಡಂಬಿಸಿದ್ದಾರೆ. "ಹಾಸಿಗೆಯಿಂದ ಎದ್ದನೆಂದು ಬೆಳಗಾಗಲಿಲ್ಲ ಬೆಳಗಾಯಿತೆಂದು ಏಳಬೇಕಾಯಿತು"[೧೯] ಎಂಬ ಮಾತಿನಲ್ಲಿ ಆಧುನಿಕ ಮಾನವನ ಸೋಮಾರಿತನವನ್ನು ಸೂಚಿಸುತ್ತದೆ.

'ಮನುಷ್ಯನೆಂದರೆ ದ್ವಿಪಾದಪಶು' ಇವನು ಪ್ರಾಣಿ ವಂಶಕ್ಕೆ ಸೇರಿದವನು. ವಿಚಾರದಿಂದ ಎಷ್ಟೇ ದೊಡ್ಡವನಾದರೂ ನಡವಳಿಕೆಯಲ್ಲಿ ಪಶುವಿನಂತೆ ವರ್ತಿಸುತ್ತಾನೆ. ಅದಕ್ಕೆ 'ಮಂಗನಿಂದ ಮಾನವ' ಎಂಬ ಗಾದೆ ಸೃಷ್ಟಿಯಾಗಿದೆ. ಮರ್ಕಟ ಬುದ್ಧಿ ಮಾನವ ಜನಾಂಗಕ್ಕೆ ಅಂಟಿಕೊಂಡ ಸಾಂಕ್ರಮಿಕ ಜಾಡ್ಯ"[೨೦] ಎಂದು ಟೀಕಿಸುತ್ತಾ ಬಸವಣ್ಣನವರ "ನಾಯಿತನವ ಮಾಣಿಸು" ಎಂದಿದ್ದನ್ನು "ಕೊಡಂಗಿತನವ ಮಾಣಿಸು" ಎಂದಿರುವುದು ಮಾನವನ ದುರಾಲೋಚನೆಗೆ ಅವನ ಪಶುಬುದ್ಧಿಯೇ ಕಾರಣ ಎಂದು ಈ ಪ್ರಬಂಧದಲ್ಲಿ ಇಂಥಮಾನವರ ವಿರುದ್ಧದ ವಿಡಂಬನೆ ವ್ಯಕ್ತವಾಗಿದೆ.

ಹಿಂದೆ ಸುಗ್ರೀವನ ಉಪವನಕ್ಕೆ ವಾನರ ಗುಂಪು ಲಗ್ಗೆ ಇಟ್ಟಂತೆ, ಇಂದು ಮಾನವನಿಗೆ ವಿಜ್ಞಾನ ದೊರಕಿಸಿ ಕೊಟ್ಟ ಯಶಸ್ಸಿನ ಉನ್ಮಾದದಲ್ಲಿ ಆಧುನಿಕ ಜನಾಂಗವನ್ನು ಹಾಗೂ ಜಗತ್ತನ್ನು ಹಾಳು ಮಾಡುವ ಕಾರ್ಯ ರೂಪಿಸಿಕೊಂಡಿದ್ದಾನೆ. ಅದಕ್ಕೆ "ಪೃಥ್ವಿ ಮಾನವನ ಕೈಯಲ್ಲಿ ಮಾಣಿಕ್ಯದಂತಾಗಿದೆ"[೨೧] ಎಂದು ಟೀಕಾತ್ಮಕವಾಗಿ ವ್ಯಕ್ತಪಡಿಸಿದ್ದಾರೆ. ನಮ್ಮ ಮಂಗ ಮನಸ್ಸಿನಿಂದ ನಾವು ಇನ್ನೊಬ್ಬರನ್ನು ನಿರೀಕ್ಷಿಸಿ, ಅವನ ನಡೆ-ನುಡಿ-ವ್ಯಕ್ತಿತ್ವದ ಬಗ್ಗೆ ಟೀಕಿಸುವ ನಮಗೆ ಅನ್ಯರನ್ನು ಟೀಕಿಸುವ ಮೊದಲು ನಾನು ಸ್ವಚ್ಛವಾಗಿದ್ದನೇಯೇ ಎಂದು ಆತ್ಮಾವಲೋಕನ ಮಾಡಿಕೊಳ್ಳಬೇಕು. ಲೋಕದ ಟೊಂಕು ತಿದ್ದುವ ಮೊದಲು ತನ್ನನ್ನು ತಾನು ತಿದ್ದಿಕೊಂಡರೆ ಸಾಕು ಎಂದು ಹೇಳುವ ಈ ಪ್ರಬಂಧ ಮನುಷ್ಯ ಮನುಷ್ಯನಾಗಿರಬೇಕಾದರೆ ಅನ್ಯರಿಗೆ ಅಸಹ್ಯ ಪಡುವ ಗುಣ ಬಿಡಬೇಕು ಎಂದು ಸರಳವಾಗಿ ವ್ಯಕ್ತಿ ಮತ್ತು ಸಮಾಜದ ವಿಡಂಬನೆಯನ್ನು ವೈಚಾರಿಕವಾದ ಅಂಶಗಳಿಂದ ವ್ಯಕ್ತಪಡಿಸಿರುವುದನ್ನು ಈ ಪ್ರಬಂಧದಲ್ಲಿ ನೋಡಬಹುದು.

## ಖಾನಾವಳಿಗಳು

ಖಾನಾವಳಿಗಳು ಇಂದಿನ ಆಧುನಿಕ ಬದುಕಿನಲ್ಲಿ ಸಾರ್ವಜನಿಕ ಕ್ಷೇತ್ರದಲ್ಲಿ ಹಾಸುಹೊಕ್ಕಾಗಿದೆ. ಇಂತಹ ಖಾನಾವಳಿಗಳ ಬಗ್ಗೆ ಹಾಗೂ ಅವುಗಳ ಮಹತ್ವದ ಅರಿವನ್ನು ಮೂಡಿಸುವ ವೀರೇಂದ್ರ

ಸಿಂಪಿಯವರು "ಖಾನಾವಳಿಗಳಿಲ್ಲದ ಜಗತ್ತಿನ ಕಲ್ಪನೆ ಅಸಾಧ್ಯ. ಅವು ಭೂಲೋಕದ ತಂಗುಮನೆಗಳು"[೨೨] ಎಂದು. ಭಾರತದ ವಿವಿಧ ಸಂಸ್ಕೃತಿಯ ಅಭಿರುಚಿಯ ಪ್ರತೀಕಗಳಾಗಿವೆ ಎಂದು ಅಭಿಪ್ರಾಯ ಪಡುತ್ತಾರೆ.

ಈ ಪ್ರಬಂಧದಲ್ಲಿ ಅಲ್ಲಲ್ಲಿ ಲಘುಹಾಸ್ಯ ಮಿಶ್ರಿತ ವಿಡಂಬನೆಯನ್ನು ಗುರುತಿಸಬಹುದು. ಇಂದಿನ ದಿನಪತ್ರಿಕೆಗಳಲ್ಲಿನ ನೀರಸ, ನಿಸತ್ವ ವಿಷಯಗಳೇ ತುಂಬಿ ಅವುಗಳು ಇಂದು ಯಾವ ಸ್ಥಿತಿ ತಲುಪಿವೆ ಎಂದು ಹೇಳುತ್ತಾ, ಕೇವಲ ಮಂತ್ರಿವರ್ಯರ ನೀರಸ ಭಾಷಣಗಳು, ರಾಜಕೀಯ ಕಿತ್ತಾಟ, ಗುಂಪುಗಳು, ಅನಾಚಾರ, ಅತ್ಯಾಚಾರದಂತಹ ವಿಷಯಗಳೇ ತುಂಬಿ ಓದುಗರ ಸಾತ್ವಿಕ ಭಾವನೆಯನ್ನು ಹಾಳು ಮಾಡುವ ದಿನಪತ್ರಿಕೆಗಳ ಕುರಿತ ವಿಡಂಬನೆ ವ್ಯಕ್ತವಾಗಿದೆ. ಖಾನಾವಳಿಯ ಊಟ ಮತ್ತು ಅದರ ಗುಣಮಟ್ಟವನ್ನು ಪ್ರಶ್ನಿಸುವ ಜನರ ಮನೋಭಾವವನ್ನು ಇಲ್ಲಿ ಬಿಂಬಿಸಿದ್ದಾರೆ. ಅಧಿಕಾರಿ ವರ್ಗದವರು ಸಂಬಳದ ಪೂಜಾರಿಗಳಾಗಿ ದಿನವಿಡಿ ಇಂತಹ ಖಾನಾವಳಿಗಳಲ್ಲಿ ಕಾಲ ಕಳೆಯುವ ಅವರನ್ನು ಟೀಕಿಸಿದ್ದಾರೆ.

ಮಾನವನ ಸಂಕುಚಿತ ಮನೋಭಾವ ಎಂತಹದು ಎಂದು ಹೇಳುತ್ತಾ ಇಂದು ನಾವು. 'ಉಡುಪಿ ಬ್ರಾಹ್ಮಣರ ಹೊಟೇಲ', 'ವೀರಶೈವ ಲಿಂಗಾಯತ ಖಾನಾವಳಿ', 'ಇಸ್ಲಾಮಿಯ ಹೊಟೇಲ್', 'ಮರಾಠ ಖಾನಾವಳಿ' ಎಂದು ಮತಿಯ ಹೆಸರನ್ನ ಇಟ್ಟಿಕೊಂಡು ಜನರ ಐಕ್ಯತೆಗೆ ಧಕ್ಕೆ ತರುವ ಇಂತಹ ಸಂಕುಚಿತ ಮನೋಭಾವದ ವ್ಯಕ್ತಿಗಳ ವಿರುದ್ಧ ಕಿಡಿಕಾರುವಲ್ಲಿ ವಿಡಂಬನೆ ವ್ಯಕ್ತವಾಗಿದೆ. ಖಾನಾವಳಿಯಲ್ಲಿ ನಡೆಯುವ ಜನರ ಸಂಭಾಷಣೆ 'ನಿಮ್ಮದು ನಳಪಾಕ ಮಹಾಶಯರೇ' 'ಈ ಚಪಾತಿ ನಿಮ್ಮ ನಾಯಿಗೆ ತಿನ್ನಿಸಿದ್ದಿರಾ? 'ನಿಮ್ಮ ಹೋಟೇಲ್‌ನಲ್ಲಿ ನಿರೋಂದೇ ಚೆನ್ನಾಗಿದೆ' ಎಂಬ ಸಂಭಾಷಣೆಯಲ್ಲಿ ಲಘುಹಾಸ್ಯ ವ್ಯಕ್ತವಾಗಿದೆ.

## ಭಾವ ಮೈದುನ

'ಭಾವಮೈದುನ' ಈ ಪ್ರಬಂಧದಲ್ಲಿ ಲೇಖಕರು ತಮ್ಮ ಹೆಂಡತಿಯ ಸಹೋದರನ ಉಪಟಳವನ್ನು, ಕಿರಿಕಿರಿಯನ್ನು, ಮಾರ್ಮಿಕವಾಗಿ ಹಾಸ್ಯಭರಿತವಾಗಿ ನಿರೂಪಿಸಿದ್ದಾರೆ. "ಹೆಂಡತಿ ಅರ್ಧಾಂಗಿಯಾದರೆ ಭಾವ ಮೈದುನ ಪೂರ್ಣಾಂಗನಾಗಿದ್ದಾನೆ."[೨೩] ಎಂದು ಅವನ ಅಧಿಕಾರದ ಪರಿಧಿಯನ್ನು ತೋರಿಸಿದ್ದಾರೆ. ಹೆಂಡತಿಯಾದವಳು ತಮ್ಮ ಗಂಡನಿಗೆ ಅತ್ತು, ಕರೆದು, ಮುನಿಸು ತೋರಿ, ಕೊನೆಗೆ ಮುದ್ದುಕೊಟ್ಟು, 'ಗಂಡೆಂಬ ಪ್ರಾಣಿಯನ್ನು ಗಾಳಿಪಟದಂತೆ ಮಾಡುವ ಈಕೆ ತನ್ನ ಕೈಯೊಳಗೆ ಕಠ ಪುತಲಿಗಳಂತೆ ಕುಣಿ ಗೊಂಬೆ'ಗಳಂತೆ ಮಾಡುವಳು. ಕುಣಿತದಲ್ಲಿ ಕಿಂಚಿತ್ ಊನವಾದರೂ ಅವರ ಗತಿ ಶಿವನಿಗೆ ಪ್ರೀತಿ, ಎಂಬಲ್ಲಿ ಇಂದಿನ ಆಧುನಿಕ ಯುಗದಲ್ಲಿ ಗಂಡ ಹೆಂಡತಿಯ ಕೈಗೊಂಬೆಯಾಗುವುದನ್ನು, ಬದುಕಿನ ಅನುಭವದ ಮಧುರ ರಸಪಾಕವನ್ನು ಸರಸ-ವಿರಸಮಯ ಪ್ರಸಂಗಗಳಿಂದ ಆಧುನಿಕ ಸಂಸಾರಿಗನ ಪರಿಸ್ಥಿತಿಯ ಅರಿವು ಮೂಡಿಸುವಲ್ಲಿ ವಿಡಂಬನೆ ವ್ಯಕ್ತವಾಗಿದೆ.

ಅಂದು ಗುರುವಿನ ಗುಲಾಮನಾದರೆ ಮುಕ್ತಿ ಎಂಬ ಕಾಲವಿತ್ತು. ಆದರೆ ಇಂದು ಹೆಂಡತಿಯ ಗುಲಾಮನಾಗುವ ತನಕ ಮುಕ್ತಿ ದೊರೆಯದು. ಗುಲಾಮನಾದವನು ಪಡೆಯುವ ಆನಂದ ದೇಶದ ಸಾರ್ವಭೌಮತ್ವವೂ ಕೂಡ ಕೊಡಲಾರದು ಎಂದು ಜೀವನವನ್ನು ಸೂಕ್ಷ್ಮವಾಗಿ ನೋಡುವ ದೃಷ್ಟಿಯಿಂದ ಹೇಳಿದ್ದಾರೆ. ಈ ಪ್ರಬಂಧದಲ್ಲಿ ಭಾವ ಮೈದುನನ ಕಿರಿಕಿರಿ ಕುಚೇಷ್ಟೆಗಳಿಂದ ಹಾಸ್ಯ ಚೆಲ್ಲುವರೆದು ಬಂದಿದೆ. "ಮದುವೆಯಾದ ಹೊಸತರಲ್ಲಿ ಹೆಂಡತಿಯ ಬಾಲ ಗಸಿಯಾಗಿ ಬಂದ ಕುಮಾರನು ಇವರಿಬ್ಬರ ನಡುವಿನ ಅಡ್ಡಗೋಡೆಯಾಗಿ ಕಿರಿಕಿರಿ ಮಾಡುವ ಕಿರಿಯನಾಗಿ ದಿನದ ೨೪ ಗಂಟೆ ನಿದ್ದೆಯೊಡೆಯುವ ಅಲರಾಂ ಗಡಿಯಾರವಾಗಿದ್ದಾನೆ. ಸಾಮಾನುಗಳನ್ನು ಚೆಲ್ಲಾಪಿಲ್ಲಿ ಮಾಡುವ ಇಲಿಯಾಗಿದ್ದಾನೆ."[೨೫] ಎಂದು ಮೈದುನನ ಕುರಿತಾದ ತಮ್ಮ ಅಳಲನ್ನು ವ್ಯಕ್ತಪಡಿಸುವಲ್ಲಿ ಹಾಸ್ಯ ವ್ಯಕ್ತವಾಗುತ್ತದೆ.

ಅಕ್ಕನಿಗೆ ಇನ್ನೂ ಕೂಸಾದ ಕುಮಾರನ ವಯಸ್ಸು ಮೊನ್ನೆಗೆ ೨೦ ವರ್ಷ ತುಂಬಿದೆ. ಮೆಟ್ರಿಕ್ ಪರೀಕ್ಷೆಯಲ್ಲಿ ಮೂರು ಸಾರೆ ಲಾಗಹೊಡೆದಿದ್ದಾನೆ. ತಿಂದು ತಿಂದು ಮಲಗುವ ಇವನನ್ನು ಕಂಡು, "ನಾನು ಓಡಾಡಿ ತೆಳ್ಳಗಾಗುತ್ತಾ ನಡೆದರೆ, ಇವನು ನಿತ್ಯದೇಹ ಬೆಳೆಸಿ ಫುಟಬಾಲ್ ಚೆಂಡಾಗಿದ್ದಾನೆ" ಎಂದು ಹೇಳುವಲ್ಲಿ ವ್ಯಂಗ್ಯ ಸಹ ಮೂಡಿಬಂದಿದೆ. ಈ ಪ್ರಬಂಧದಲ್ಲಿ ಗಂಭೀರವಾದ ಪೌರಾಣಿಕ ವಿಷಯವನ್ನು ತುಂಟತನದಿಂದ ಹಾಸ್ಯಕ್ಕೆಳೆದು ಲಘುವಾಗಿ ಬಣ್ಣಿಸುವ ರೀತಿ ಅಮೋಘವಾಗಿದೆ. 'ಅರ್ಜುನ ಮೂರು ಲೋಕದ ಗಂಡಾದರೂ ಸುಭದ್ರೆ ಮತ್ತು ಕೃಷ್ಣನ ದಾಸನಾಗಿದ್ದು, ಯುದ್ಧದಲ್ಲಿ ತಮ್ಮವರನ್ನು ಕೊಲ್ಲಬೇಕಲ್ಲಾ ಎಂಬ ಸಂದರ್ಭದಲ್ಲಿ ಕೃಷ್ಣನ ಬೋರಿಂಗ್ ಭಗವದ್ಗೀತೆ ಭಾಷಣ ಕೇಳಬೇಕಾಯ್ತು. ಆ ಸಮುಯದಲ್ಲಿ ಅದೆಷ್ಟು ಆಕಳಿಸಿದೆನೋ, ತೂಕಡಿಸಿದೆನೋ ಬಲ್ಲವರಾರು ಎಂಬಲ್ಲಿ ಕುಚೋದ್ಯದ ಹಾಸ್ಯ ವ್ಯಕ್ತವಾಗಿದೆ.

**ಪರಚಿಂತೆ ನಮಗೇಕಯ್ಯ**

ಈ ಲಲಿತ ಪ್ರಬಂಧದಲ್ಲಿ ಲೇಖಕರು ಸಮಾಜದಲ್ಲಿ ನಡೆಯುವ ಅನ್ಯಾಯ ಅನಾಚಾರಗಳು ಎಂತಹದು? ಅವುಗಳನ್ನು ಕಂಡು ಕಾಣದಂತೆ ಕುಳಿತು ನೋಡುವ ಬುದ್ಧಿಜೀವಿಗಳ ಧೋರಣೆ ಎಂತಹವು? ಎಂದು ಅವರನ್ನು ತರಾಟೆಗೆ ತೆಗೆದುಕೊಳ್ಳುವ ಈ ಪ್ರಬಂಧದಲ್ಲಿ ತಮ್ಮ ಮೊನಚಾದ ಮಾತಿನ ಶೈಲಿಯಿಂದ ವ್ಯಂಗ್ಯ ವಿಡಂಬನೆಯನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದು. ಭಾರತದಲ್ಲಿ ಬುದ್ಧಿಜೀವಿಗಳೆನಿಸಿಕೊಂಡವರು ಸಮಾಜದಲ್ಲಿಯ ಅನ್ಯಾಯ, ಅನಾಚಾರದ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಅವರು 'ನಿರೋನ ಅಪರಾವತಾರದವರೆಂದು' ಲೇವಡಿ ಮಾಡಿದ್ದಾರೆ. ಇವರು ತಮ್ಮ ಬುದ್ಧಿಯಿಂದ ತಾವು ಮಾತ್ರ ಜೀವಿಸಬೇಕೆನ್ನುವ ಮನೋಭಾವದವರು. ಇವರು ಯಾವಾಗಲೂ ಆಳುವ ಪಕ್ಷದ ಹೊಗಳು ಭಟ್ಟರಾಗಿರುತ್ತಾರೆ ಎಂದು, ಅವರ ಅನ್ಯಾಯ-ಅನಾಚಾರಗಳ ವಿರುದ್ಧ ಉಂಟಾಗುವ ಸಾತ್ವಿಕ ಕೋಪವನ್ನು ವ್ಯಂಗ್ಯವಾಗಿ ಮೊನಚಿನ ಮಾತಿನ ಮೂಲಕ ಪ್ರಕಟಪಡಿಸಿದ್ದಾರೆ.

ಬುದ್ಧಿ ಜೀವಿಗಳೆನಿಸಿಕೊಂಡವರು ಮೇಲಾಧಿಕಾರಿಗಳಿಗೆ ಸಲಾಮು ಹೊಡೆದು, ಕೆಳಗಿನ ಅಧಿಕಾರಿಗಳನ್ನು ಬೆದರಿಸಿ ಸಾಕಷ್ಟು ಹಣ ಸಂಪಾದಿಸುವ ಇವರು ಹಣ ಗಳಿಸುವ ಯಂತ್ರವಾಗಿದ್ದಾರೆ. ಇವರನ್ನು ಸ್ವಜನ ಪಕ್ಷಪಾತಿಗಳೆಂದು ಕರೆದು ಇವರಿಂದ ಯಾವ ಸಾಮಾಜಿಕ ಕಲ್ಯಾಣವೂ ಸಾಧ್ಯವಿಲ್ಲ ಎಂದು ಬುದ್ಧಿಜೀವಿಗಳನ್ನು ಟೀಕಿಸುವಲ್ಲಿ ವಿಡಂಬನೆ ವ್ಯಕ್ತವಾಗಿದೆ. ಇಂದಿನ ನೌಕರಶಾಹಿ ವರ್ಗದಲ್ಲಿ ಕೈ ಬಿಸಿಯಾಗದ ಹೊರತು ಯಾವ ಫೈಲು ಒಂದು ಮಿಲಿ ಮೀಟರ್ ಮುಂದೆ ಚಲಿಸಲಾರದು ಎಂದೇಳುವಲ್ಲಿ ಸಮಾಜದಲ್ಲಿನ ಅಧಿಕಾರಶಾಹಿ ಪ್ರಭುತ್ವದಲ್ಲಿನ ಅಕ್ರಮ ಅನಾಚಾರಗಳನ್ನು ವಿಡಂಬನಾತ್ಮಕವಾಗಿ ಹೇಳಿದ್ದಾರೆ.

ನಮ್ಮ ಸಮಾಜದಲ್ಲಿನ ಬುದ್ಧಿಜೀವಿಗಳ ಸೇವೆ ಎಂತಹದು ಎಂದು ಹೇಳುತ್ತಾ, ಅವರು ಪತ್ರಿಕೆಗಳನ್ನು ಕಾಫಿ ಕುಡಿಯುತ್ತಲೋ, ತಿಂಡಿ ತಿನ್ನುತ್ತಲೋ, ಓದುತ್ತಾರೆ. ಆ ಪತ್ರಿಕೆಯಲ್ಲಿನ ವಿದ್ಯಾರ್ಥಿಗಳ ಮೇಲೆ ಹಲ್ಲೆ, ಗೋಲಿಬಾರು, ನರಗುಂದದಲ್ಲಿ ಗಲಭೆ, ಸಾಮೂಹಿಕ ಅತ್ಯಾಚಾರ, ಜಾತಿಗಲಭೆ, ಸ್ತ್ರೀಶೋಷಣೆ, ರೈತರ ಮೇಲಿನ ಹಲ್ಲೇ ಇಂತಹ ವಾರ್ತೆಗಳನ್ನು ಓದುವಲ್ಲಿ ಇವರ ಹೃದಯ ಕರಗುವುದಿಲ್ಲ. ಕಣ್ಣು ಮಂಜಾಗುವುದಿಲ್ಲ. ಏಕೆಂದರೆ ಸತ್ತವನು ನಾನಲ್ಲವಲ್ಲಾ? ನಮ್ಮ ಕುಟುಂಬದವರಲ್ಲವಲ್ಲಾ? ಎಂಬ ಅವರ ಧೋರಣೆಯನ್ನು ಖಂಡಿಸುವಲ್ಲಿ ಸಹ ಕಟೋಕ್ತಿ ವಿಡಂಬನೆ ವ್ಯಕ್ತವಾಗಿದೆ. ಬುದ್ಧಿಜೀವಿಗಳೇನಿಸಿ ಕೊಂಡವರು ಭಾರತದಲ್ಲಿನ ಸಮಸ್ಯೆಗಳಿಗೆ ಕಿವಿಗೊಡದೆ ತಮ್ಮ ಸ್ವಹಿತಾಸಕ್ತಿ ಬಯಸುವ ಇವರನ್ನು ಖಂಡಿಸುವಲ್ಲಿ, ಹಾಗೂ ರಾಜಕಾರಣಿಗಳೆಂಬ ಮಂಗಗಳು ಪಕ್ಷದಿಂದ ಪಕ್ಷಕ್ಕೆ ಜಿಗಿಯುವುದು. ಅವರ ಕೆಲಸಗಳೆಂಬ ಡೊಂಬರಾಟವನ್ನು ಟೀಕಿಸುತ್ತಾ ಸಮಾಜದ ಜನರ ವ್ಯವಹಾರಿಕ ಮಾದರಿ ಎಂತಹದು? ಎಂದು ಸಾಮಾಜಿಕ ಸ್ತಂಭಗಳಂತೆ ನಡಿಸುವ ವ್ಯಕ್ತಿಗಳ ಒಳಟೊಳ್ಳು ಭಾವನೆಯನ್ನು ಬಯಲಿಗೆಳೆದು ಜನರ ಅಂತಃಕರಣದ ಮುಖಚಹರೆಯಲ್ಲಿ ಅರಿವು ಮೂಡಿಸುವ ಪ್ರಯತ್ನ ಈ ಪ್ರಬಂಧದಲ್ಲಿ ಮಾಡಲಾಗಿದೆ.

**ಕವಿಗಳಿಗೊಂದು ಎಚ್ಚರಿಕೆ**

ಈ ಪ್ರಬಂಧದಲ್ಲಿ ಇಂದಿನ ಯುಗದ ಕವಿ ತನ್ನ ಡಾಂಬಿಕ ವಿಚಾರ ಮತ್ತು ನಿಲುವಿನಿಂದ ಆತನ ಕವಿತೆ ಓದುಗರಲ್ಲಿ ಏಕೆ? ಆಸಕ್ತಿ ಕಳೆದುಕೊಂಡಿದೆ. ಇಂದಿನ ಜಗತ್ತಿಗೆ ಕವಿಯ ಅಸ್ತಿತ್ವಕ್ಕೆ ಯಾವ ಬೆಲೆಯೂ ಇಲ್ಲ ಎಂಬ ಸಾರವನ್ನೊಳಗೊಂಡ ಈ ಪ್ರಬಂಧ ಶುದ್ಧ ವ್ಯಂಗ್ಯ ವಿಡಂಬನೆಯನ್ನು ಒಳಗೊಂಡಿದೆ.

ಅಸ್ಟ್ರೇಲಿಯಾ ಸರಕಾರ ಕವಿಗಳಿಗೆ ನೌಕರಿ ಕೊಡಬಾರದೆಂಬ ನಿಲುವು ತಾಳಿರುವುದನ್ನು ಸಮರ್ಥಿಸುವ ಲೇಖಕರು "ವೇದಾಂತಿಯಾದ ಕವಿಯಿಂದ ಆಡಳಿತಕ್ಕೆ ಯಾವ ಲಾಭವಾಗದು"[೨೫] ಎಂದು ಕವಿ ನೌಕರಿಗೆ ಅರ್ಹನಲ್ಲ ಎಂಬುದನ್ನು ನೇರವಾಗಿ ಹೇಳಿದ್ದಾರೆ. ಸರಕಾರದ ಯಾವ ಖಾತೆಗೂ ಈತನು ಅನರ್ಹ,

ಅಯೋಗ್ಯ ಎಂಬ ಮಾತು ಹೇಳುತ್ತಾ "ಜನ ಸಾಮಾನ್ಯರ ಭವಣೆಗಳನ್ನು ಹೃದಯ ಮಿಡಿತವನ್ನು ಕವಿಯಾದವನು ಪ್ರಕಟಿಸುತ್ತಾನೆಂದು ಅನ್ನುವವರು ಅನ್ನಲಿ ಕವಿತೆಯು ಜೀವನಕ್ಕೆ ಕಳೆಯನ್ನು ಅರ್ಥವನ್ನು, ಬಾಳಿಗೆ ನಯವನ್ನು ದಯಪಾಲಿಸುತ್ತದೆಂದು ಅಜ್ಞರು ಸಾರಿ ಸಾರಿ ಹೇಳಲಿ. ಆದರೆ, ನಮ್ಮಂಥ ತುತ್ತು ಬಡಕರಿಗೆ ತತ್ವ ವಿಚಾರವೇಕೆ ಬೇಕು?"[೨೫] ಎಂದು ಪ್ರಶ್ನಿಸುವಲ್ಲಿ ಆಧುನಿಕ ಜಗತ್ತಿನ ಕವಿ ಮತ್ತು ಕವಿತೆಯ ನೀರಸ ಅಭಿಪ್ರಾಯವನ್ನು ವ್ಯಂಗ್ಯವಾಗಿ ವಿಡಂಬಿಸಿದ್ದಾರೆ.

ಕವಿ ಕಾವ್ಯ ವಾಸ್ತವತೆಯಿಂದ ದೂರದಲ್ಲಿದೆ. ಅದು ಅಸತ್ಯದ ರಗಳೆಗಳಾಗಿ, ಅಮೂಲ್ಯ ವೇಳೆಯನ್ನು, ನೆಮ್ಮದಿಯನ್ನು ಹಾಳುಮಾಡುತ್ತವೆ. ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳು, ಹಾದರದ, ದಾಯಾದಿ ಮತ್ಸರದ, ಸುಲಿಗೆ, ವ್ಯಭಿಚಾರದಂತಹ ವಿಚಾರಗಳೇ ಅಧಿಕವಾಗಿ ಜನರಲ್ಲಿ ಜಗುಪ್ಸೆ ಹುಟ್ಟಿಸುತ್ತವೆ ವಿನಃ; ಉದಾತತ್ತೆಯನ್ನು ಪ್ರಚೋದಿಸುವುದಿಲ್ಲ. ಎಂಬ ವಿಡಂಬನೆಯನ್ನು ನೋಡಬಹುದು. ಕಲ್ಪನಾವಿಲಾಸದಿಂದ ಕೂಡಿದ ಕವಿತೆ ಅಸತ್ಯದ ಆಗರ. ಇದರಿಂದ ಸಮಾಜಕ್ಕೇನು ಉಪಯೋಗವಿಲ್ಲ. ಇದರಿಂದಾಗಿ ಸಮಾಜದಲ್ಲಿ ಅಲಸ್ಯ ಬೆಳೆದು ಪಲಾಯನವಾದಿಗಳಾಗಿದ್ದಾರೆ. ಎಂದು ಅಯ್ಯಾ! ಕವಿ ನೀನು ಬರೆದ ಕವಿತೆ ನಿನಗೇನಾದರೂ ಅರ್ಥವಾಗಿದೆಯೇ" ಎಂದು ಪ್ರಶ್ನಿಸುವ ಲೇಖಕರು ಇಂದಿನ ಜಗತ್ತಿಗೆ ಕವಿಯ ಅಸ್ತಿತ್ವಕ್ಕೆ ಯಾವ ಬೆಲೆ ಇಲ್ಲ ಎಂದು ಇವರು ಶಾಸನ ಕರ್ತರಾಗಿ ಆರಿಸಿ ಬಂದಿದ್ದು ಇವರ ಬುದ್ಧಿವಂತಿಕೆಯಿಂದಲೇ ಎಂದು, ಅಣುಕು ನುಡಿಯಿಂದ ಕೂಡಿದ ಈ ಪ್ರಬಂಧದಲ್ಲಿ ಮೊನಚಾದ ವಿಡಂಬನೆ ವ್ಯಕ್ತವಾಗಿದೆ.

**ಬೇಸರ**

ಈ ಪ್ರಬಂಧದಲ್ಲಿ ವೀರೇಂದ್ರ ಸಿಂಪಿಯವರು ಒಂದು ವಿಷಯವನ್ನು ವಿವಿಧ ಸನ್ನಿವೇಶ ಹಾಗೂ ಬೇರೆ ಬೇರೆ ದೃಷ್ಟಿಕೋನಗಳಿಂದ ನೋಡುವ; ಸಾಮಾನ್ಯ ಸಂಗತಿಯಿಂದ ಪ್ರಾರಂಭವಾಗಿ ಸಹಜವಾದ ಆಳವಾದ ಚಿಂತನೆಯತ್ತಾ ಸಾಗುವ ವೈಖರಿಯನ್ನು ಪ್ರಬಂಧದಲ್ಲಿ ನೋಡಬಹುದು. 'ಬೇಸರ' ಎಂಬ ಸಾರ್ವತ್ರಿಕ ವಿಷಯವನ್ನು ತೆಗೆದುಕೊಂಡು ಜೀವನದಲ್ಲಿ ಅದು ಸೃಷ್ಟಿ ಮಾಡುವ ಅನಾನುಕೂಲವನ್ನು ಈ ಪ್ರಬಂಧದಲ್ಲಿ ಲಘುಹಾಸ್ಯದೊಂದಿಗೆ ವಿಡಂಬನೆಯನ್ನು ಬೆರೆಸುತ್ತಾ ಹೋಗಿದ್ದಾರೆ.

ಬೇಸರ ಯಾರನ್ನು ಬಿಟ್ಟಿದ್ದಲ್ಲ ಅದು ನಮ್ಮ ನೆರಳಂತೆ ಸದಾ ಹಿಂಬಾಲಿಸುತ್ತದೆ. ಅದು ನಮ್ಮ ವಿರಾಮ ಸಮಯವನ್ನು ಆಕ್ರಮಿಸಿ ನಮ್ಮ ನೆಮ್ಮದಿಯನ್ನು ಹಾಳು ಮಾಡುವುದಲ್ಲದೆ, ಜೀವನವನ್ನು ಜಿಗುಪ್ಸೆಯ ಮಟ್ಟಕ್ಕೆ ತಂದು ನಿಲ್ಲಿಸುತ್ತದೆ ಎಂದು, ಬೇಸರದ ಕುರಿತಾದ ವಿವೇಚನೆ ವ್ಯಕ್ತವಾಗಿದೆ. ಈ ಬೇಸರದಿಂದ ಪಾರಾಗಲು ಸಿನಿಮಾಕ್ಕೆ ಹೋದರೆ ಅಲ್ಲಿನ ಅಶ್ಲೀಲ, ವಿಕೃತ ಪರಿಸರದಿಂದ ಇನ್ನಷ್ಟು ಬೇಸರಿಸಿ ಮರಳುವಾಗ ಅನಾಸಿನ್ ತೆಗೆದುಕೊಂಡಿದ್ದು, ಇನ್ನೊಮ್ಮೆ ಸಿನಿಮಾ ನೋಡಬಾರದೆಂದು ನೂರು

ಸಾರಿ ನಿರ್ಧರಿಸಿ ಮಲಗಿದರೂ, ನಿದ್ರೆಯಲ್ಲಿ ಹೀರೋಯಿನ್ ಬಂದು ಬೇಸರಿಸುತ್ತಾಳೆ ಎಂಬಲ್ಲಿ, ಇಂದಿನ ಸಿನಿಮಾ ಪರಿಸರದ ಕುರಿತಾದ ವಿಡಂಬನೆ ವ್ಯಕ್ತವಾಗಿದೆ.

ಇಂದಿನ ಯುಗದಲ್ಲಿ ಕೆಲವರು ಹೊತ್ತೇ ಹೋಗುವುದಿಲ್ಲ. ಜೀವನ ಬೇಜಾರು ಆಗಿದೆ ಎನ್ನುವವರಿಗೆ 'ಯಾಕೆ ಜೀವಿಸಬೇಕು' ಎಂದು ಹೇಳುವ ನೇರ ಚುಚ್ಚು ನುಡಿಗಳಿವೆ. ಯಾರನ್ನು ಬಿಡದ ಈ 'ಬೇಸರರಾಯ'ನನ್ನು ಅದರ ಇರುವಿಕೆಯನ್ನು ಗುರುತಿಸುತ್ತಾ, "ಕಲ್ಲಿನಂತೆ ಗಟ್ಟಿಯಾಗಿ ಒಂದೇ ಸ್ಥಾನದಲ್ಲಿ ಕುಳಿತೋ, ನಿಂತೋ ಇರುವುದು. ಅನಿಮಿಷ ನೇತ್ರನಾಗಿ ಗಳಿಗೆಗೊಮ್ಮೆ ಆಕಳಿಸುತ್ತಲೋ, ತೂಕಡಿಸುತ್ತಲೋ, ಜಂತಿಯನ್ನು ನೋಡುವುದು, ಇನ್ನೊಮ್ಮೆ ಟೇಬಲ್‌ನ್ನು ತಬಲ ಮಾಡಿ ಬಾರಿಸುವುದು, ನೆಲವನ್ನು ಹೆಬ್ಬೆರಳಿನಿಂದ ಕೆದಕುವುದು, ಕಾಗದದ ಮೇಲೆ ಏನನ್ನೋ ಗೀಚುವುದು, ಇದೇ ಬೇಸರದ ಸ್ಥಿತಿಯೆಂದು ಗುರುತಿಸುತ್ತಾರೆ. ಇಲ್ಲಿ ಲೇಖಕರು ಜೀವನದ ಬಗೆಗಿನ ಅನನ್ಯತೆಯನ್ನು ವಿಡಂಬನಾತ್ಮಕವಾಗಿ ಗುರುತಿಸಿದ್ದನ್ನು ನೋಡಬಹುದು.

ಬೇಸರವೆಂದು ಸುಮ್ಮನೆ ಕುಳಿತರೆ ಪ್ರಯೋಜನವಿಲ್ಲ ಅದಕ್ಕೆ ಬದಲಾಗಿ "ಕಟ್ಟುವುದು ಆಗದಿದ್ದರೆ ಕೆಡಿಸುವುದಾದರೂ ನನ್ನ ಕಡೆಯಿಂದ ಆಗಬಹುದಲ್ಲಾ"[೨೭] ಎಂದು ಕೆಲಸವಿಲ್ಲದೆ ನಿರ್ಜೀವದಂತೆ ಕೂಡ ಬೇಡ ಇದೇ ಬೇಸರಕ್ಕೆ ಕಾರಣ ಎಂಬ ಅವರ ಆತ್ಮ ವಿವೇಚನೆಯ ಚಿಂತನೆಗಳು ವಿಶೇಷವೆನಿಸಿವೆ. ಕೊನೆಗೆ "ಜೀವನದಲ್ಲಿ ಒಂದು ಆದರ್ಶವಿರದಿದ್ದರೆ ಬಾಳು ಬಾಳಾಗಿ ಉಳಿಯುವುದಿಲ್ಲ ಅದೊಂದು ಗೋಳಾಗಿ ಪರಿಣಮಿಸುವುದು" ಎಂದು ಜೀವನದಲ್ಲಿ ಏನನ್ನಾದರೂ ಸಾಧಿಸದಿದ್ದರೂ ನಡೆದಿತು ಆದರೆ ಒಂದು ಅಭಿರುಚಿ, ಹವ್ಯಾಸವನ್ನು ಇರಿಸಿಕೊಂಡು ಉತ್ಸಾಹಿಯಾಗಿ ಬದುಕಬೇಕೆಂಬ ಚಿಂತನೆ ಈ ಪ್ರಬಂಧದಲ್ಲಿ ಲಘು ವಿಡಂಬನೆಯೊಂದಿಗೆ ವ್ಯಕ್ತವಾಗಿರುವುದನ್ನು ಗುರುತಿಸಬಹುದು.

**ಶ್ಯಾಣಪ್ಪನ ಶ್ಯಾಣ್ಯಾತನ**



ಈ ಪ್ರಬಂಧ ಸಂಪೂರ್ಣ ಹಾಸ್ಯವನ್ನೊಳಗೊಂಡಿದ್ದು ನಮ್ಮ ಸುತ್ತ-ಮುತ್ತಲಿನ ಸಮಾಜದಲ್ಲಿ ಶ್ಯಾಣಪ್ಪನಂತಹ ವ್ಯಕ್ತಿಗಳ ಬುದ್ಧಿವಂತಿಕೆ ಎಂತಹದು ಹಾಗೂ ಅವರಲ್ಲಿನ ಹುಚ್ಚುತನ, ಬೆಳೆದುಬಂದ ಬಗೆಯನ್ನು ವೀರೇಂದ್ರ ಸಿಂಪಿಯವರು ಹಾಸ್ಯದ ಮೂಲಕ ಈ ಪ್ರಬಂಧದಲ್ಲಿ ವಿವರಿಸಿದ್ದಾರೆ. ಶ್ಯಾಣಪ್ಪನ ಬುದ್ಧಿವಂತಿಕೆಯನ್ನು ಲೇಖಕರು "ಶ್ಯಾಣಪ್ಪನಂತಹ ಶ್ಯಾಣ್ಯಾನನ್ನು ನಾನು ಇಲ್ಲಿಯವರೆಗೆ ಕಂಡಿಲ್ಲ"[೨೮] ಎಂದು ಅವನ ಬುದ್ಧಿವಂತಿಕೆ ಎಂತಹದು ಎಂದು ವ್ಯಂಗ್ಯವಾಗಿ ಹೇಳಿದಂತಿದೆ. ಇವನು ಅವರ ತಂದೆ-ತಾಯಿಗಳಿಗೆ ಏಕಮೇವ ಪುತ್ರನಾಗಿ ಮುದ್ದಿನಿಂದ ಮೊದ್ದಾಗಿ ಬೆಳೆದಿದ್ದಾನೆ. ಒಮ್ಮೆ ಅವನ ತಾಯಿಯ ಮೊಲೆ ಹಾಲು ಕುಡಿಯುತ್ತಿರುವಾಗಲೇ "ಶ್ಯಾಣಾ ನಿಮ್ಮ ತಾಯಿ ನಿನ್ನನ್ನು ಬಿಟ್ಟು ಊರಿಗೆ ಹೋದಳಲ್ಲೊ" ಎಂದಾಗ ಅವನು ಮೊಲೆ ಕುಡಿಯುವುದನ್ನು ಬಿಟ್ಟು ಹೊಯ್ ಎಂದು ಅಳುತ್ತಾ ಬೊಬ್ಬೆಯಿಡುತ್ತಿದ್ದುದ್ದನ್ನು ಹೇಳುವಲ್ಲಿ ಹಾಸ್ಯ ವ್ಯಕ್ತವಾಗಿದೆ.

ಅಜ್ಞಾನ, ಮೌಢ್ಯ, ಪೆದ್ದುತನಕ್ಕೆ ಹೆಸರಾದ ಶ್ಯಾಣಪ್ಪನಂತವರು ನಮ್ಮ ಸಮಾಜದಲ್ಲೇ ಇದ್ದಾರೆ. ಅಂತವರ ಪ್ರತಿನಿಧಿಯಾಗಿ ಈ ಪ್ರಬಂಧದಲ್ಲಿ ಶ್ಯಾಣಪ್ಪ ಬಂದಿದ್ದಾನೆ. ಒಮ್ಮೆ ಶಾಣಪ್ಪನಿಗೆ ಅವನ ತಾಯಿ ಹಾಲು ಕುಡಿ ಎಂದರೆ ಅದನ್ನು ನೆಲಕ್ಕೆ ಚೆಲ್ಲುವ, ಊಟ ಮಾಡು ಅಂತ ಅನ್ನ ಕೊಟ್ಟರೆ ಅದನ್ನು ಅರ್ಧ ನೆಲ ಪಾಲು ಮಾಡುವ ಸಮಾತಾವಾದಿ ಎಂಬ ಹೇಳಿಕೆಯಲ್ಲಿ ವ್ಯಂಗ್ಯ ವ್ಯಕ್ತವಾಗುತ್ತದೆ. ಒಂದು ವೇಳೆ ಅವನೇನಾದರೂ ಕೋಪಿಸಿಕೊಂಡರೆ ಮುಖವನ್ನು ಮಕ್ಕಿ ಕಾಯಿಯಂತೆ ತಾಸುಗಟ್ಲೆ ಹಿಂಡುತ್ತಾ ಕೂಡುತ್ತಿದ್ದನು. ಇಂತಹ ಶ್ಯಾಣಪ್ಪನನ್ನು ಶಾಲೆಗೆ ಕಳುಹಿಸಿದರೆ ಮನೆಗೆ ಪಾಟಿಯನ್ನು ವಾಪಸ್ಸು ತಂದರೆ ಅವತ್ತು ದೇವರು ಗುಡಿಯಲ್ಲಿರುತ್ತಿರಲಿಲ್ಲ ಎಂಬ ಹಾಸ್ಯವನ್ನು ಹರಿಸಿದ್ದಾರೆ. ಇವನು ಶಾಲೆಯಲ್ಲಿ ಏನೂ ಬರೆಯದೇ ಹೋದರೂ ಊಟದ ತಟ್ಟೆಯಲ್ಲಿ ಮಾತ್ರ ಚಿತ್ರ ಬರೆಯುತ್ತಿದ್ದ. ಶಾಲೆಗೆ ಹೋದ ಶ್ಯಾಣೂ ನಿದ್ದೆ ಹೊಡೆದು, ಮಾಸ್ತರರಿಂದ 'ಎಲೋ ದರಿದ್ರ ಏಳೋ' ಎಂದು ಬೈಯಿಸಿಕೊಂಡು ಮಾಸ್ತರರು "ಎಲೋ ಶ್ಯಾಣೂ ಮಾವಿನ ಗಿಡಗಳಲ್ಲಿ ಯಾವ ಹಣ್ಣುಗಳಾಗುತ್ತವೆ ಎಂದು ಕೇಳಿದರೆ, ಬೇಶನ್ ಉಂಡಿಗಳಾಗುತ್ತವೆಂದು"[೨೯] ಹೇಳುತ್ತಿದ್ದ ಎಂದು ಹೇಳುವಲ್ಲಿ ಇವನ ಅಜ್ಞಾನ ಮೌಢ್ಯತೆಯಿಂದ ಹಾಸ್ಯ ಮೂಡಿಬರುತ್ತದೆ.

ಶ್ಯಾಣಪ್ಪನಂತವರಿಗೆ ಶಿಕ್ಷಣ ಕಲಿಸಲು ಎಷ್ಟು ಕಷ್ಟ ಎಂಬುದನ್ನು ಲೇಖಕರು ಶ್ಯಾಣಪ್ಪನಿಗೆ ಇಂಗ್ಲೀಷ್ ಕಲಿಸಲು ಪ್ರಯತ್ನಿಸಿ ವಿಫಲರಾಗಿ, ಒಮ್ಮೆಯಾದರೂ ಅವನ ಬಾಯಿಂದ 'ಇಂಗ್ಲೀಷ್ ' ಎಂಬ ಪದ ಸರಿಯಾಗಿ ಉಚ್ಛಾರ ಮಾಡಿಸಬೇಕೆಂದು ಶತಪ್ರಯತ್ನ ಪಟ್ಟರೂ ಆತ 'ಇಂಗ್ಲಿಶ್' ಎಂದೇ ಪೋತ್ಕರಿಸುತ್ತಿದ್ದನ್ನು ಕಂಡ ಹೆಡ್ ಮಾಸ್ತರರು ಕೊನೆಗೆ ಅವನಿಗೆ ಕ್ಲಾಸ್ ರೂಂನಲ್ಲೇ ಸಾಷ್ಟಾಂಗ ನಮಸ್ಕಾರ ಮಾಡಿದ್ದು "ನನ್ನ ವಿದ್ಯೆಯೆಲ್ಲಾ ನಿನ್ನ ಮುಂದೆ ವ್ಯರ್ಥವಾಯಿತಲ್ಲ ಶ್ಯಾಣಪ್ಪ"[೩೦] ಎಂದು ಅವನ ಅಜ್ಞಾನಕ್ಕೆ ಸೋಲುವ ಮಾಸ್ತರರ ಸ್ಥಿತಿ ಹಾಸ್ಯವನ್ನುಂಟು ಮಾಡುತ್ತದೆ.

ಶ್ಯಾಣಪ್ಪನಿಗೆ ಕನ್ಯೆ ನೋಡುವ ಪ್ರಸಂಗದಲ್ಲಿ ಇವನ ತಂದೆ ಕನ್ನೆಯನ್ನು ದಿಟ್ಟಿಸಿ ನೋಡಬೇಡ ಎಂದಿದ್ದಕ್ಕೆ ಕನ್ಯೆಯನ್ನು ಬಿಟ್ಟು ಅವಳ ತಾಯಿಯ ಎದುರಿಗೆ ಗೋರಿಲ್ಲನಂತೆ ಕುಳಿತು ಅನಿಮಿಷ ನೇತ್ರನಾಗಿ ದಿಟ್ಟಿಸಿ ನೋಡಿದ್ದು, ಕಾಯಿಪಲ್ಲೆ ಮಾರ್ಕೆಟ್ ನಲ್ಲಿ ತನ್ನ ಅಜ್ಞಾನ ಪ್ರದರ್ಶಿಸಿದ್ದು, ಊರಲ್ಲಿ ಗ್ರಾಜುಯೆಟ್‌ನೆಂದು ಹೇಳಿಕೊಂಡು ಓದು ಎಂದರೆ ಒಂದಕ್ಷರ ತಿಳಿಯದೆ ಬೇವರುವುದು. ಇವನ ಪೆದ್ದುತನಕ್ಕೆ ಸಾಕ್ಷಿಯಾಗಿ ಹಾಸ್ಯ ಮೂಡಿಬಂದಿದೆ. ಶ್ಯಾಣಪ್ಪನಂತಹ ಕೊಡಂಗಿಗಳು ಇಂದು ಸಮಾಜದಲ್ಲಿ ತಮಗೆ ಏನೂ ಗೊತ್ತಿಲ್ಲದಿದ್ದರೂ ಎಲ್ಲಾ ಗೊತ್ತಿದೆ ಎಂಬ ಅವರ ಆಡಂಬರ ಜೀವನಕ್ಕೆ ಲಕ್ಷ್ಮಿ ಪುತ್ರರಾಗಿರುವುದು ಒಂದು ಕಾರಣವೆಂದು ಹೇಳಿ, ಇಂದು ಶ್ರೀಮಂತಿಕೆಯ ಮದದಲ್ಲಿರುವ ಕೆಲವು ಅಜ್ಞಾನಿಗಳನ್ನು ಹಾಗೂ ಅವರ ವ್ಯಕ್ತಿತ್ವವನ್ನು ವಿಡಂಬಿಸುವ ರೀತಿ ಈ ಪ್ರಬಂಧದಲ್ಲಿ ವ್ಯಕ್ತವಾಗಿದೆ.

## ಭಾಷಣಕಾರನ ಬವಣೆ

ಈ ಪ್ರಬಂಧದಲ್ಲಿ ಲೇಖಕರು ಇಂದಿನ ಭಾಷಣಕಾರರು ತಮ್ಮ ನಿಸತ್ವ ಭಾಷಣವನ್ನೇ ಮಹಾಕಲೆಯಾಗಿ ಸ್ವೀಕರಿಸಿದ್ದಾರೆ. ಇದರಿಂದ ಸಮಾಜಕ್ಕೆ ಅವರ ಕೊಡುಗೆಗಳೇನು ಇಲ್ಲ ಎಂದು, ಇಂತಹ ಭಾಷಣಕಾರರ ಹಾವಳಿಯನ್ನು "ಮಂತ್ರಕ್ಕಿಂತ ಉಗುಳೇ ಜಾಸ್ತಿ ಇರುವಂತೆ ವಿಧಾಯಕ ಕಾರ್ಯಗಳಿಗಿಂತ ಭಾಷಣಗಳ ಹಾವಳಿಯೇ ಹೆಚ್ಚಾಗಿದೆ"[೧೧] ಎಂದು ಟೀಕಿಸಿ, ಇನ್ನೊಮ್ಮೆ ಹುಟ್ಟಿಸಿದರೆ ಭಾಷಣಗಳು ನಡೆಯದ ನಾಡಿನಲ್ಲಿ ಹುಟ್ಟಿಸು ಎಂದು ಹೇಳುವ ತಿರಸ್ಕಾರ ನುಡಿಯಲ್ಲೇ ವಿಡಂಬನೆ ವ್ಯಕ್ತವಾಗಿದೆ.

ಭಾಷಣವನ್ನೇ ಹಲವು ಮಗ್ಗಲುಗಳಿಂದ ಹರಡಿ ಅದನ್ನು ಕುಚೇಷ್ಟೆ ಮಾತುಗಳಿಂದ ವ್ಯಾಖ್ಯಾನಿಸುವುದು ವೀರೇಂದ್ರ ಸಿಂಪಿಯವರಿಗೆ ಸಿದ್ಧಿಸಿದಂತೆ ಕಾಣುತ್ತದೆ. ಅವರು ಇಂದಿನ ಯುಗದಲ್ಲಿ ಭಾಷಣಕಾರರೇನೋ ಸುಲಭವಾಗಿ ಸಿಗುತ್ತಾರೆ. ಆದರೆ ಅದನ್ನು ಕೇಳುವ ಸಭಿಕರೆಲ್ಲಿಂದ ತರಬೇಕು? ಎಂಬ ಪ್ರಶ್ನೆ ಹಾಕಿ, ವರ್ಷವಿಡಿ ನಡೆಯುವ ಮಹಾಪುರುಷರ ಜನ್ಮದಿನ, ಪುಣ್ಯತಿಥಿಗಳು, ಮಂತ್ರಿಮಾನ್ಯರ ಗುಡುಗು-ಸಿಡಿಲಿನ ಭಾಷಣಗಳು ನಡೆದೇ ಇರುತ್ತವೆ. ಇಂತಹ ಭಾಷಣಗಳಿಂದ ಯಾವ ಸುಧಾರಣೆಯ ಫಲಗಳನ್ನು ನಿರೀಕ್ಷಿಸಲು ಸಾಧ್ಯವಿಲ್ಲ ಎಂಬ ವಿಡಂಬನೆ ವ್ಯಕ್ತಪಡಿಸಿದ್ದಾರೆ.

ಇಂದಿನ ಯುಗದಲ್ಲಿ ರೆಡಿಮೇಡ್ ಭಾಷಣ ಮಾಡುವ ಭಾಷಣಕಾರರನ್ನು ಮೂರುವರ್ಗಗಳಾಗಿ ವಿಂಗಡಿಸಿದ್ದಾರೆ. ಭಾಷಣದಿಂದ ಪ್ರಸಿದ್ಧಿ, ಪ್ರತಿಷ್ಠೆಯನ್ನು ಜೊತೆಗೆ ಶ್ರೀಮಂತಿಕೆಯನ್ನು ಪಡೆದವರು ಉಚ್ಚವರ್ಗದವರಾದರೆ, ತ್ರಿಶಂಕು ಸ್ವರೂಪರಾಗಿ ಕೊಟ್ಟಷ್ಟು ಹಣದಿಂದ ತೃಪ್ತರಾಗದ ನಿಷ್ಕಾಮಕರ್ಮಿಗಳನ್ನು ಮಧ್ಯಮ ವರ್ಗಕ್ಕೆ ಸೇರಿಸಿದರೆ, ಅತ್ತೂ ಕರೆದು ಔತಣ ಹೇಳಿಸಿಕೊಂಡು, ತಮ್ಮ ಹೆಸರು ರೂಪ ಜನರೆದುರು ನಿಲ್ಲಬೇಕೆಂದು, ತಮ್ಮ ದುಡ್ಡನ್ನೆ ಖರ್ಚು ಮಾಡಿ, ಭಾಷಣವನ್ನೇ Full time job ಮಾಡಿಕೊಂಡವರನ್ನು ಅಧಮವರ್ಗದ ಭಾಷಣಕಾರರೆಂದು ವಿಂಗಡಿಸುವಲ್ಲಿ ವಿಡಂಬನೆ ವ್ಯಕ್ತವಾಗಿದೆ. ಹಳ್ಳಿಯ ಭಾಷಣಕಾರರಾದರೂ ಅತಿಥಿಗಳು ಬರದೇ ಇದ್ದರೆ ತಾವೇ ಭಾಷಣ ಮಾಡುವ ಇವರು, ಇಸ್ಪಿಟ್ ಆಟದ ರಮ್ಮಿಯ ಜೋಕರ್‌ನಂತೆ ಶೋಭಿತರಾಗುತ್ತಾರೆ ಎಂದು, ಅನಾಗರಿಕ ಜನರ ಭಾಷಣವನ್ನು ವ್ಯಂಗ್ಯದ ಮೂಲಕ ವ್ಯಕ್ತಪಡಿಸಿದ್ದಾರೆ. ಈ ಪ್ರಬಂಧದಲ್ಲಿ ಒಂದು ವಿಷಯವನ್ನು ವಿವಿಧ ಸನ್ನಿವೇಶಗಳಲ್ಲಿ ವಿಂಗಡಿಸಿ ಅದರ ಅರೆ-ಕೊರೆಗಳನ್ನು ಚಿತ್ರಿಸುವಲ್ಲಿ ವಿಡಂಬನೆ-ವ್ಯಂಗ್ಯವನ್ನು ಬಳಸಿದ್ದನ್ನು ಕಾಣಬಹುದು.

## ಓವರ್ ಎ ಕಪ್ ಆಫ್ ಟೀ

ಈ ಪ್ರಬಂಧದಲ್ಲಿ ಒಂದು ಸಾಧಾರಣ ವಸ್ತುವಿನ ಮೇಲೂ ಪ್ರಬಂಧವನ್ನು ರಚಿಸಬಹುದೆಂಬುದನ್ನು ವೀರೇಂದ್ರ ಸಿಂಪಿಯವರು ಈ ಪ್ರಬಂಧದ ಮೂಲಕ ಸಾಬೀತುಪಡಿಸಿದ್ದಾರೆ. ಇಂದಿನ ಆಧುನಿಕ ಯಾಂತ್ರಿಕ ಬದುಕಿನಲ್ಲಿ ಮಾನವ ಒಂದಿಲ್ಲೊಂದು ಚಟಗಳ ದಾಸನಾಗಿದ್ದಾನೆ. ಅಂತಹದರಲ್ಲಿ ಚಹಾ ಸೇವನೆಯೂ

ಸಹ ಒಂದು. ಈ ಚಹಾ ಕುಡಿಯಲು ಬಳಸುವ 'ಕಫ್'ನ(ಲೋಟ) ಬಗ್ಗೆ ಮಾಡುವ ಚಿಂತನೆ ಮೂಲಕ ಈ ಪ್ರಬಂಧದಲ್ಲಿ ಸಾರ್ವತ್ರಿಕ ಮೋಸಗಾರಿಕೆಯನ್ನು ಬಯಲಿಗೆಳೆಯುವ ಕಾರ್ಯ ಮಾಡಿದ್ದಾರೆ. ಅಂತಹ ಕಾರ್ಯಕ್ಕೆ ವಿಡಂಬನೆಯನ್ನು ಅಸ್ತ್ರವಾಗಿ ಬಳಸಿಕೊಂಡಿದ್ದು ವಿಶೇಷವೆನಿಸಿದೆ.

ಚಹಾ ಕಲಿಯುಗದ ಅಮೃತವೆನ್ನುವ ಲೇಖಕರು ಅದೇ ಚಹಾ ಪಿತ್ತವನ್ನು ಕೆರಳಿಸುತ್ತದೆ. ನಿದ್ರೆಯನ್ನು ಅಪಹರಿಸುತ್ತದೆ. ಊಟದ ಮೊದಲೇ ತೇಗನ್ನು ತರುತ್ತದೆ ಎಂದು, ಅದರ ಅನಾರೋಗ್ಯದ ಸೂಚನೆಯನ್ನು ನೀಡುತ್ತಾರೆ. ಚಹದ ಚಟವಿದ್ದವನಿಗೆ ಊಟದ ಪರಿವೇ ಇರುವುದಿಲ್ಲ. ಲೇಖಕರು ತಾವು ಚಹಾದ ಚಟಕ್ಕೆ ಬಲಿಯಾಗಿರುವುದನ್ನು ತಮ್ಮ ಬಾಲ್ಯದ ಘಟನೆ ಹೇಳುತ್ತಾ, ಸಣ್ಣ ಕಪ್ಪಿನಲ್ಲಿ ಚಹಾ ಕೊಟ್ಟರೆ ಸೆಡವಿನಿಂದ ಮೂಲೆ ಸೇರುತ್ತಿದ್ದ ಇವರು ತಮ್ಮನಿಗೇಕೆ ದೊಡ್ಡಕಪ್ಪು? ಎಂಬ ಅಪೇಕ್ಷೆ ಎತ್ತುವಂತಹ ಪ್ರಸಂಗಗಳು ಹಾಸ್ಯವನ್ನುಂಟು ಮಾಡುತ್ತವೆ.

ಆಧುನಿಕ ಯಾಂತ್ರಿಕ ಬದುಕಿನಲ್ಲಿನ ಕಪಟತನವನ್ನು ಬಯಲಿಗೆಳೆಯುವ ಲೇಖಕರು "ಚಹಾ ಕುಡಿಯಲು ಬಳಸುವ ಬೆಳ್ಳಿಯಂತಹ ಸ್ಟೆನ್ ಲೆಸ್ ಸ್ಟಿಲ್ ನ ಉದ್ದನೆಯ ಆಕಾರದ ಕಪ್ಪುಗಳು ಇಂದು ನನ್ನ ಗಂಟಲುಗಳಾಗಿದ್ದದು ದುರ್ದೈವ"[೨] ಎಂದು. ಅ ಕಪ್ಪು ನೋಡಲು ದೊಡ್ಡದಿದ್ದರೂ ಅದರ ಒಳಗೆ ಚಹಾ ಮಾತ್ರ ನಾಲ್ಕೇ ಗುಟುಕು ಇರುತ್ತದೆ. ಇಂತಹ ಮೋಸಗಾರಿಕೆಯನ್ನು ಬಯಲಿಗೆಳೆಯುವ ಲೇಖಕರು. ಇಂತಹ ಕಪ್ಪುಗಳನ್ನು ಶೋಧಿಸಿದವನು ಮಹಾಠಕ್ಕನಿರಬೇಕೆಂದು ಟೀಕಿಸುತ್ತಾರೆ. "ಹೊರಗೆ ಮಹಾತ್ಮನ ವೇಷ ಹಾಕಿ ಒಳಗೆ ದುರಾತ್ಮನ ಯೋಚನೆ ಮಾಡುವ ಇಂದಿನ ಸಮಾಜದಲ್ಲಿನ ಮನೋಭಾವದಂತೆ ಈ ಸ್ಟೆನ್ ಲೆಸ್ ಸ್ಟಿಲ್ ಎಂದು ಈ ಕಪ್ಪಿನಲ್ಲಿ ವಿದೇಶ ಸಂಸ್ಕೃತಿಯಲ್ಲಿನ ಮೋಸಗಾರಿಕೆಯನ್ನು ನಮ್ಮ ಜನ ಒಪ್ಪಿಕೊಂಡು ಸಾಗುತ್ತಿರುವುದನ್ನು ವಿಡಂಬನಾತ್ಮಕವಾಗಿ ವ್ಯಕ್ತಪಡಿಸಿದ್ದಾರೆ. ಹೊರಗಡೆ ಈ ಗ್ಲಾಸನ್ನು ಮುಟ್ಟಿದರೆ ಆರಿದ ಚಹಾವೆಂದು ತಿಳಿದು ಬಾಯಿಗಿಟ್ಟಾಗ ನಾಲಿಗೆ ಸುಟ್ಟು ತೆನಾಲಿರಾಮಕೃಷ್ಣನ ಬೆಕ್ಕಿನ ನಾಲಿಗೆಯಂತಾಯಿತು ಎನ್ನುವಲ್ಲಿ ಲಘು ಹಾಸ್ಯ ವ್ಯಕ್ತವಾಗಿದೆ.

### ವಿದ್ಯಾರ್ಥಿಗಳ ಟೊಂಕಪಟ್ಟಿಯಲ್ಲಿ ಒಂದು ರತ್ನ

ಈ ಪ್ರಬಂಧದಲ್ಲಿ ಆಧುನಿಕ ಯುಗದ ಶಿಕ್ಷಣ ಪದ್ಧತಿಯಲ್ಲಿನ ಅಕ್ರಮ, ಅನಾಚಾರಗಳನ್ನು ಬಯಲಿಗೆಳೆಯುವುದರ ಜೊತೆಗೆ ವಿದ್ಯಾರ್ಥಿಗಳು ಓದದೇ ಪರೀಕ್ಷೆಯಲ್ಲಿ ಕಾಪಿ ಹೊಡೆಯಲು ಯಾವ ಯಾವ ಮಾರ್ಗ ಬಳಸಿಕೊಳ್ಳುತ್ತಾರೆ. ಹಾಗೂ ಅದಕ್ಕೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯಕರಾಗುವ ಪರೀಕ್ಷಾ ಮೇಲ್ವಿಚಾರಕರ ಬಣ್ಣವನ್ನು ಬಯಲು ಮಾಡುವ ಅಂಶವನ್ನು ಈ ಪ್ರಬಂಧ ಒಳಗೊಂಡಿದೆ. ಇಲ್ಲಿ ಕಾಫಿ ಹೊಡೆಯುವ ವಿದ್ಯಾರ್ಥಿಗಳನ್ನು ಹಾಗೂ ಅದಕ್ಕೆ ಸಹಾಯಕರಾಗುವ ಪಾಲಕರು, ಪರೀಕ್ಷಾ ಮೇಲ್ವಿಚಾರಕರನ್ನು ತರಾಟೆಗೆ ತೆಗೆದುಕೊಳ್ಳುವಲ್ಲಿ ವಿಡಂಬನೆ ವ್ಯಕ್ತವಾಗಿದೆ.

ಇಂದಿನ ಶಿಕ್ಷಣ ವ್ಯವಸ್ಥೆಯ ಅಯೋಮಯತೆಯಿಂದ ನಮ್ಮ ವಿದ್ಯಾರ್ಥಿಗಳ ಭವಿಷ್ಯ ಕಾಪಿಯ ಮೇಲೆ ನಿಂತತ್ತಿದೆ ಎಂಬ ಧೋರಣೆಯನ್ನು ಪ್ರಬಂಧ ಸಾರುತ್ತದೆ. ಲೇಖಕರು ಕಾಪಿ ಮಾಡದ ಹುಡುಗನನ್ನು ತೋರಿಸಿರಿ ಎಂದು ಹೇಳುತ್ತಾ "ಅವನನ್ನು ನೋಡುವುದರಿಂದ ನನಗೆ ತೀರ್ಥಯಾತ್ರೆಯ ಪುಣ್ಯ ಸಿಕ್ಕಿತು"[೩೩] ಎನ್ನುವಲ್ಲಿ ಕಾಪಿ ಎಂಬ ಪರೀಕ್ಷಾರಾಕ್ಷಸ ತನ್ನ ಸಾರ್ವತ್ರಿಕ ಕಬಂದ ಬಾಹುವನ್ನು ಎಷ್ಟರ ಮಟ್ಟಿಗೆ ಚಾಚಿದೆ ಎಂಬುದು ತಿಳಿಯುತ್ತದೆ.

ಪರೀಕ್ಷೆಗಳನ್ನು ನಾಟಕಗಳೆಂದು ಕರೆದು ಮೇಲ್ವಿಚಾರಕರು, ವಿದ್ಯಾರ್ಥಿಗಳು ಆ ನಾಟಕದ ಪಾತ್ರಧಾರಿಗಳು ಎಂದಿದ್ದಾರೆ. ಮೇಲ್ವಿಚಾರಕರು ನಿಮ್ಮ ನಿಮ್ಮ ಚೀಟಿಗಳನ್ನು ನನಗೆ ಕೊಡಿರಿ" ಎಂದು ವಿದ್ಯಾರ್ಥಿಗಳನ್ನು ಕೇಳಿದರೆ "ಎಲಾ ಬಕರಾ ಮೇಲ್ವಿಚಾರಕನೇ ಏಕೆ ಬಡಬಡಿಸುತ್ತಿ ನಿನ್ನ ನೀರು ನನಗೆ ಗೊತ್ತು"[೩೪] ಎನ್ನುವ ವಿದ್ಯಾರ್ಥಿಗಳ ಈ ಸಂಭಾಷಣೆ ನಾಟಕೀಯವಾಗಿ ಗೋಚರಿಸುತ್ತದೆ. ಕಾಪಿ ಹೊಡೆಯಲು ನೆರವಾಗುವ ಮೇಲ್ವಿಚಾರಕರನ್ನು ಮೂರು ವರ್ಗಗಳಾಗಿ ವಿಂಗಡಿಸುತ್ತಾರೆ. ಹಿರಿಯ ಮೇಲ್ವಿಚಾರಕರಿಂದ ಸಂರಕ್ಷಿಸುವ ದ್ವಾರಪಾಲಕರ ಒಂದು ವರ್ಗ, ನಿಮ್ಮ ವ್ಯವಹಾರಗಳಿಗೆ ನಾನು ಜವಾಬ್ದಾರನಲ್ಲ ಎನ್ನುವ ಧೃತರಾಷ್ಟ್ರರೂ ಎರಡನೇ ವರ್ಗ, ಚೀಟಿ ಕಾಗದ ಸಿಕ್ಕರೆ ಹೊರಗೆ ಹಾಕುತ್ತೇನೆ ಎಂದು ಬುಸುಗುಡುವ ನಾಗೇಂದ್ರರದು ಮೂರನೇ ವರ್ಗ ಎಂದು ವಿಂಗಡಿಸಿ, ಅದರಲ್ಲೆ ಅವರ ಅನಾಚಾರಗಳನ್ನು ಹೇಳುವಲ್ಲಿ ವಿಡಂಬನೆ ವ್ಯಕ್ತವಾಗಿದೆ.

ಪರೀಕ್ಷೆಗಳ ಇಂದಿನ ಈ ವ್ಯವಸ್ಥೆಗೆ ನಮ್ಮ ಮೌಲ್ಯರಹಿತ ಸಮಾಜವೇ ಕಾರಣವೆಂದು, ಅದಕ್ಕೆ ಆಯೋಗ್ಯ, ಅದಕ್ಷ ಶಿಕ್ಷಕರೂ ಮೂಲ ಪ್ರೇರಕರಾಗಿದ್ದಾರೆ. ಇದಕ್ಕೆ ಅವರ ನಿಸತ್ವ-ನೀರಸ ಪಾಠ ಪ್ರವಚನಗಳೇ ಇಂತಹ ಹೇಸಿ ಕೃತ್ಯಕ್ಕೆ ಕಾರಣವೆಂದು, ಇದೊಂದು ಬಿಡಿಸಲಾರದ ಜಡ್ಡಿನಂತೆ ಸಮಾಜಕ್ಕೆ ಅಂಟಿಕೊಂಡಿದೆ ಎಂದು ಹೇಳುವ ಈ ಪ್ರಬಂಧದಲ್ಲಿ ವಿಡಂಬನೆ ವ್ಯಕ್ತವಾಗಿದೆ.

**ತಂಗಳೂರಿನ ನಿಧಾನ ಸೌಧದಿಂದ ಒಂದು ಪತ್ರ**

ಈ ಪ್ರಬಂಧದಲ್ಲಿ ರಾಜಕಾರಣಿಗಳು ಮಾಡುವ ಭ್ರಷ್ಟಚಾರ, ಅನಾಚಾರ ಹಾಗೂ ಅವರ ಅಶ್ವಾಸನೆಗಳೆಂತಹವು? ಎಂಬುದನ್ನು ಅಣಕ ಮಾಡುವ ಶೈಲಿಯಲ್ಲಿ ವ್ಯಂಗ್ಯದ ಮೂಲಕ ಪ್ರಕಟಪಡಿಸಿದ್ದಾರೆ. ರಾಜಕಾರಣಿಯೊಬ್ಬರು ತಾವು ಆರಿಸಿ ಹೋದ ಮೇಲೆ ಪ್ರಜೆಗಳ ಕಡೆ ತಿರುಗಿ ನೋಡದೆ, ಬೆಂಗಳೂರೆಂಬ ತಂಗಳೂರಿನಲ್ಲಿ ಕುಳಿತು ಪ್ರಜೆಗಳಿಗೆ ಪತ್ರವೊಂದನ್ನು ಬರೆಯುವುದು ಈ ಪ್ರಬಂಧದ ವಸ್ತು. ನಮ್ಮ ಇಂದಿನ ರಾಜಕೀಯ ರಾಜಕಾರಣಿಗಳ ಚಟುವಟಿಕೆಗಳಿಂದಾಗಿ 'ವಿಧಾನಸೌದ' 'ನಿಧಾನಸೌಧ'ವಾಗಿದೆ 'ಬೆಂಗಳೂರು' 'ತಂಗಳೂರು' ಆಗಿದೆ. ಇಂತಹ ಒಂದು ವ್ಯವಸ್ಥೆಗೆ ಮೂರ್ಖ ಮತದಾರರೇ ಕಾರಣವೆಂದು ಕಪಟ ರಾಜಕಾರಣಿಗಳ ವ್ಯಕ್ತಿತ್ವವನ್ನು ವ್ಯಂಗ್ಯ ಕಟೋಕ್ತಿಗಳ ಮೂಲಕ ಬಿಂಬಿಸಿದ್ದಾರೆ.

ಪ್ರಜಾ ಪ್ರತಿನಿಧಿ ಎನಿಸಿಕೊಂಡ ಇಂದಿನ ರಾಜಕಾರಣಿಗಳು ಬೆಂಗಳೂರಿನ ಶಾಸಕರ ಭವನದಲ್ಲಿ ಕುಳಿತು ಅವರು ಮಾಡುವ ಸಾಮಾಜಿಕ ಕಾರ್ಯಗಳೇನೆಂದು ಹೇಳುತ್ತಾ ರಾಜಕಾರಣಿಯೊಬ್ಬರು ಪ್ರಜೆಗಳಿಗೆ ಪತ್ರ ಬರೆಯುತ್ತಾರೆ. "ನನಗೆ ಇಲ್ಲಿ ಪುರಸೊತ್ತಿಲ್ಲ. ಪುರಸೊತ್ತು ಇದ್ದರೆ ಹಗಲು ತೂಕಡಿಸುವುದಕ್ಕೆ, ತೂಕಡಿಕೆ ಹೆಚ್ಚಾದಾಗ ಮಗಲಿಕ್ಕೆ, ಮಲಗಿ ಎದ್ದಾಗ ಆಕಳಿಸುವುದಕ್ಕೆ, ದೇವತೆಗಳ ಪಾನದಲ್ಲಿ ಗಂಗಾಸ್ನಾನ ಮಾಡುವುದಕ್ಕೆ ಉಳಿದ ಅವಧಿಯಲ್ಲಿ ಐವತ್ತೆರಡು ಅಧ್ಯಾಯಗಳ ಮಹಾಪುರಾಣ ಓದಲಿಕ್ಕೆ ಅಸೆಂಬ್ಲಿಯಲ್ಲಿ ಕೈ ಎತ್ತಲಿಕ್ಕೆ, ಎತ್ತಿದ ಕೈ ಇಳೀಸಲಿಕ್ಕೆ"[೩೫] ಎನ್ನುವ ಅವರ ತದ್ವಿರುದ್ಧ ಮನೋಭಾವನೆಯನ್ನು ವ್ಯಂಗ್ಯವಾಗಿ ವಿಡಂಬಿಸಿದ್ದಾರೆ.

ಓಟುಕೊಟ್ಟ ಜನರಿಗೆ ಕೈಕೊಟ್ಟ ರಾಜಕಾರಣಿಗಳು ತಾವು ನೀಡಿದ ಆಸ್ವಾನೆಗಳನ್ನು ಗಾಳಿಗೆ ತೂರಿ 'ಗರೀಬಿ ಹಟಾವೂ' ಎಂದಿದ್ದನ್ನು ತನ್ನ 'ಗರಿಬಿಯನ್ನಷ್ಟೇ ನಿವಾರಿಸಿಕೊಂಡು ತನ್ನ ಮೊಮ್ಮಕ್ಕಳಿಗೆ ಸಾಕಾಗುವಷ್ಟು ಗಳಿಸಿಟ್ಟುಕೊಂಡು "ಲಾಭಕ್ಕಾಗಿ ಪಕ್ಷ ಬದಲಾಯಿಸುವುದು ನಮ್ಮ ಜನ್ಮಸಿದ್ಧ ಹಕ್ಕು"[೩೬] ಎನ್ನುವ ರಾಜಕಾರಣಿಗಳು, ಅಚ್ಚಗಿದ್ದಲ್ಲಿ ಮೇದು ಬೆಚ್ಚಗಿದ್ದಲ್ಲಿ ಮಲಗುವ ಅವರ ವ್ಯಕ್ತಿತ್ವ ಎಂತಹದ್ದು ಎಂದು ಹೇಳುತ್ತಾ "ಹೊಳೆದಾಟಿದ ಬಳಿಕ ಅಂಬಿಗನ ಮಿಂಡನಾದಂತೆ, ಆರಾಮವಾದ ಕೂಡಲೇ ರೋಗಿಯೂ ಡಾಕ್ಟರರಿಗೆ ಗುರ್ ಎನ್ನುವ ಗುರುವಾದಂತೆ, ಪಾಸಾದ ಕೂಡಲೇ ವಿದ್ಯಾರ್ಥಿ ಗುರುವಿನ ಪರಮ ಗುರುವಾದಂತೆ, ಎಂ.ಎಲ್.ಎ.ಆದ ಮೇಲೆ ಮತದಾರರ ತಲೆ ಮೇಲೆ ಕುಳಿತುಕೊಳ್ಳುವಲ್ಲಿ ತಪ್ಪೇನಿದೆ"[೩೭] ಎನ್ನುವ ಅವರ ಕಟುವಾದ ಟೀಕೆಯಲ್ಲಿ ಕೊಟ್ಟ ಮಾತಿಗೆ ತಪ್ಪಿನಡೆಯುವ ಇಂದಿನ ಕಪಟರಾಜಕಾರಣಿಗಳನ್ನು ವ್ಯಂಗ್ಯವಾಗಿ ವಿಡಂಬಿಸಿದ್ದಾಗಿದೆ.

**ಕತ್ತೆಯ ಆತ್ಮಕಥೆ**

ಕತ್ತೆ ಒಂದು ಅವಿವೇಕದ ಮೂಢ ಪ್ರಾಣಿ. ಇದು ಅಗಸನ ಬಟ್ಟೆ ಹೊರಲಿಕ್ಕೆ ಮಾತ್ರ ಉಪಯೋಗವಾಗುವುದು. ಇಂತಹ ಪ್ರಾಣಿಯನ್ನು ಮಾನವ ಜನಾಂಗದಲ್ಲಿನ ಕೆಲವರು ಕತ್ತೆಯ ವ್ಯಕ್ತಿತ್ವವನ್ನು ಪ್ರತಿನಿಧಿಸುವವರೆಂದು ಅವರು ಕತ್ತೆಯ ಗುಣಕ್ಕೆ ತಕ್ಕಂತವರೆಂದು, ಕತ್ತೆ ತನನ್ನು ಪ್ರತಿನಿಧಿಸುವ ವ್ಯಕ್ತಿಗಳ ಬಗ್ಗೆ ಹೇಳುವ ಈ ಪ್ರಬಂಧದಲ್ಲಿ ಮನೋಜ್ಞ ವಿಡಂಬನೆ ವ್ಯಕ್ತವಾಗಿದೆ. ಕತ್ತೆ ಅಳುತ್ತಾ "ನನ್ನ ಜಾತಿಯ ಪ್ರಾಣಿಗಳೆಲ್ಲ ಕಡಿಮೆಯಾಗಿ ಎಲ್ಲಾ ನಿನ್ನ ಮಾನವ ವರ್ಗವನ್ನು ಸೇರಿಬಿಟ್ಟಿವೆ."[೩೮] ಎಂದು ಹೇಳುವಲ್ಲಿ ಬುದ್ಧಿವಂತ ಪ್ರಾಣಿ ಎನಿಸಿಕೊಂಡ ಮಾನವನು. ಅವಿವೇಕದಿಂದ ಹೇಗೆ? ಕತ್ತೆಯಂತೆ ಮೂಢನಾಗಿದ್ದಾನೆ ಎಂಬ, ಸೂಚ್ಯ ಅಣಕು ವ್ಯಕ್ತವಾಗಿದೆ. "ನನ್ನ ಪೀಳಿಗೆಯ ಪ್ರಾಣಿಗಳೆಲ್ಲಾ ಈಗ ವಿಧಾನಸೌಧ ಸೇರಿ ಪ್ರಭಾವಿ ಮಂತ್ರಿಗಳಾಗಿದ್ದಾರೆ"[೩೯] ಎಂದು ಹೇಳುವಲ್ಲಿ ಇಂದಿನ ರಾಜಕಾರಣಿಗಳು ದೈತ್ಯ ದೇಹಿಗಳಾಗಿ, ಕತ್ತೆಯಂತೆ ಬಿದ್ದು ಹೊರಳಾಡುತ್ತಿರುವುದನ್ನು ಪ್ರತಿಬಿಂಬಿಸುತ್ತದೆ.

ಮಾನವ ಇಂದು ಹಣ ಮತ್ತು ಅಧಿಕಾರಕ್ಕಾಗಿ ಏನೆಲ್ಲಾ ಮಾಡುತ್ತಾನೆ. ಖಾದಿಧಾರಿಯಾಗುತ್ತಾನೆ. ಖಾವಿಧಾರಿಯೂ ಆಗುತ್ತಾನೆ ಎಂದು ಹೇಳುತ್ತಾ "ಹಣಕ್ಕಾಗಿ ನೀವು ಏನೂ ಮಾಡಲೂ ಹೇಸುವುದಿಲ್ಲ. ನಮ್ಮಂಥವರಿಗೆ (ಕತ್ತೆ)ಹಣಕ್ಕಾಗಿ ಹೆಣ್ಣು ಕೊಡಲು ಸಿದ್ಧರಾಗುವ ಬೇಕೂಫರು"[೬೦] ಎಂದು ಮಾನವರನ್ನು ಕುರಿತ ಟೀಕೆಗಳಿವೆ. 'ನಮ್ಮ ಜಾತಿಗೆ (ಕತ್ತೆ) ಸೇರಿದ ವ್ಯಕ್ತಿಗಳು ಇಂದು ಹಳ್ಳಿಯಿಂದ ದಿಲ್ಲಿಯವರೆಗೂ ಇದ್ದಾರೆ. "ನಾನು ಡಾಕ್ಟರ್, ನಾನು ಇಂಜಿನಿಯರ್, ನಾನು ಪ್ರೊಫೆಸರ್, ನಾನು ತಹಶೀಲ್‌ದಾರ್‌ನೆಂದು ಹೇಳುತ್ತಾ, ಹೆಣ್ಣಿನ ತಂದೆಯಿಂದ ಲಕ್ಷಗಟ್ಟಲೆ ಹಣ ಸುಲಿದು ಪತ್ನಿಗೆ ಚಿತ್ರಹಿಂಸೆ ನೀಡುವ ಇಂತಹ ಸುರಕ್ಷಿತರೇ ನನ್ನ ಜಾತಿಗೆ ಸೇರಿದವರೆಂದು, ಕಚೇರಿಯ ಕಾರಕೂನರು, ವಿದ್ಯಾಧಿಕಾರಿಗಳು, ಖಾಲಿ ತಿರುಗುವ ತರುಣರು, ಕಾಫಿ ಹೊಡೆಸುವ ಶಿಕ್ಷಕರನ್ನು ಕತ್ತೆ ಜಾತಿಗೆ ಸೇರಿಸಿ ನಮ್ಮ ರಾಜಕೀಯ, ಸಾಮಾಜಿಕ ಜೀವನದಲ್ಲಿ ವ್ಯಕ್ತಿ, ಅಧಿಕಾರಿಗಳ, ಅಸಂಗತ, ವಂಚನೆ, ಮೋಸಗಾರಿಕೆಯನ್ನು, ಹಾಗೆ ಉಳಿಸಿ, ಬೆಳೆಸಿಕೊಂಡು ಬರುತ್ತಿರುವ ಇಂತಹ ವ್ಯಕ್ತಿಗಳನ್ನು ವ್ಯಂಗ್ಯವಾಗಿ ಕತ್ತೆಗೆ ಹೋಲಿಸಿ ವಿಡಂಬಿಸಿದ್ದನ್ನು ಈ ಪ್ರಬಂಧದಲ್ಲಿ ಕಾಣಬಹುದು.

**ಸಿಂಹಾಸನ ಕೊಟ್ಟರೂ ಪಕ್ಷಾಂತರವಿಲ್ಲ**

ನಮ್ಮ ಸುತ್ತಲೂ ನಡೆಯುವ ಅನ್ಯಾಯ ಅನಾಚಾರಗಳನ್ನು ಕಂಡಾಗ ಉಂಟಾಗುವ ಸಾತ್ವಿಕ ಕೋಪವನ್ನು ವ್ಯಂಗ್ಯ ಮಾರ್ಗವಾಗಿ ಹೇಳುವ ಲೇಖಕರು ಸಮಾಜದಲ್ಲಿ ಸುಳ್ಳನ್ನೆ ಬಂಡವಾಳವಾಗಿ ಮಾಡಿಕೊಂಡು ಬದುಕುವ ಜನ ತುಂಬಾ ಇದ್ದಾರೆ. ಇಂತಹ ವಾತಾವರಣದಲ್ಲಿಯೇ ಕೊಟ್ಟ ಮಾತಿಗೆ ತಪ್ಪು ನಡೆಯುವ ವಚನ ಭ್ರಷ್ಟರೂ ಇದ್ದಾರೆ ಎಂದು ಹೇಳಿದ್ದಾರೆ. ಹೀಗೆ ಸಮಾಜದ ವೈರುಧ್ಯಗಳ ನಡುವೆ ಬದುಕುವ ಜನರಿಗೆ ಸಮಾಜದ ಸ್ತಂಭಗಳಾದ ಶಿಕ್ಷಕ, ವಕೀಲ, ಡಾಕ್ಟರ್, ಸಾಹಿತಿ, ರಾಜಕಾರಣಿಗಳು ಯಾವ ರೀತಿ ತಮ್ಮ ಮೋಸಗಾರಿಕೆಯನ್ನು ಪ್ರದರ್ಶಿಸುತ್ತಾರೆ ಎಂದು ತದ್ವಿರುದ್ಧದ ಹಿನ್ನೆಲೆಯಲ್ಲಿ ವಿಡಂಬಿಸುವ ಈ ಪ್ರಬಂಧ ನಮ್ಮ ಸುತ್ತಲಿನ ಸಮಾಜವನ್ನು ತೆರೆದ ಕಣ್ಣಿನಿಂದ ನೋಡುವ ದೃಷ್ಟಿಕೋನ ಹೊಂದಿದೆ.

ಶಿಕ್ಷಕರಾದವರು ನಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಎಸಗುವ ಮೋಸಗಾರಿಕೆಯನ್ನು ಸುಳ್ಳಿನ ಕಥನವೆಂಬಂತೆ ವಿಡಂಬಿಸುತ್ತಾ ಹೋಗಿದ್ದಾರೆ. ಶಿಕ್ಷಕರು ಕ್ಲಾಸಿಗೆ ಅಟೆಂಡೆನ್ಸ್ ತೆಗೆದುಕೊಂಡು ಹೋಗುವುದು, ಇಂಗ್ಲೀಷ್ ಪಿರಿಯಡ್‌ಗೆ ನೂರ ಇಪ್ಪತ್ತು ಜನ ಪೈಕಿ ನೂರ ಹದಿನೈದು ಜನ ಹಾಜರಿದ್ದದು, ಎಲ್ಲರೂ ಶಾಂತಚಿತ್ತ ಉಪನ್ಯಾಸ ಕೇಳಿದ್ದು, ಪ್ರಸ್ತುತ ಕಾಲೇಜು ತರಗತಿಗಳಲ್ಲಿನ ವಸ್ತುಸ್ಥಿತಿಯನ್ನು ತದ್ವಿರುದ್ಧವಾಗಿ ಹೇಳುತ್ತಾ ವ್ಯಂಗ್ಯವಾಗಿ ವಿಶದಪಡಿಸಿದ್ದಾರೆ. ಹಾಗೇನೇ ವಕೀಲನೊಬ್ಬ ತನ್ನ ಸುಳ್ಳಿನ ಕಥನ ಹೇಳುತ್ತಾ ತಾನು ಹಿರಿಯ ನ್ಯಾಯವಾದಿಯ ಸಹಾಯಕನಾಗಿ ಹಳ್ಳಿಯ ಯಜಮಾನನ್ನು ಕುಳ್ಳಿರಿಸಿ ಅವನನ್ನು ವಿಚಾರಿಸಿ ಅವನ ಅಣ್ಣ ತಮ್ಮಂದಿರ ಜಗಳವನ್ನು ಶಾಂತ ರೀತಿಯಿಂದ ಬಗೆಹರಿಸಿ ಬುದ್ಧಿವಾದ ಹೇಳಿ ಕಳಿಸಿದ್ದನ್ನು

ಹೇಳುವಲ್ಲಿ ಇಂದಿನ ಕೊಳ್ಳುಬಾಕ ವಕೀಲರ ಮನೋವೃತ್ತಿಯನ್ನು ತದ್ವಿರುದ್ಧವಾಗಿ ವ್ಯಂಗ್ಯದ ಮೂಲಕ ವ್ಯಕ್ತಪಡಿಸಿದ್ದನ್ನು ನೋಡಬಹುದು. ಅದೇ ರೀತಿ, ಡಾಕ್ಟರರು ತಮ್ಮ ಸುಳ್ಳಿನ ಕಥನವನ್ನು ಹೇಳುತ್ತಾ; ಹರಿದ ಚಿಂದಿ ಉಟ್ಟ ಮುದುಕಿಯೊಬ್ಬಳು ತನ್ನ ಮೊಮ್ಮಗನನ್ನು ಕರೆದುತಂದು ಡಾಕ್ಟರಿಗೆ ತೋರಿಸಿದಾಗ ಅವರು ಪ್ರೀತಿಯಿಂದ ಉಪಚರಿಸಿದ್ದು ಚಿಕಿತ್ಸೆ ನೀಡಿ, ಬೊಗಸೆ ತುಂಬಾ ಗುಳಿಗೆ ನೀಡಿ. ಹಣ್ಣು ಹಂಪಲು ತೆಗೆದುಕೊಳ್ಳಲು ಹಣವನ್ನು ನೀಡಿದ್ದು ಸಹ ಸುಲಿಗೆಯನ್ನು ವೃತ್ತಿ ಮಾಡಿಕೊಂಡ ಡಾಕ್ಟರರ ಕುರಿತಾದ ವ್ಯಂಗ್ಯಾತ್ಮಕ ವಿಡಂಬನೆಯಾಗಿದೆ.

ಸಾಹಿತಿಗಳನ್ನು ಸುಳ್ಳಿನ ಸಾಮ್ರಾಟರೆಂದು ಕರೆದು ಅವರು ತಮ್ಮ ಸುಳ್ಳಿನ ಕಥನ ಹೇಳುವಲ್ಲಿ ವ್ಯಂಗ್ಯ ಈ ರೀತಿಯಾಗಿ ಮೂಡಿಬಂದಿದೆ. "ಇವರು ಹಿರಿಯ ಕವಿಗಳೊಬ್ಬರಿಂದ ಅವರಲ್ಲೂ ಬೆಂಗಳೂರಿನ ಕವಿಯಿಂದ ಮುನ್ನುಡಿ ಬರೆಸಲು ಹೋಗಿ, ಇವರ ಕವಿತೆಯಿಂದ ಸಂತೋಷಗೊಂಡ ಅವರು ಬೆನ್ನು ತಟ್ಟಿ, ಅಪ್ಪಿಕೊಂಡು, ಇವರ ಸಾಹಿತ್ಯವನ್ನು ಕುರಿತು ಏನು ನಿನ್ನ ಕಲ್ಪನೆ, ಏನು ನಿನ್ನ ಭಾಷೆ, ಅಪ್ರತಿಮೆ, ಲಯದ ಗತ್ತು ಅಹಾ! ನಿನೊಬ್ಬ ಧೀಮಂತ ಕನ್ನಡ ಕವಿ' ಎಂದು ಹೊಗಳಿದ್ದು ತದ್ವಿರುದ್ಧವಾದುದು. ಇಲ್ಲಿ ವ್ಯಂಗ್ಯವನ್ನು ಬಳಸಿ ರಸಹೀನ, ನಿಸತ್ವ ಕವಿಗಳನ್ನು ವಿಡಂಬಿಸಿದ್ದಾರೆ. ಹಾಗೇ ನಮ್ಮ ರಾಜಕಾರಣಿಗಳು ಕುರಿತು. ಅವರಲ್ಲೂ ಒಬ್ಬ ರಾಜಕಾರಣಿ ತನ್ನ ಸುಳ್ಳಿನ ಕಥಾನಕವನ್ನು ಹೇಳುತ್ತಾ, ನಾನು ಬೆಂಗಳೂರಿನಲ್ಲಿ ಹೆಚ್ಚಾಗಿ ಇರದೇ ನಮ್ಮ ಮತ ಕ್ಷೇತ್ರದಲ್ಲಿ ಇದ್ದು ಹಳ್ಳಿಗಳಲ್ಲಿ ಸಂಚರಿಸಿ ಅಲ್ಲಿನ ಕುಂದು ಕೊರತೆಗಳನ್ನು ಟಿಪ್ಪಣಿ ಮಾಡಿದ್ದು, ವಿರೋಧ ಪಕ್ಷದ ಮುಖಂಡರು ಪಕ್ಷಾಂತರಕ್ಕೆ ಒತ್ತಾಯಿಸಿ ಹಣ ಕೊಡಲು ಬಂದರೂ ಅದನ್ನು ತಿರಸ್ಕರಿಸಿದ್ದು, ಎಂದು ಹೇಳುವಲ್ಲಿ ಇಂದಿನ ರಾಜಕಾರಣಿಗಳ ಗುಣಾವಗುಣಗಳು ಇಂತಹ ವ್ಯಕ್ತಿತ್ವಕ್ಕೆ ವ್ಯತಿರಿಕ್ತರಾದವರು ಎಂದು ವ್ಯಂಗ್ಯವಾಗಿ ವಿಡಂಬಿಸಿ ಅವರಿಗೆ ಮಹಾಸುಳ್ಳರೆಂಬ ಪಟ್ಟ ಕಟ್ಟುವಲ್ಲಿ ನಮ್ಮ ಸಮಾಜದಲ್ಲಿನ ಕೊಳ್ಳುಬಾಕ ಜನರ ಮನೋಭಾವವನ್ನು ಬಿಂಬಿಸುವಲ್ಲಿ ಈ ಪ್ರಬಂಧ ಗೆದ್ದಿದೆ.

**ಕಿವುಡನ ಮಾಡಯ್ಯ ತಂದೆ**

೧೨ನೇ ಶತಮಾನದಲ್ಲಿ ಬಸವಣ್ಣನವರು ಸಮಾಜದ ಅನೀತಿ ಅನಾಚಾರಗಳನ್ನು ಕೇಳದೇ 'ಕಿವುಡನ ಮಾಡಯ್ಯಾ ತಂದೆ' ಎಂದಿದ್ದನ್ನು ಇಂದು ಆಧುನಿಕ ಯುಗದಲ್ಲಿನ ಲೌಡ್ ಸ್ಪಿಕರ್‌ಗಳ ಹಾವಳಿಯಿಂದ ಕಿವುಡನ ಮಾಡಯ್ಯ ತಂದೆ ಎಂದು ಹೇಳುವ ಲೇಖಕರು ಈ ಪ್ರಬಂಧದಲ್ಲಿ ಲಘು ಹಾಸ್ಯ ವಿಡಂಬನೆಯನ್ನು ವ್ಯಕ್ತಪಡಿಸಿದ್ದಾರೆ.

ಇತ್ತೀಚಿನ ದಿನಮಾನದಲ್ಲಿ ಅಡಂಬರ ಪ್ರಿಯರಾದ ನಾವು ಪ್ರತಿಷ್ಠೆಯ ಪ್ರಚಾರಕ್ಕಾಗಿ ಪ್ರತಿಯೊಂದು ಕಾರ್ಯಕ್ರಮಕ್ಕೆ ಲೌಡ್‌ಸ್ಪೀಕರ್‌ಗಳನ್ನು ಹಚ್ಚಿ, ಮಂಗಲಕಾರ್ಯದಲ್ಲೂ ಅಮಂಗಲದ ಅಶ್ಲೀಲ ಹಾಡುಗಳನ್ನು ಹಾಕಿ, ಅಸಂಬದ್ಧ ನಡಾವಳಿಕೆಗಳನ್ನು ಪ್ರದರ್ಶಿಸುವವರನ್ನು ನಾವು ದಿನಾಲು ನೋಡುತ್ತೇವೆ. ಇಂತಹವರನ್ನು

ಕುರಿತು ಲೇಖಕರು "ತುತ್ತು ಕೂಳಿಗೂ ಗತಿಯಿರದೇ ತುತ್ತು ಅನ್ನಕ್ಕಾಗಿ ನಾಯಿಯಂತೆ ಕಚ್ಚಾಡುವ ಸಾಮಾನ್ಯ ಬಡಜನತೆಯ ಎದುರು ಶ್ರೀಮಂತರ ವೈಭೋಗದ ಅಟ್ಟಹಾಸ ಅನಾಗರಿಕತೆಯ ಪರಾಕಾಷ್ಠೆ"[೪೧] ಎಂದು ಟೀಕಿಸಿದ್ದಾರೆ. ಶ್ರಾವಣ ಮಾಸದಲ್ಲಿ ಪುರಾಣ ಪುಣ್ಯ ಕಥೆಯನ್ನು ಕೇಳುವ ಕಾಲದಲ್ಲಿ ಕರ್ಕಶವಾದ 'ಕಳಬೇಡ,ಕೊಲಬೇಡ, ಹುಸಿಯ ನುಡಿಯಲು ಬೇಡ' ಎಂಬ ವಚನವನ್ನು, 'ನೀರ ಕಂಡಲ್ಲಿ ಮುಳುಗುವರಯ್ಯಾ' ಎಂಬ ವಚನವನ್ನಾಗಲಿ ಕನಿಷ್ಠ ನೂರು ಬಾರಿಯಾದರೂ ಕೇಳಿದರೂ ತಣಿಯದ ಜನ, ಶಿವಾಯನಮಃ ಎಂಬ ಭಜನೆಯನ್ನು ರಾತ್ರಿಯಿಡೀ ಕೇಳಿ ರಾತ್ರಿಯಲ್ಲಿ ಶಿವಾಯ ನಮಃ ಎಂದಿದ್ದಕ್ಕೆ "ಸ್ವರ್ಗಕ್ಕೆ ಹೋಗಲು ಸಿಕ್ಕ ಪುಣ್ಯ" ನಮ್ಮ ಏಕಾಂತತೆಯನ್ನು ಇಂತಹ ಲೌಡ್ ಸ್ಪೀಕರ್ ಗಳಿಂದ ಹೇಗೆ ಹಾಳಾಗುತ್ತದೆ ಎಂದು ಇಂತಹ ಜನರ ಆಡಂಬರವನ್ನು ಟೀಕಿಸುತ್ತಾ 'ಕಿವುಡನ ಮಾಡಯ್ಯನ ತಂದೆ' ಎಂದು ವಿಡಂಬನಾತ್ಮಕವಾಗಿ ಹೇಳಿದ್ದು ಸೂಕ್ತವೆನಿಸಿದೆ.

**ಒಂದು ಕಥೆಯ ಐದು ದೃಶ್ಯಗಳು**

ಜಗತ್ತಿನ ರಂಗಭೂಮಿಯಲ್ಲಿ ನಟರಾಗಿ ಬದುಕುವ ನಾವು ಜೀವನದ ಕಾಲಚಕ್ರದಲ್ಲಿ ಸಂಭವಿಸಬಹುದಾದ ಘಟನೆಗಳನ್ನು, ಹಾಗೂ ಬದುಕಿನ ಎಲ್ಲಾ ಬದಿಗಳನ್ನು ತೆರೆದ ಕಣ್ಣುಗಳಿಂದ ಸಾಕ್ಷಿಭೂತವಾಗಿ ನೋಡುವ ಮಾನವ, ಸಮಾಜದ ವ್ಯವಸ್ಥೆಯಲ್ಲಿಯ ವೈರುಧ್ಯಗಳನ್ನು ಪ್ರಚಲಿತ ಘಟನೆಗಳ ಮೂಲಕ ವಿಡಂಬನಾತ್ಮಕ ಶೈಲಿಯಲ್ಲಿ ಐದು ದೃಶ್ಯಗಳಲ್ಲಿನ ಸನ್ನಿವೇಶಕ್ಕೆ ತಕ್ಕಂತೆ ಈ ಪ್ರಬಂಧದಲ್ಲಿ ಬಿಂಬಿಸಿದ್ದಾರೆ.

ಇಂದಿನ ಆಧುನಿಕ ಯುಗದಲ್ಲಿ ಇಂಗ್ಲೀಷ್ ಮಿಡಿಯಂ ಎಂಬ ಬೇತಾಳದ ಬೆನ್ನುಹತ್ತಿದ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಸಾವಿರಗಟ್ಟಲೇ ಡೊನೇಶನ್ ಕೊಟ್ಟು ಕಾನ್ವೆಂಟ್‌ಗೆ ಸೇರಿಸುತ್ತಾರೆ. ಮಮ್ಮಿ ಡ್ಯಾಡಿ ಎನ್ನುವ ಪದದಿಂದಲೇ ಸ್ವರ್ಗ ಮುಟ್ಟುವ ಇವರು "ಮಕ್ಕಳನ್ನು ಕಾನ್ವೆಂಟ್‌ಗೆ ಕಳುಹಿಸುವುದೇ ತಮ್ಮ ಪ್ರಥಮ ಗುರಿಯಾಗಿರಿಸಿಕೊಂಡಿದ್ದಾರೆ"[೪೨] ಎಂದು ಇಂದಿನ ಆಡಂಬರದ ಡೌಲಿಗೆ ಬಲಿಯಾಗಿರುವ ಜನರ ಕುರಿತಾದ ಟೀಕೆಯನ್ನು ಮೊದಲನೇ ಸನ್ನಿವೇಶದಲ್ಲಿ ನೋಡಬಹುದು.

ಇಂಗ್ಲೀಷ್ ಕಲಿತ ಮಗನಿಗೆ ಡೈನಿಂಗ್ ಟೇಬಲ್ ನಲ್ಲೇ ಊಟ ಆಗಬೇಕು ಅವನಿಗೆ ಹಾಮ್ಲೆಟ್, ಬ್ರೆಡ್ಡುಗಳೇ ಬೇಕು. ರೊಟ್ಟಿ ಕಾಳು ಆಗದು. ಇದರಿಂದಾಗಿ ಈತನಿಗೆ ಈಗ ಇಂಗ್ಲೀಷ್ ಎಂಬ ಪ್ರತಿಷ್ಠೆಯ ಮದ ಬಂದಿರುವುದನ್ನು ಕಾಣಬಹುದು. ಪ್ಯಾಂಟ್ ಶರ್ಟ್ ಧರಿಸಿ ಉದ್ದ ಕೂದಲು ಬಿಟ್ಟ ಕಾನ್ವೆಂಟ್ ಕುಮಾರನಾದ ಈತ ಈಗ ಬಲಿತ ಬಾಲಕನಾಗಿದ್ದಾನೆ ಎಂದು ಹೇಳಿ, ಅವನು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಹೊರಗಿನವರ ಸಹಾಯದಿಂದ ಪಾಸಾಗಿದ್ದನ್ನು ಅವನ ಈ ಪರಿಶ್ರಮಕ್ಕೆ ಪಾಲಕರ ಶ್ರಮವೂ ಕಾರಣವೆಂದು ಹೇಳುವಲ್ಲಿ ವ್ಯಂಗ್ಯ ವ್ಯಕ್ತವಾಗಿದೆ.

ಬಾಲಕನು ಪ್ರೌಢನಾಗಿ ರಮಣೀಯರ ಮನಸೆಳೆಯುವ ನಾಯಕನಾಗಿದ್ದಾನೆ. ಇತ ಪಿಯುಸಿಯನ್ನು ಸಹಾಯಕರಿಂದ ಪಾಸು ಮಾಡಿ ಇಂಜನೀಯರಿಂಗ್, ಮೆಡಿಕಲ್, ದೊರಕಿಸಿಕೊಂಡು ಲಕ್ಷಗಟ್ಲೆ ಹಣ ಖರ್ಚುಮಾಡಿ ನೌಕರಿಯನ್ನು ಪಡೆಯುವುದು, ಇಂದಿನ ಶ್ರೀಮಂತ ಮಕ್ಕಳ ಕಾಯಕವಾಗಿದೆ ಎಂದು ಸೂಚ್ಯವಾಗಿ ವ್ಯಕ್ತಪಡಿಸಿದ್ದಾರೆ. ನಾಲ್ಕನೇ ದೃಶ್ಯವಾಗಿ, ಸೂಟುಬೂಟು ಧಾರಿಯಾಗಿ ಸಾಹೇಬನಾಗಿ, ಬಂಗಲೇ ಕಾರಿನ ಒಡೆಯನಾದರೂ, ಶ್ರೀಮಂತರ ಅಳಿಯನಾಗಿ ಯಜಮಾನಿಯ ಸರ್ವೇಟ್ ಆಗುವ ದೃಶ್ಯದಲ್ಲಿ ಮಾನವ ಜೀವನದಲ್ಲಿನ ನಿಕೃಷ್ಟತೆಯನ್ನು ಇದರ ಮೂಲಕ ವ್ಯಕ್ತಪಡಿಸಿದ್ದಾರೆ.

ಐದನೇ ದೃಶ್ಯ ಜೀವನದ ಕೊನೆಯ ಘಟ್ಟದಲ್ಲಿ ಕರಿ-ಬಿಳಿ-ಕೂದಲಿನ ವ್ಯಕ್ತಿಯಾಗಿ ಪಾರ್ಕಿನಲ್ಲಿ ಕುಳಿತು ಗೆಳೆಯರ ಹಾದಿ ಕಾಯುವುದು. ಈ ಪ್ರಬಂಧದಲ್ಲಿ ಲೇಖಕರು ಮಾನವನ ವ್ಯವಹಾರಿಕ ಬದುಕಿನಲ್ಲಿ ತನ್ನ ಜೀವನದ ಕಾಲಮಾನದಲ್ಲಿ ತಾನು ಕಳೆದು ಬರುವ ಹಂತಗಳನ್ನು ಐದು ದೃಶ್ಯಗಳಲ್ಲಿ ಸೆರೆ ಹಿಡಿದಿದ್ದಾರೆ. ಬಾಲ್ಯ, ಪ್ರೌಢ, ವಯಸ್ಕ, ಮುದಿತನ ಎಂಬುದನ್ನು ನಾವು ವ್ಯವಹಾರಿಕ ಬದುಕಿಗೆ ಪ್ರತಿಷ್ಠೆ ಎಂಬ ಆಡಂಬರ ಜೀವನಕ್ಕೆ ಬಲಿಯಾಗುವುದನ್ನು ಈ ಐದು ದೃಶ್ಯಗಳ ಮೂಲಕ ವ್ಯಕ್ತಪಡಿಸಿದ್ದಾರೆ.

**ವೃತ್ತ ಪತ್ರಿಕೆಗಳು ಹಾಗೂ ನಾನು**

ಸರಕಾರದ ನಾಲ್ಕನೇ ಅಂಗವೆಂದು ಸ್ಥಾನ ಪಡೆದ ಪತ್ರಿಕಾ ರಂಗ ಇಂದು ತನ್ನ ಮೂಲಧೋರಣೆಯನ್ನು ಮರೆತು ಕೇವಲ ಆಡಳಿತರೂಢ ರಾಜಕೀಯ ಪ್ರಭಾವಲಯಕ್ಕೆ ಒಳಪಟ್ಟು, ನೀರಸ, ನಿಸತ್ವ, ಸುದ್ದಿಗಳಿಂದ ಅವುಗಳ ಮೌಲ್ಯ ಕುಸಿದಿರುವುದಕ್ಕೆ ಕಾರಣವೆಂದು, ಆ ಪತ್ರಿಕೆಗಳಲ್ಲಿ ಪ್ರಕಟವಾಗುವ ಅಳಸಲು ವಿಷಯವನ್ನು ಓದುವ ಜನರ ಸಾತ್ವಿಕ ಕೋಪ ಏನೆಂಬುದನ್ನು ಪ್ರತಿಬಿಂಬಿಸುವ ಈ ಪ್ರಬಂಧದಲ್ಲಿ ವಿಡಂಬನೆ ವ್ಯಕ್ತವಾಗಿದೆ.

ದಿನಾಲು ಪತ್ರಿಕೆ ಒದುವ ಚಟ ಹಲವರಿಗಿರುತ್ತದೆ. ರೆಡಿಯೋದಲ್ಲಿ ಕೇಳಿ, ಟೆಲಿವಿಷನ್ ನಲ್ಲಿ ನೋಡಿಯೂ ಅದೇ ಸುದ್ದಿಯನ್ನು ಆರಾಮ ಕುರ್ಚಿಯಲ್ಲಿ ಕುಳಿತು ತಾಸುಗಟ್ಲೆ ಓದುವ ವಿಷಯವಾದರೂ ಎಂತಹದ್ದು? ಅದೇ ಅತ್ಯಾಚಾರ, ಸುಲಿಗೆ, ರಾಜಕೀಯ ಡೊಂಬರಾಟ, ಕೊಲೆ, ಇಂತಹ ಅನಾಹುತ ಪರಂಪರೆಗಳ ಮುದ್ರಿತ ಅಹಾರಗಳಾಗಿ ಪತ್ರಿಕೆಗಳು ನಿಂತಿರುವುದು ದುರ್ದೈವದ ಸಂಗತಿ. ಎಂದು ಪತ್ರಿಕೆಗಳ ವಿರುದ್ಧವಾದ ಟೀಕೆಯನ್ನು ಮಾಡುತ್ತಾರೆ. ಒಂದು ಕಾಲಕ್ಕೆ ಸ್ವಾತಂತ್ರ್ಯಕ್ಕಾಗಿ ಜನರನ್ನು ಪ್ರೇರೇಪಿಸುತ್ತಿದ್ದ ಪತ್ರಿಕೆಗಳು ಇಂದು ಜನರ ಮನಸ್ಸನ್ನು ಕೆರಳಿಸುವ, ಉದ್ರೇಕಿಸುವ, ಅತ್ಯಾಚಾರ, ಶೋಷಣೆ, ಹಿಂಸಾಚಾರಗಳನ್ನು ಪ್ರಚೋದನ ನೀಡುವ ವಿಷಯಗಳಿಗೆ ಒತ್ತು ನೀಡಿದ್ದು, ಖೇದಕರ ಎಂದು ಪತ್ರಿಕೆಗಳನ್ನು ಟೀಕಿಸಿದ್ದಾರೆ.

ಅತೀರಂಜಕ ವಿಷಯಗಳಿಗೆ ಮಹತ್ವ ಕೊಡುವ ಪತ್ರಿಕೆಗಳು ಇಂದಿನ ಮಂತ್ರಿವರ್ಯರ ಭಾಷಣವನ್ನು ಪೂರ್ಣ ಪ್ರಕಟಿಸುತ್ತಾರೆ. ಅದೇ ಒಬ್ಬ ಸಾಹಿತಿಯ ಭಾಷಣವನ್ನು ಒಂದೇ ಸಾಲಿನಲ್ಲಿ ಮುಕ್ತಾಯಗೊಳಿಸುತ್ತಾರೆ.

ಇಂತಹ ಸುದ್ದಿಗಳು ನಮ್ಮ ಮೆದುಳಿನಲ್ಲಿ ಒಂದು ಕ್ಷಣವೂ ನಿಲ್ಲುವುದಿಲ್ಲ. ಇಂತಹ ಪತ್ರಿಕೆಗಳಿಂದ ನಮ್ಮ ಸಮಯ ನೆಮ್ಮದಿನೂ ಆಳು ಎಂದು ಸೂಚ್ಯವಾಗಿ ವಿಡಂಬಿಸಿ ಹೇಳಿದ್ದಾರೆ.

**ಮನೆಯ ಯಜಮಾನಿ ಹಾಗೂ ರವಿವಾರ ಸೂಟಿ**

ಈ ಪ್ರಬಂಧದಲ್ಲಿ ಲೇಖಕರು ತಮ್ಮ ಅನುಭವದ ಮಧುರ ರಸಪಾಕವನ್ನು ಹರಿಸಿ ಮನೆಯಲ್ಲಿ ಒಂದು ದಿನ ಯಜಮಾನಿಯಾದವಳು ಇರದಿದ್ದರೆ ಪಡುವ ಕಷ್ಟ ನಷ್ಟಗಳೇನೆಂಬುದನ್ನು ಲೇಖಕರು ಇಲ್ಲಿ ಒಂದು ರವಿವಾರದ ಘಟನೆಯನ್ನು ಹಾಸ್ಯತ್ಮಕವಾಗಿ ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ಪುರುಷರು ನಳಪಾಕ ಪ್ರವೀಣರೆನಿಸಿದರೂ, ಒಂದು ದಿನ ಹೆಂಡತಿಯಾದವಳು ಮನೆಯಲ್ಲಿ ಇಲ್ಲವೆಂದರೆ ಅವರಿಗೆ ಉಪವಾಸ, ವನವಾಸದ ಗತಿ ಬಂದಿರುತ್ತದೆ. ಅಂತಹ ಒಂದು ಸಂದರ್ಭವನ್ನು ಲೇಖಕರು ಹೆಂಡತಿಯನ್ನು ಊರಿಗೆ ಕಳುಹಿಸಿ ತಾವೇ ಅಡುಗೆ ಕೆಲಸಕ್ಕೆ ನಿಂತಾಗ ಸ್ಟವ್ ಮೇಲೆ ಚಹಾ ಮಾಡಲು ಹೋಗಿ ಅದರಲ್ಲಿ ಸೀಮೆ ಎಣ್ಣೆ ಬೆರೆತಿದ್ದೂ, ಅನ್ನ ಮಾಡಲು ಹೋದರೆ ಅದರಲ್ಲಿ ನೀರು ಕಡಿಮೆಯಾಗಿ ಹೊತ್ತಿದ್ದು, ಸಾರಿನ ಖಾರ ಬ್ರಹ್ಮರಂಧ್ರಕ್ಕೇರಿದ್ದು, ಉಪ್ಪಿಲ್ಲದ ಸಾರನ್ನು ಕಿಚಡಿಯಾದ ಅನ್ನಕ್ಕೆ ಬೆರೆಸಿ ತಿಂದದ್ದು, ಚಪಾತಿ ಮಾಡಲು ಹೋಗಿ ಹಿಟ್ಟಿಗೆ ಅಧಿಕ ನೀರು ಬಳಸಿ, ಅದು ಕೈಗೆ ಸಿಗದೆ, ಅಸ್ಟ್ರೇಲಿಯಾ ಮ್ಯಾಪ್ ಆಗಿದ್ದು, ಬೇಯಿಸುವ ಸಂದರ್ಭದಲ್ಲಿ ಸ್ಟವ್ ಆರಿದ್ದು, ಕೊನೆಗೆ ಹೋಟೆಲ್‌ಗೆ ಹೋಗಿ ತಿಂಡಿ ತಿಂದು ಬಂದ ಪ್ರಸಂಗದಲ್ಲಿ ವ್ಯಕ್ತವಾಗುವ ಅವರ ಸಂಕಟವನ್ನು ಬಿಂಬಿಸುವಲ್ಲಿ ಹಾಸ್ಯ ಮೂಡಿಬಂದಿದೆ.

**ನಿದ್ರಾಪುರಾಣ-ಒಂದು ಹಗರಣ**

ನಿದ್ದೆ ಮನುಷ್ಯನಿಗೆ ಅತ್ಯಂತ ಅವಶ್ಯಕವಾಗಿ ಬೇಕು. ಅದಕ್ಕಂತೆಯೇ ಪ್ರಕೃತಿಯಲ್ಲಿ ಹಗಲು ರಾತ್ರಿಗಳು ಸೃಷ್ಟಿಯಾದವು. ಆದರೆ ನಿದ್ದೆ, ಕೆಲವು ಸಲ ಹೇಳದೇ ಕೇಳದೆ ವಕ್ಕರಿಸಿ ಅದು ಉಂಟು ಮಾಡುವ ಗೊಂದಲದ ಸಂದರ್ಭಗಳು ಹೇಗೆ ಇರುತ್ತವೆ ಎಂದು, ಅದರಿಂದಾಗುವ ಲಾಭ, ನಷ್ಟಗಳೇನೆಂಬುದನ್ನು ಅನುಭವಗಳ ಹಿನ್ನೆಲೆಯಲ್ಲಿ ವ್ಯಕ್ತಪಡಿಸಿದ್ದನ್ನು ಈ ಪ್ರಬಂಧದಲ್ಲಿ ನೋಡಬಹುದು.

ಒಮ್ಮೆ ಯಾರಿಗೂ ಸುಳಿವು ಸಿಗದೆ ಮಲಗಿ ಸತತ ಹದಿನಾಲ್ಕು ತಾಸು ನಿದ್ದೆ ಮಾಡಿದ್ದನ್ನು ಹೇಳುತ್ತಾ ತಾನು 'ಕುಂಭಕರ್ಣನ ಅಪರಾವತಾರವೆಂದು' ಸಮಾಜಾಯಿಸಿ ಕೊಡುವ ಲೇಖಕರು ತಮ್ಮ ನಿದ್ದೆ ಎಂತಹದ್ದು ಎಂದು ಹೇಳಿದ್ದಾರೆ. ಹಾಗೇನೆ ಯಾವ ಯಾವ ಸ್ಥಳ, ಸಂದರ್ಭಗಳಲ್ಲಿ ನನಗೆ ನಿದ್ದೆ ವಕ್ಕರಿಸುತ್ತದೆ ಎಂದು ಹೇಳುತ್ತಾ ಕ್ಷೌರಿಕನ ಸಿಂಹಾಸನದ ಮೇಲೆ ಕುಳಿತರೆ ನಿದ್ರಾದೇವತೆ ಆಕ್ರಮಿಸಿ ಕಟಿಂಗ್ ಮುಗಿದರೂ ಗಾಢನಿದ್ರೆ ಮುಂದುವರೆದಿರುತ್ತದೆ ಎಂದು, ಸಿನಿಮಾ ನೋಡಲು ಹೋದರೇ ಅಲ್ಲಿನ ಕತೆಯ ದೃಷ್ಯ, ನೃತ್ಯವನ್ನು, ನೋಡಿ ನಿದ್ರಿಸಿದ್ದು. ಬಸ್ಸು ಗಾಢ ನಿದ್ರೆಯ ತವರು ಮನೆ ಎಂದು ಹೇಳಿ, ಅಲ್ಲಿ

ಕುಳಿತು ಗೊರಕೆ ಹೊಡೆಯುತ್ತಾ, ಕಿಟಕಿಗೆ ಹಣೆ ಬಡಿದು ಬುಗುಟಿ ಬಂದಿದ್ದನ್ನು ಹೇಳುವಲ್ಲಿ ಹಾಸ್ಯ ವ್ಯಕ್ತವಾಗಿದೆ.

ನಮ್ಮ ಕರ್ನಾಟಕದ ಮಂತ್ರಿಗಳು ನಿದ್ರಾಶೂರರೆಂದು ಲೇವಡಿ ಮಾಡಿ, ನಿದ್ರಾಹೀನತೆ ಆಧುನಿಕ ಸಂಕೀರ್ಣ ಜಗತ್ತಿನ ಬಳುವಳಿ. ಇಂದಿನ ಪೀಳಿಗೆಯವರಿಗೆ ಅಂಟಿದ ಜಾಡ್ಯ ಎಂದು, ದೇವರು ಪ್ರತ್ಯಕ್ಷನಾಗಿ ಏನು ಬೇಕೆಂದು ಕೇಳಿದರೆ ರೀಪ್‌ವ್ಯಾನ್ ವಿಂಕಲ್ ನಂತೆ ನನಗೂ ಹದಿನೆಂಟು ವರ್ಷ ನಿದ್ರೆ ಕರುಣಿಸು ಸಾಕು, ನನಗೆ ಮಂತ್ರಿ ಪದವಿ ಬೇಡ ಎನ್ನುವಲ್ಲಿ ಹಾಸ್ಯದ ಜೊತೆ ವಿಡಂಬನೆಯೂ ವ್ಯಕ್ತವಾಗಿದೆ.

ಹೀಗೆ ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳಲ್ಲಿ ಹಾಸ್ಯ ವಿಡಂಬನೆ ವ್ಯಂಗ್ಯಗಳು ಸಂದರ್ಭಕ್ಕೆ ತಕ್ಕಂತೆ ಬಳಕೆಯಾಗಿ ಓದುಗರ ಸಾತ್ವಿಕ ಮನೋಭಾವವನ್ನು ಎತ್ತಿ ಹಿಡಿದಿವೆ. ಹಾಗೂ ಇವರ ಪ್ರಬಂಧಗಳಲ್ಲಿ ಸೊಗಸಾಗಿ ಮೂಡಿಬಂದ ಹಾಸ್ಯವು ಪ್ರಬಂಧಗಳಿಗೆ ಮೆರಗನ್ನು ತಂದಿದೆ.

### ೪.೨. ಪರಿಸರ-ಸ್ಥಳ

ನಮ್ಮ ಸುತ್ತಮುತ್ತಲಿನ ಪರಿಸರ ಹಾಗೂ ಜನ ಜೀವನವನ್ನು ಆಧರಿಸಿ ವಿವಿಧ ಸನ್ನಿವೇಶ ಘಟನೆಗಳನ್ನು ವಾಸ್ತವದ ಗಡಿಯೊಳಗೆ ಅವುಗಳನ್ನು ವಿಂಗಡಿಸಿ, ಅಲ್ಲಿನ ಪರಿಸರ ಹಾಗೂ ಜನರ ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಲೇಖಕರು ಹಾಸ್ಯ, ವಿಡಂಬನೆಯೊಂದಿಗೆ ಸಾತ್ವಿಕ ಮನೋಭಾವದ ಅಂಶಗಳನ್ನು ಲಲಿತ ಪ್ರಬಂಧಗಳಲ್ಲಿ ವ್ಯಕ್ತಪಡಿಸಿರುವುದನ್ನು ಕಾಣುತ್ತೇವೆ. ನಮ್ಮ ಸುತ್ತಮುತ್ತಲಿನ ಜನಜೀವನವನ್ನು ತೆರೆದ ಕಣ್ಣುಗಳಿಂದ ನೋಡುವ, ಕೇಳುವ, ಸಾಕ್ಷಿಭೂತವಾಗಿ ನೋಡುವ ಶಕ್ತಿ ವೀರೇಂದ್ರ ಸಿಂಪಿಯಂತಹ ಲೇಖಕರಿಗೆ ಸಿದ್ಧಿಸಿದೆ. ಹಾಗೇನೆ ಜನತೆಯ ಹತ್ತಾರು ಮುಖಗಳನ್ನು, ಅವರ ಜೀವನದ ಹಿಂದಿನ ಪ್ರೇರಕ ಶಕ್ತಿಗಳನ್ನು ಅರ್ಥಮಾಡಿಕೊಳ್ಳುವ ಅಂತಃಕರಣ ಹೊಂದಿ, ಸಾಮಾಜಿಕ ವರ್ತನೆಯ ಬಗ್ಗೆ ಚಿಂತನೆ ನಡೆಸಿ ಸೂತ್ರಬದ್ಧವಾಗಿ ನಿರ್ದೇಶನ ಮಾಡಬಲ್ಲ ಸಂಯಮಶೀಲ ಶೈಲಿಯನ್ನು ರೂಢಿಸಿಕೊಂಡಿದ್ದಾರೆ. ಇಲ್ಲಿ ವ್ಯಕ್ತವಾಗುವ ಲೇಖಕರ ಅನುಭವದ ಹರವು ವಿಸ್ತಾರವಾಗಿ ಅಲ್ಲಿನ ಪರಿಸರ ಮತ್ತು ಸ್ಥಳದ ಮಹಿಮೆಯನ್ನು ಮನೋಜ್ಞವಾಗಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಅಂತಹ ಕೆಲವು ಪ್ರಬಂಧಗಳಲ್ಲಿ ಉದಾಹರಣೆಗೆ

### ಹಳ್ಳಿಯ ಚಹಾ ಹೊಟೇಲುಗಳು

ನಮ್ಮ ದೇಶ ಹಳ್ಳಿಗಳಿಂದ ಕೂಡಿದ ಸಮೃದ್ಧ ರಾಷ್ಟ್ರ ಎಂದು ಕರೆಯಲಾಗಿದೆ. ನಿಜವಾದ ಅರ್ಥದಲ್ಲಿ ಹಳ್ಳಿಯ ಸಮೃದ್ಧತೆ ಸೌಂದರ್ಯದಲ್ಲಿದ್ದರೂ, ಸೌಲಭ್ಯಾಕಾಂಕ್ಷೆಗಳಲ್ಲಿ ಯಾವುದೇ ಸಮೃದ್ಧಿಯನ್ನು ಕಾಣಲು ಸಾಧ್ಯವಿಲ್ಲ. ಅಂತಹದರಲ್ಲಿ ವೀರೇಂದ್ರ ಸಿಂಪಿಯವರು ಹಳ್ಳಿಯ ಚಹಾ ಹೋಟೇಲಿನ ಮೇಲೆ

ಪ್ರಬಂಧ ಬರೆದು ಅಲ್ಲಿನ ಪರಿಸರ ಹಾಗೂ ವ್ಯವಸ್ಥೆಯನ್ನು ಕುರಿತ ಅಂಶಗಳನ್ನು ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ಇಂಗ್ಲೆಂಡಿನಲ್ಲಿ ಪ್ರತಿಯೊಂದು ಹಳ್ಳಿಯಲ್ಲಿ ಕ್ರಿಕೆಟ್ ಗ್ರೌಂಡು ಹಾಗೂ ಚರ್ಚು ಇರುವಂತೆ. ನಮ್ಮ ದೇಶದಲ್ಲಿ ಸಾಂಪ್ರದಾಯಿಕ ಗುಡಿಗಳು ಇವೆ. ಹೊಟೇಲು ಎಂಬ ಆಧುನೀಕರ ಗುಡಿಗಳೂ ಇವೆ ಎಂದು, "ಒಳಗೆ ಬಾ ತಲುಬಿಗನೇ ಇಲ್ಲಿಹುದು ಹೋಟೇಲಲ್ಲಿ, ನಿನ್ನ ಜಿಹ್ವಾ ಚಾಪಲ್ಯವ ತಣಿಸುವ ಅಪ್ಸರೆಯ ಮಂದಿರ"[೪೩] ಎಂದು ಹೇಳುವ ಲೇಖಕರು ಹಳ್ಳಿಯ ಹೋಟೇಲುಗಳ ವರ್ಣನೆಯನ್ನು ಮಾಡುತ್ತಾರೆ. ಹಳ್ಳಿಯ ಹೊಟೇಲುಗಳೆಂದರೆ ಅದೊಂದು ಸಾರ್ವಜನಿಕರ ಕೂಟ, ರಸಿಕರ ಉಂಡಾಡಿಗಳ ನಿವಾಸ, ತರುಣರ ಕ್ಲಬ್ಬು, ಗೃಹಸ್ಥರ ವಿಶ್ರಾಮ ಗೃಹ, ವೃದ್ಧರ ಬಾಯಿಚಪಲ ತಣಿಸುವ ಅಕ್ಷಯ ಪಾತ್ರೆ, ಅನಕ್ಷರಸ್ಥರ ಪಾರ್ಲಿಮೆಂಟು, ಸರ್ವ ವಯಸ್ಸಿನ, ಸರ್ವ ಉದ್ಯೋಗದ ಸರ್ವಜಾತಿಗಳ ಜನರಲ್ಲಿ ಸಾಮರಸ್ಯ ಬೆಳೆಸುವ ಭಾವೈಕ್ಯತಾ ಮಂದಿರ, ಎಂಬ ಅರ್ಥದಲ್ಲಿ ಹಳ್ಳಿಯ ಪ್ರಾಕೃತಿಕ ಸೊಬಗಿನ ಮಧ್ಯೆ ಇರುವ ಇಂತಹ ಹೊಟೇಲುಗಳ ಪರಿಸರವನ್ನು ಜನ ಸಂಗ್ರಹ ತಾಣ ಎಂದು ಹೇಳುತ್ತಾ "ಹಳ್ಳಿಯ ಹೋಟೇಲುಗಳೆಂದರೆ, ಇಳಕಲ್ಲ ಸೀರೆ ಉಟ್ಟು, ಗುಳೇದ ಗುಡ್ಡದ ಕುಬಸತೊಟ್ಟ ಮೈಕೈಯಿಂದ ತುಂಬಿದ ಜವಾರಿ ಹೆಣ್ಣಿನಂತೆ"[೪೪] ಎಂದು ವರ್ಣಿಸುವ ಲೇಖಕರು ಹಳ್ಳಿಯ ಪರಿಸರದಲ್ಲಿನ ಸಾತ್ವಿಕ ಅನಂತತೆಯನ್ನು ಸೂಚ್ಯವಾಗಿ ಹೇಳಿದ್ದಾರೆ.

ಹಳ್ಳಿಯ ಹೊಟೇಲುಗಳಲ್ಲಿನ ಭೌತಿಕ ಪರಿಸರವನ್ನು ಹೇಳುತ್ತಾ, ಅಲ್ಲಿನ ಮುರುಕು ಬೆಂಚು, ಮೂರು ಕಾಲೀನ ಖುರ್ಚಿ, ಸಿನಿಮಾ ತಾರೆಯರ ಪೋಸ್ಟರ್‌ಗಳು, ಕರ್ಣಪಟಲ ಹರಿಯುವ ರೇಡಿಯೋ, ಸ್ಟಿರಿಯೋಗಳಿಂದ ಅಲ್ಲಿಯ ವಾತಾವರಣ ಕ್ಷುಲ್ಲಕವೆನಿಸಿದರೂ ಅವುಗಳೇ ರಂಜನೀಯ ಸ್ಥಳವಾಗಿ ಎಲ್ಲರನ್ನು ಆಕರ್ಷಿಸುವ ಕೇಂದ್ರಗಳಾಗಿವೆ. ಅದೇ ಪಟ್ಟಣದ ಹೋಟೇಲುಗಳಲ್ಲಿ ಭವ್ಯವಾದ ಕಟ್ಟಡ, ನಯವಾದ ನೆಲ, ಕೂಡಲು ಖುರ್ಚಿ, ತಂಪಾದ ಫ್ಯಾನ್, ಟೇಬಲ್ ಈ ಎಲ್ಲಾ ಇದೆ. ತರ ತರಹದ ತಿಂಡಿ ತಿನಿಸುಗಳಿವೆ. ಆದರೆ, ಅಲ್ಲಿನ ಹಸಿಬಿಸಿಯ ವಾತಾವರಣ, ನೂಕುನುಗ್ಗಲಿನ, ಗಲಭೆ, ಗಲೀಜುಗಳಿಂದ ಹಳ್ಳಿಯ ಹೋಟೇಲುಗಳಿಗಿಂತ ಇವು ಭಿನ್ನ ಎಂದು ಗುರುತಿಸಿದ್ದಾರೆ. ಹಳ್ಳಿಯ ಚಹಾ ಹೋಟೆಲುಗಳಲ್ಲಿ ಸಿಗುವ ಆತಿಥ್ಯವನ್ನು ಯಾವ ಹೆಂಡತಿ ಮಾಡದ ಉಪಚಾರವನ್ನು ಈ ಹೋಟೇಲುಗಳು ಮಾಡುತ್ತವೆ ಎಂದು ಹಳ್ಳಿಯ ಹೋಟೆಲುಗಳ ಸೇವಾ ಮನೋಭಾವವನ್ನು ಕೊಂಡಾಡಿದ್ದಾರೆ.

ಹಳ್ಳೀಯ ಜನರು ಚಹಾದಂಗಡಿಯ ಪರಮಭಕ್ತರು. ಅವರು ತಿನ್ನುವುದನ್ನೆ ಒಂದು ಜೀವನದ ಧ್ಯೇಯವಾಗಿ ಮಾಡಿಕೊಂಡಿದ್ದಾರೆ. ನಮ್ಮ ಗಳಿಕೆಯ ಹಣವನ್ನು ಇಂತಹ ಹೊಟೇಲುಗಳಲ್ಲಿ ತಿನ್ನುವುದಕ್ಕೆ ವ್ಯಯಮಾಡುವ ಜನರು ಆ ಪರಿಸರ ಈ ರೀತಿಯ ಅಭ್ಯಾಸವನ್ನು ರೂಢಿಸುತ್ತದೆ. ಈ ಹೋಟೇಲುಗಳನ್ನೇ

ಹರಟೆಯ ಅಡ್ಡೆಗಳಾಗಿ ಮಾಡಿಕೊಂಡು, ಅಲ್ಲಿ ಊರ ಪಟೇಲರು, ರಾಜಕೀಯ ಪುಡಾರಿಗಳು, ದಲ್ಲಾಳಿಗಳು, ಗ್ರಾಮಪಂಚಾಯ್ತಿ ಸದಸ್ಯರು, ಸರಪಂಚರು, ಶಾಲಾಶಿಕ್ಷಕರು ಮುಂತಾದ ಸೋಮಾರಿಗಳ ಸಮೂಹ ದಿನಕ್ಕೆ ೫-೬ ತಾಸು ಈ ಚಹಾ ಹೋಟೇಲ್ ನಲ್ಲಿ ಕಾಲಕಳೆದು ಅಲಸಿಗಳಾಗಿ ಊರಸುದ್ದಿಯನ್ನೆಲ್ಲಾ ಮಾತನಾಡುತ್ತಾರೆ. ಈ ಹೋಟೇಲುಗಳನ್ನೆ ಹಳ್ಳಿಯ ಪಾರ್ಲಿಮೆಂಟಾಗಿ ಮಾಡಿಕೊಂಡು ವಿವಿಧ ವಿಷಯಗಳ ಚರ್ಚೆ ನಡೆಸುತ್ತಾರೆ. ಇಂತಹ ಹೋಟೇಲುಗಳಲ್ಲಿ ನಾವು ಸಮೂಹ ಸಾಮಾರಸ್ಯದಿಂದ ಭಾವೈಕ್ಯತೆಯನ್ನು ಕಂಡರೂ, ಅವುಗಳು ಇಂದು, ಸೋಮಾರಿಗಳನ್ನು, ಅಲಸಿಗಳನ್ನು, ತಿಂಡಿ ಪೋತರನ್ನು, ಸೃಷ್ಟಿ ಮಾಡುವ ಕೇಂದ್ರಗಳಾಗಿವೆ ಎಂಬುದು ಸತ್ಯಕ್ಕೆ ಅಷ್ಟೇ ಹತ್ತಿರವಾದುದು ಎಂಬ ಅಂಶ ಗೋಚರವಾಗುತ್ತದೆ.

**ಗೃಹನ್ವೇಷಣೆ**

ಇಂದಿನ ಆಧುನಿಕ ಯಾಂತ್ರಿಕ ಬದುಕಿನಲ್ಲಿ ಪಟ್ಟಣದಂತಹ ದುಬಾರಿ ಪ್ರದೇಶದಲ್ಲಿ ಬಾಡಿಗೆ ಮನೆಯನ್ನು ದೊರಕಿಸಿಕೊಳ್ಳುವುದು ಎಷ್ಟು ಕಷ್ಟ, ಎಂಬುದನ್ನು ಹೇಳುವ ಈ ಪ್ರಬಂಧದಲ್ಲಿ ಇಂದಿನ ಬಾಡಿಗೆ ಮನೆಗಳ ವ್ಯವಸ್ಥೆ ಹಾಗೂ ಅಲ್ಲಿನ ಸುತ್ತಾಮುತ್ತಲಿನ ಪರಿಸರ ಹೇಗಿರುತ್ತದೆ ಎಂಬ ನೈಜ ಚಿತ್ರಣವನ್ನು ಈ ಪ್ರಬಂಧದಲ್ಲಿ ಕಾಣಬಹುದು.

ಇಂದಿನ ಕಾಲದಲ್ಲಿ ಪುಣ್ಯ ಇದ್ದರೆ ನೌಕರಿ ಪಡೆಯಬಹುದು. ದೊಡ್ಡ ಡಿಗ್ರಿ ಇದ್ದರೆ ಹೆಣ್ಣನ್ನು ಪಡೆಯಬಹುದು. ಆದರೆ ವಾಸಿಸಲು ಬಾಡಿಗೆ ಮನೆಯನ್ನು ಯಾರು ಸಹಜವಾಗಿ ಪಡೆಯಲು ಸಾಧ್ಯವಿಲ್ಲ ಎಂದು ಹೇಳುತ್ತಾ "ಸ್ವರ್ಗದಲ್ಲಿ ಒಂದು ಸೀಟನ್ನು ರಿಜರ್ವ ಮಾಡುವುದು ಸುಲಭ ಆದರೆ ಭೂಮಿಯ ಮೇಲೆ ಒಂದು ಮನೆಯನ್ನು ದೊರಕಿಸುವುದು ಕಠಿಣ"[೨೫] ಎಂದು ಹೇಳುವ ಲೇಖಕರ ಅಭಿಪ್ರಾಯದಿಂದ ಇಂದು ಬಾಡಿಗೆ ಮನೆಗಳ ಕೊರತೆ ಎಂತಹದು ಎಂಬ ಅಂಶ ವ್ಯಕ್ತವಾಗುತ್ತದೆ. ಈ ಹಿನ್ನಲೆಯಲ್ಲಿ ತಮ್ಮ ಅನುಭವವನ್ನು ಬೆರೆಸಿ, ಇಂದಿನ ಜನಸಂಖ್ಯಾ ಸ್ಫೋಟದಿಂದಾಗಿ ನಮ್ಮ ದೇಶದಲ್ಲಿ ದಿನದಿಂದ ದಿನಕ್ಕೆ ಜನಸಾಂದ್ರತೆ ಹೆಚ್ಚಾಗಿ ದುಡಿಮೆ ಹರಿಸಿ ಬರುವ ಜನರಿಗೆ ಆಶ್ರಯಿಸುವ ಮನೆಗಳ ಕೊರತೆ ಕಂಡು ಬರುತ್ತದೆ. ಅಂತಹ ಪ್ರಸಂಗವನ್ನು ಹೇಳುತ್ತಾ, ತಾವು ಬಾಡಿಗೆ ಮನೆ ಹುಡುಕುವಲ್ಲಿ ಅನುಭವಿಸಿದ ಕಷ್ಟಸುಖಗಳನ್ನು ಹಾಗೂ ಅಲ್ಲಿನ ಪರಿಸರದ ವ್ಯವಸ್ಥೆಯನ್ನು ಮನೋಜ್ಞವಾಗಿ ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ಉದ್ಯೋಗದ ಹಿನ್ನಲೆಯಿಂದ ಪಟ್ಟಣಕ್ಕೆ ವಲಸೆ ಬರುವ ಲೇಖಕರು ತಮ್ಮ ಪ್ರಾಧ್ಯಾಪಕ ಕರ್ತವ್ಯ ಮುಗಿಸಿ ಗೃಹಾನ್ವೇಷಕನಾಗಿ ದಿನಾಲು ಹೊರಡುವ ಸ್ಥಿತಿ ಬಂದಿದ್ದು, ಅದಕ್ಕಾಗಿ ವಿವಿಧ ಸಂಧಿಗೊಂದಿಗಳನ್ನು ನೋಡಿ ಗಟಾರ ಮೋರಿಗಳನ್ನು ದಾಟಿ, ಅಲ್ಲಿನ ಸೊಳ್ಳೆ-ತಿಗಣೆಗಳಿಂದ ಪಾರಾಗಿ ಮನೆಗಳನ್ನು ಹುಡುಕುವ ಕಷ್ಟ ಅಷ್ಟಿಷ್ಟಲ್ಲ. ಇಂತಹದರಲ್ಲೆ ಸಿಕ್ಕ ಮನೆಗಳು ಗಾಳಿಯಲುಗದ, ಸೂರ್ಯ ಪ್ರಕಾಶವೆಂದೂ

ಪ್ರವೇಶಿಸಿದ ಕಿಟಕಿಗಳಿಲ್ಲದ ಮನೆಗಳೇ ದೊರೆಯುತ್ತವೆ. ಇಂತಹ ಪ್ರಸಂಗಗಳು ಇಂದಿನ ನಗರಿಕರಣದ ಜನರ ಜೀವನ ಮೌಲ್ಯದ ಕುಸಿತದ ಅಂಶವನ್ನು ಪ್ರತಿಬಿಂಬಿಸುತ್ತದೆ. ಇಂತಹ ವಾಸ್ತವ ಅಂಶಗಳನ್ನು ಪ್ರಪಂಚದ ನೈಜ ಚಿತ್ರಣದ ಮೂಲಕ ಬಾಡಿಗೆ ಮನೆಗಳ ಪರಿಸರವನ್ನು ವ್ಯಕ್ತಪಡಿಸಿದ್ದಾರೆ.

ಪಟ್ಟಣದಂತಹ ಪ್ರದೇಶಗಳಲ್ಲಿ ಸೌಕರ್ಯಯುತ ಮನೆಗಳು ಬೇಕೆಂದರೆ ಅಲ್ಲಿನ ದುಬಾರಿ ಬಾಡಿಗೆಗೆ ಜನರು ಪಡುವ ಸಂಕಷ್ಟಗಳನ್ನು ಹೇಳುತ್ತಾ, ಹೊಟ್ಟೆಗೆ ಇಲ್ಲದಿದ್ದರೂ ಆಶ್ರಯಿಸಲು ಮನೆಗಳ ಹುಡುಕಾಟದಲ್ಲಿ ಸೋತು, ಇಂದು ಎಷ್ಟು ಜನ ಹಾದಿ ಬೀದಿಗಳಲ್ಲಿ ದಿನಗಳೆದ ಉದಾಹರಣೆಗಳಿವೆ. ಒಂದೊಂದು ಸಲ ಅಡ್ವಾನ್ಸ್ ಬಾಡಿಗೆ ಹಣ ನೀಡಿದರೂ ಮನೆಸಿಗದ ಪರಿಸ್ಥಿತಿ ಇದೆ. ಕೆಲವು ಸಿಕ್ಕಂತಹ ಮನೆಗಳಲ್ಲಿ ಮೂಲ ಸೌಕರ್ಯಗಳಿಲ್ಲದ ಹೊರಗಡೆನೇ ಎಲ್ಲಾ ಮಾಡಬೇಕಾದ ಪರಿಸ್ಥಿತಿ ಇದೆ. ಇಂತಹ ಪ್ರಸಂಗಗಳನ್ನು ಎದುರಿಸಿದ ಲೇಖಕರು, ಬಾಡಿಗೆ ಮನೆ ಹುಡುಕುವಿಕೆಯಲ್ಲಿ ತಮ್ಮ ಅಮೂಲ್ಯ ಸಮಯವನ್ನು, ಹಣವನ್ನು ಹಾಳು ಮಾಡಿಕೊಂಡು ಕೊನೆಗೂ ಸಿಕ್ಕ ಮನೆ ಚಿಕ್ಕ ಚಿಕ್ಕ ಕೋಣೆಗಳಿಂದ ಕೂಡಿದ ಕತ್ತಲೆ ಆವರಿಸಿರುವ, ಗಾಳಿಯ ಸುಳಿವಿಲ್ಲದ, ಮನೆ ಆಶ್ರಯಿಸಿ ರಾತ್ರಿಯೆಲ್ಲಾ ಸೊಳ್ಳೆ, ತಿಗಣೆಗಳಿಂದ ಬೇಸತ್ತು ಬೇರೆ ಮನೆ ಹುಡುಕುವ ಕಾರ್ಯ ಮುಂದುವರೆಸಿದರು, ಇಲ್ಲಿ ಇಂದಿನ ಜನ ಬಾಡಿಗೆ ಆಸೆಗಾಗಿ, ಸ್ಥಳದ ಕೊರತೆಯಿಂದ ಅವೈಜ್ಞಾನಿಕ ರೀತಿಯಲ್ಲಿ ಮನೆಯನ್ನು ಕಟ್ಟಿಸಿ ಬಾಡಿಗೆದಾರರು ಅನುಭವಿಸುವ ಕಷ್ಟನಷ್ಟಗಳೇನೆಂಬುದನ್ನು ಲೇಖಕರು ನೈಜ ಘಟನೆಗಳ ಮೂಲಕ ತೋರ್ಪಡಿಸಿದ್ದಾರೆ.

ಮಾನವ ಆಧುನಿಕತೆಯಿಂದ ಮುಂದುವರೆದಂತೆ, ತನ್ನ ಜೀವನ ಮಟ್ಟದಲ್ಲೂ ಸುಧಾರಣೆ ಕಾಣಲು ಬಯಸಿ, ವಲಸೆ ಬಂದು ನೆಲೆಸಲು ಒಂದು ಮನೆ ಕಂಡು ಕೊಳ್ಳುವಲ್ಲಿ ಎಷ್ಟು ಕಷ್ಟ ಎಂಬುದನ್ನು ಈ ಪ್ರಬಂಧದಲ್ಲಿ ಹೇಳಿದ್ದಾರೆ. ಹಾಗೇನೆ ಇಂದಿನ ಪಟ್ಟಣಗಳಲ್ಲಿನ ಮನೆಗಳು ಸದಾ ಬಾಗಿಲು ಮುಚ್ಚಿಕೊಂಡಿರುವುದು ಸಾಮಾಜಿಕವಾಗಿ ವ್ಯವಹಾರ ಶೂನ್ಯರಾಗಿರುವುದು, ನಗರಗಳ ಅಸಂಬದ್ಧತೆಯನ್ನು ತೋರಿಸುತ್ತದೆ. ಇಂತಹ ಸೂಕ್ಷ್ಮ ವಿಚಾರಗಳನ್ನು ವೀರೇಂದ್ರ ಸಿಂಪಿಯವರು ಈ ಪ್ರಬಂಧದ ಮೂಲಕ ವ್ಯಕ್ತಪಡಿಸಿದ್ದನ್ನು ಗುರುತಿಸಬಹುದು.

**ಖಾನಾವಳಿಗಳು**

ಆಧುನಿಕ ಜೀವನದ ಅಸ್ಥಿರತೆಯಲ್ಲಿ ಬದುಕುತಿರುವ ನಾವು ಕೆಲವು ಸಾಮಾಜಿಕ ಜೀವನದ ಆಯೋಮಯತೆಯಿಂದ ಹೋಟೇಲ್, ಲಾಡ್ಜ್, ಖಾನಾವಳಿಗಳಂತಹ ಸಂಸ್ಥೆಗಳ ಆಶ್ರಯ ಪಡೆದು ಜೀವನ ನಡೆಸಬೇಕಾದಂತಹ ಪರಿಸ್ಥಿತಿ ಇದೆ. ಇಂತಹ ಆಶ್ರಯ ತಾಣಗಳು ವಹಿಸುವ ಆತಿತ್ಯ, ಹಾಗೂ ಅಲ್ಲಿನ ಪರಿಸರವನ್ನು ವಿಶ್ಲೇಸುತ್ತಾ, ಜನತೆಯಲ್ಲಿ ವ್ಯತಿರಿಕ್ತ ಅನುಭಾವ ವರ್ತನೆಗಳಿಂದ ಇಂತಹ ಕೇಂದ್ರಗಳನ್ನು ಪರಿಭಾವಿಸುವ ರೀತಿಯನ್ನು ಈ ಪ್ರಬಂಧದಲ್ಲಿ ಕಾಣಬಹುದು.

ಇಂದಿನ ಆಧುನಿಕ ಐಷಾರಾಮಿ ಹೊಟೇಲುಗಳೆಂದರೆ ಅವು ಬಹುಮಹಡಿ ಕಟ್ಟಡಗಳಲ್ಲಿ ಸೊಗಸಾದ ರೂಮು, ಸುಗ್ರಾಸ ಭೋಜನ, ಸುಖವಾದ ಗಾಳಿ, ಇಂತಹ ಪರಿಸರಕ್ಕೆ ಸಂಸಾರದ ಜಂಜಾಟ ದಿಂದ, ಅಧಿಕಾರಿಗಳ ಶೋಷಣೆಗಳಿಂದ ಮುಕ್ತರಾಗಿ ಬಂದು ಕಾಲ ಕಳೆಯುವ ಇಂತಹ ತಾಣಗಳು ಸ್ವರ್ಗದ ತಂಗುಮನೆಗಳೆಂದು ವರ್ಣಿಸಿದ್ದಾರೆ. ಹಾಗೆ ಲಾಡ್ಜ್‌ಗಳು ಅಪರಿಚಿತರಾಗಿ ಊರಿಗೆ ಬರುವ ವ್ಯಕ್ತಿಗಳನ್ನು ಅತಿಥಿಗಳಂತೆ ಸ್ವೀಕರಿಸುವ ಸಂಸ್ಥೆಗಳು. ಇಂತಹ ಪರಿಸರದಲ್ಲಿ ದರ್ಜೆಗಳ ಮೇಲೆ ರೂಮುಗಳಿರುತ್ತರೆ. ಅಂತಹದರಲ್ಲಿ ಕಾಮನ್ ರೂಮುವೊಂದಕ್ಕೆ ಬಂದ ಲೇಖಕರು ಅಲ್ಲಿನ ವ್ಯವಸ್ಥೆಯನ್ನು ಕುರಿತು ಗುಂಗಾಡುಗಳ ಸುಮಧುರ ಸನ್ನಿವೇಶ, ತಗಣೆಗಳ ಮುತ್ತಿನ ಸುರಿಮಳೆ, ಸಹಬಾಂಧವರ ಗೊರಕೆಯ ಗದ್ದಲ, ಆಧುನಿಕ ತರುಣನ ಪ್ರೇಮ ಸಲ್ಲಾಪ. ಇಂತಹ ಗೊಂದಲದ ಗೂಡಾದ ಆ ಪರಿಸರ ನೋಡಲು ಭಾರತದ ವಿವಿಧ ಸಂಸ್ಕೃತಿಯ ಪ್ರತೀಕದಂತೆ ಕಂಡುಬಂದಿತು. ಅಲ್ಲಿ ಶ್ರೀಮಂತಿಕೆಯ ಅಟ್ಟಹಾಸವಿದೆ. ಬಡವರ ಅಸಾಹಯಕತೆ ಇದೆ. ವೃದ್ಧಾಪ್ಯದ ಕರಿಕರಾವಸ್ಥೆ, ತರುಣನ ಆರ್ಭಟ, ನಿರುದ್ಯೋಗಿಗಳ ದುರ್ದರತೆ, ಮರುಳಿನ ಹಳ್ಳಿಯ ಹುಂಬರೂ, ತುಂಬಿ ತುಳುಕುವ ಇಂತಹ ವಸತಿ ಗೃಹಗಳನ್ನು ಕಂಡು "ಇದು ಸಂಕ್ಷಿಪ್ತ ವಿಶ್ವ ಕಾಣ"[೬] ಎಂದಿದ್ದು ಸಮಂಜಸವೆನಿಸುತ್ತದೆ.

ಖಾನಾವಳಿಗಳು ಆಧುನಿಕ ಜೀವನದ ಅಸ್ಥಿರತೆಗೆ ಸಿಕ್ಕೂ ನಲುಗುವ ಜನರನ್ನು ಆಶ್ರಯಿಸುವ ತಾಣಗಳಾಗಿವೆ. ಇವುಗಳಿಗೆ ಕಲಿಯುಗದ ಅನ್ನದಾತರೆಂದು ಕರೆದು ಹಿಂದೆ ರಾಜಮಹಾರಾಜರು ನಿರ್ವಹಿಸುತ್ತಿದ್ದ ಅನ್ನ-ಛತ್ರದಂತಹ ಪುಣ್ಯಕಾರ್ಯವನ್ನು ಇಂದು ಖಾನಾವಳಿಗಳು ಬಂದ ಅತಿಥಿಗಳಿಗೆ ಪ್ರೀತಿಯ ಸ್ವಾಗತ ನೀಡಿ, ಅವರ ಹೊಟ್ಟೆಯನ್ನು ಮಾತಿನಲ್ಲೇ ತುಂಬಿಸುತ್ತಾರೆ. ಇವರ ಕೃತಕ ನಡಾವಳಿಕೆಯಿಂದ ನೀವು ಸ್ವಾತಂತ್ರರೆನಿಸಿದರೂ ಆ ಪರಿಸರದಲ್ಲಿ ಹಾಕಿದನ್ನೆ ತಿನ್ನಬೇಕೆಂಬುದು ನಿಯಮವಲ್ಲ. ಬೇಕಾದನ್ನ ಆರಿಸಿ ತಿನ್ನಬಹುದಾದ ಸ್ವಾತಂತ್ರ ಖಾನಾವಳಿಗಳು ಒದಗಿಸಿವೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಖಾನಾವಳಿಗಳು ಇಂದಿನ ಆಧುನಿಕ ಜಗತ್ತಿನ ಮುಖ್ಯಕೀಲವಾಗಿವೆ. ಇವು ಸ್ವರ್ಗದ ತಂಗು ಮನೆಗಳು ಎಂದು ಭೂಮಿಯ ಮೇಲಿನ ಸ್ವರ್ಗದಂತೆ ಕಂಗೊಳಿಸುವ ಇವುಗಳಲ್ಲಿ ರಾಷ್ಟ್ರೀಯ ಐಕ್ಯತೆ, ಬಂಧು-ಬಾಂಧತ್ವದ ಸಹಕಾರಿ ಮನೋಭಾವದಿಂದ ಏಕತೆಯ ಆದರ್ಶಗಳು ಇಂತಹ ಖಾನಾವಳಿಗಳಿಂದಲೇ ಸಾಧ್ಯ, ಎಂದು ಅವುಗಳ ಸೌಲಭ್ಯಕಾಂಕ್ಷೆ ಅಂಶಗಳಿಂದ ಖಾನಾವಳಿಗಳ ಕಾರ್ಯ ಶ್ರೇಷ್ಠವೆನಿಸಿದೆ. ಆದರೆ ಇಂದು ಖಾನವಳಿಗಳಿಗೆ ಸಂಕುಚಿತ ಮನೋಭಾವದ ಜನರು "ವೀರಶೈವ ಲಿಂಗಾಯತ ಖಾನಾವಳಿ, ಉಡುಪಿ ಬ್ರಾಹ್ಮಣರ ಹೊಟೇಲು, ಇಸ್ಲಾಮೀಯ ಹೊಟೇಲು, ಮರಾಠ ಖಾನಾವಳಿ ಎಂದು ಒಂದು ವರ್ಗದ ಮತಿಯ ಹೆಸರನ್ನು ಇಟ್ಟು ಜನರ ಭಾವೈಕ್ಯತೆಗೆ ಧಕ್ಕೆ ತರುವ ಹಾಗೂ ಸಾಮಾಜಿಕವಾಗಿ ವಿಂಗಡಿಸಿ ನೋಡುವ ಇಂತಹ ಕಾರ್ಯವನ್ನು ನಿಲ್ಲಿಸಿ, ತೀರ ಕ್ಷುಲ್ಲಕ ಮನಸ್ಸಿನ ವಿಚಾರಗಳನ್ನು ಅಲ್ಲಗಳೆದು, ಭಾವೈಕ್ಯತೆಯನ್ನು ಸಾರುವ ಕೆಲಸ ಮಾಡಬೇಕೆಂದು ಈ ಪ್ರಬಂಧದಲ್ಲಿ ಕರೆಕೊಟ್ಟಿದ್ದಾರೆ.

## ಕಿವುಡನ ಮಾಡಯ್ಯ ತಂದೆ

ಇಂದಿನ ಆಧುನಿಕ ಯಾಂತ್ರಿಕ ಬದುಕಿನೊಂಧಿಗೆ ಜೀವಿಸುತ್ತಿರುವ ನಾವು ದಿನದಿಂದ ದಿನಕ್ಕೆ ಆಡಂಬರ ಪ್ರಿಯರಾಗುತ್ತಿದ್ದೇವೆ. ಈ ಆಡಂಬರ, ಸಡಗರ, ಪ್ರದರ್ಶನದ ಭರದಲ್ಲಿ ಇಂದಿನ ಶ್ರೀಸಾಮಾನ್ಯ ಜನ ನಲುಗಿ ಹೋಗುವಂತ ಸಂದರ್ಭಗಳು ಸೃಷ್ಟಿಯಾಗಿವೆ. ಅಂತಹ ಆಡಂಬರಕ್ಕೆ ಬಳಸುವ ಸಾಧನಗಳಲ್ಲಿ ಲೌಡ್ ಸ್ಪೀಕರ್ ಸಹ ಒಂದು. ಇಂತಹ ಲೌಡ್ ಸ್ಪೀಕರ್ ಗಳಿಂದ "ನಾನು ನರಕದ ಬೆಂಕಿಯ ಸರೋವರದಲ್ಲಿ ಈಜಾಡಬಲ್ಲೆ, ಅಥವಾ ಬೆನ್ನ ಮೇಲೆ ಚಬಕಿಯ ಏಟುಗಳನ್ನು ಒಂದಿಷ್ಟು ತಾಳಿಕೊಳ್ಳಬಲ್ಲೆ. ಹೆಲ್ಮೆಟ್ ಇಲ್ಲದೆ ಲೈಟ್ ಇಲ್ಲದ ಸ್ಕೂಟರ್ ಹತ್ತಿ ಪೋಲಿಸ್ ಕೈಯಲ್ಲಿ ನಾಲ್ಕೆಂಟು ಒಡೆತಗಳನ್ನು ಪಡೆದು ಉತ್ಸಾಹ ಉಳಿಸಿಕೊಳ್ಳಬಲ್ಲೆ. ಆದರೆ, ಲೌಡ್ ಸ್ಪೀಕರ್‌ಗಳ ಕರ್ಕಶ ಧ್ವನಿಯನ್ನು ಮಾತ್ರ ಸಹಿಸಲಾರೆ"[೪೭] ಎಂದು ಅದರಿಂಧಾಗುವ ದುಷ್ಪರಿಣಾಮಗಳನ್ನು ವಿವಿಧ ಹಿಂಸೆಯ ನಿದರ್ಶನಗಳ ಮೂಲಕ ಹೇಳಿ, ಅವುಗಳಿಗಿಂತಲೂ ಅಗಾಧವಾದ ದುಷ್ಪರಿಣಾಮ ಈ ಲೌಡ್ ಸ್ಪೀಕರ್ ಗಳಿಂದ ಆಗುತ್ತದೆ ಎಂದು ಅದಕ್ಕೆ ಹಿಂದೆ ಬಸವಣ್ಣನವರು ಹೇಳಿದ್ದ 'ಕಿವುಡನ ಮಾಡಯ್ಯ ತಂದೆ' ಎಂಬುದನ್ನು ಲೇಖಕರು ಇಲ್ಲಿ ಯಾಂತ್ರಿಕ ಬದುಕಿನ ಕ್ಷುಲ್ಲತೆಗೆ ಅನ್ವಯಿಸಿ ಹೇಳಿದ್ದು ವಿಶೇಷವೆನಿಸಿದೆ.

ಇಂದು ನಾವೆಲ್ಲ ಆಡಂಬರ ಪ್ರಿಯರಾಗಿ ಸಾಲ ಮಾಡಿ ಮನೆ ಕಟ್ಟಿಸಿದರೂ ಉದ್ಘಾಟನೆಗೆ ಲೌಡಸ್ಪೀಕರ್ ಹಚ್ಚಿ ಮನೆ ಮಂದಿಯ ಶಾಂತಿಯನ್ನು, ಸುತ್ತಾಮುತ್ತಲಿನ ಪರಿಸರವನ್ನು ಹಾಳು ಮಾಡುವ ಕಾರ್ಯ ಮಾಡುತ್ತಿರುವುದನ್ನು ನೋಡಿದ್ದೇವೆ. ಹಾಗೇನೇ ಸಭೆ ಸಮಾರಂಭಗಳಲ್ಲಿ ಆಡಂಬರಕ್ಕೆ ಭಾಷಣ ಮಾಡುವ ಆಗಂತುಕರನ್ನು ನೋಡಿದ್ದೇವೆ. ಒಂದು ಸಣ್ಣ ಸೀಮಂತ ಕಾರ್ಯಕ್ಕೂ ಎರಡು ಮೈಲು ಕೇಳುವಷ್ಟು ಕರ್ಕಶ ಧ್ವನಿಯಿಂದ ಮೈಕ್ ಹಚ್ಚುವುದನ್ನು ನೋಡಿದ್ದೇವೆ. ಇಂತಹ ಲೌಡ್ ಸ್ಪೀಕರ್ ಗಳಿಂದ ಎಷ್ಟೋ ಸಲ ರಾತ್ರಿಯಿಡಿ ನಿದ್ದೆಗೆಟ್ಟು ಅನಾರೋಗ್ಯ ಸೃಷ್ಟಿಯಾದದ್ದು ಇದೆ. ಮಂಗಳ ಕಾರ್ಯದಲ್ಲಿ ಅಮಂಗಳವೆಂಬಂತೆ ಕರ್ಕಶ, ಸಾಹಿತ್ಯ, ನೃತ್ಯದ ಹಾಡುಗಳನ್ನು ಹಾಕಿ, ನಮ್ಮ ಸಾತ್ವಿಕ ಪರಿಸರವನ್ನು ಆಡಂಬರಗಳಿಂದ ಹಾಳು ಮಾಡುತ್ತಿರುವ ಉದ್ದಟ ಜನರನ್ನು ಟೀಕಿಸುತ್ತಾರೆ. ಹಾಗೇನೇ ಚುನಾವಣಾ ಸಂದರ್ಭದಲ್ಲಿ ಗಲ್ಲಿಗಲ್ಲಿಗಳಲ್ಲಿ ಈ ಧ್ವನಿ ವರ್ಧಕಗಳನ್ನು ಕಟ್ಟಿ ರಾಜಕಾರಣಿಗಳ ಕಿರುಚಾಟ, ಏರಾಟಗಳು ನಮ್ಮ ಏಕಾಂತತೆಯನ್ನು ಹಾಳು ಮಾಡುತ್ತವೆ. ಇಂತಹ ಅಂಶವನ್ನು ಹೇಳುತ್ತಾ, ಇವುಗಳೆಲ್ಲವುಗಳಿಂವ ಪಾರಾಗಲು ಕಿವುಡನಾಗಿರುವುದೇ ಲೇಸೆಂದು 'ಕಿವುಡನ ಮಾಡಯ್ಯ ತಂದೆ' ಎಂಬ ಶೀರ್ಷಿಕೆಯಲ್ಲಿ ಸಮಾಜದಲ್ಲಿನ ಜನರ ವರ್ತನೆಗೆ ಸೂಚ್ಯವಾದ ಪರಿಹಾರ ಕಂಡುಕೊಂಡಿದ್ದ ವಿಶೇಷವಾಗಿದೆ.

## ನಿದ್ರಾ ಪುರಾಣ ಒಂದು ಹಗರಣ

ಒಬ್ಬ ಮನುಷ್ಯ ಆರೋಗ್ಯವಂತನಾಗಿರಬೇಕಾದರೆ ಅವನಿಗೆ ಇಂತಿಷ್ಟು ನಿದ್ರೆಯ ಅವಶ್ಯಕತೆ ಇದ್ದೇ ಇದೆ. ಅಂತಹ ನಿದ್ರೆಯೂ ಕೆಲವು ಸಲ ಬಾರದೇ ಇರಬಹುದು. ಬೇಡದ ಸಮಯದಲ್ಲಿ ಬಂದು

ಕಾಡಬಹುದು. ಇಂತಹ ನಿದ್ರೆಯ ಬಗೆಗಿನ ಸಾಧಕ ಬಾಧಕಗಳನ್ನು ಹಾಸ್ಯಾತ್ಮಕವಾಗಿ ನಿದ್ರಾವಸ್ಥೆಯ ಪರಿಸರ ಎಂತಹದ್ದು ಎಂದು ಹೇಳುತ್ತಾ, ಲೇಖಕರು ತಮ್ಮ ನಿದ್ರೆಯ ಮೇಲೆ ನಿಯಂತ್ರಣವಿಲ್ಲದೆ ಅದಕ್ಕೆ ಸೋಲುವ ಬಗೆಯನ್ನು ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

"ಜಗತ್ತಿನಲ್ಲಿ ನನ್ನ ಕಡುವೈರಿಯಾರಾದರೂ ಇದ್ದರೆ ಅದು ನಿದ್ರೆಯೆಂದು"[೪೮] ಹೇಳುವ ಲೇಖಕರು ತಮ್ಮ ಬಾಲ್ಯದಲ್ಲಿ ಒಂದು ದಿನ ಸತತ ಹದಿನಾಲ್ಕು ಗಂಟೆ ನಿದ್ದೆ ಮಾಡಿ ಕುಂಭಕರ್ಣನ ಅಪರಾವತಾರ ವೆಂದು ಬಿಂಬಿಸಿಕೊಂಡಿದ್ದು, ಅವರ ನಿದ್ರೆಯ ಹಪಾಹಪಿ ಎಂತಹದ್ದು ಎಂಬ ಅರಿವು ಮೂಡುತ್ತದೆ. ಅದೇ ನಿದ್ದೆ ಇಂದು ಕ್ಷೌರಿಕನ ಸಿಂಹಾಸನದ ಮೇಲೆ ಕೂತಾಗಲೂ ಗಾಢ ನಿದ್ರೆ ಹತ್ತಿ ತಲೆ ತೂಗಿದ್ದನ್ನು ಹೇಳಿದ್ದಾರೆ. ಇಂತಹ ನಿದ್ರೆಗೆ ಅಲ್ಲಿನ ಪರಿಸರ, ಕ್ಷೌರಿತನ ತಲೆ ಅಲ್ಲಾಡಿಸುವಿಕೆಯೇ ಕಾರಣವೆಂದು ಹೇಳುತ್ತಾರೆ. ಇನ್ನು ಸೆಕೆಂಡ್ ಸೋ ಸಿನಿಮಾಕ್ಕೆ ಹೋದರೆ ಅಲ್ಲಿನ ತಂಪಾದ ವಾತಾವರಣ, ಅಲ್ಲಿನ ಸಂಗೀತ ಭರಿತ ಪ್ರೇಮಗೀತೆಗಳು ಜೋಗುಳದಂತೆ ತೂಗಿ ಗಾಢನಿದ್ರೆ ಆವರಿಸುತ್ತದೆ ಎಂದು ಆ ಮೂರು ತಾಸಿನ ಕಠಿಣ ಶಿಕ್ಷೆಯ ಸಿನಿಮಾ ತಮ್ಮ ನಿದ್ರಾಹೀನತೆಯನ್ನು ದೂರಮಾಡಿದೆ ಎಂದು ಹೊಗಳುತ್ತಾ ಸಿನಿಮಾ ಥೆಯಟರ್‌ಗಳ ಪರಿಸರ ನಿದ್ರೆಗೆ ದಾರಿ ಮಾಡಿಕೊಟ್ಟದ್ದನ್ನು, ಹಾಗೂ ಇಂದಿನ ನಿಸತ್ವ ಸಿನಿಮಾಗಳ ಬೇಸರಿಕೆ ಸಹ ನಿದ್ರೆಗೆ ಕಾರಣವೆಂದು ವಿಡಂಬನಾತ್ಮಕವಾಗಿ ವ್ಯಕ್ತಪಡಿಸಿದ್ದಾರೆ.

ಬಸ್ಸುಗಳು ಸಹ ಗಾಢ ನಿದ್ರೆಯ ತವರು ಮನೆ ಎಂದು ಹೇಳುವ ಲೇಖಕರು ಬಸ್ಸು ಚಲಿಸುವಾಗ ಜೋಗುಳದಂತೆ ತೂಗಿ, ಕಿಟಕಿಯಲ್ಲಿನ ತಂಪಾದ ಗಾಳಿ ನಿದ್ರೆಯನ್ನು ಆಮಂತ್ರಿಸಿ ಜೋರಾಗಿ ಗೊರಕೆ ಹೊಡೆಯುವಂತೆ ಮಾಡುವ ಆ ಪರಿಸರವನ್ನು ನೆನಪಿಸುತ್ತಾರೆ. ಎಷ್ಟೇ ಜನರ ಸದ್ದು-ಗದ್ದಲಗಳೀದ್ದರೂ ನಿದ್ರೆಗೆ ಯಾವ ಧಕ್ಕೆನೂ ಆಗದೆ ಮಲಗಿದ್ದ ಲೇಖಕರು, ಇಂದು ಮಧ್ಯೆ ರಾತ್ರಿಯವರೆಗೂ ನಿದ್ರೆ ಬರದೆ ನಿದ್ರಾಹೀನತೆಯಿಂದ ಬಳಲುತ್ತಿರುವುದಾಗಿ ಹೇಳುವಲ್ಲಿ ಇಂದಿನ ಯಾಂತ್ರಿಕ ಬದುಕಿನ ಸಂಕೀರ್ಣ ಜೀವನ ಪರಿಸರ ಎಂತಹದು ಎಂದು ಹೇಳಿದ್ದಾಗಿದೆ. ಹಾಗೇ ತಮ್ಮ ನಿದ್ರಾಹೀನತೆಗೆ ದೇವರಿಂದ ರಿಪವ್ಯಾನ್ ವಿಂಕಲನಂತೆ ಹದಿಮೂರು ವರ್ಷ ನಿದ್ರೆ ಕರುಣಿಸು ಎಂದು ವರಕೇಳುವುದಾಗಿ ಹೇಳುವ ಅವರು ನಿದ್ರೆಯ ಅವಶ್ಯಕತೆಯ ಬಗ್ಗೆ ಹಾಗೂ ಅದಕ್ಕೆ ಬೇಕಾದ ಸಾತ್ವಿಕ ಪರಿಸರವನ್ನು ದೇವರಿಂದ ಮತ್ತೆ ಪಡೆಯುವ ಹಂಬಲಿಕೆಯನ್ನು ಲೇಖಕರು ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ಹೀಗೆ ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳಲ್ಲಿ ಕೆಲವು ಸನ್ನಿವೇಶಗಳಲ್ಲಿನ ಪರಿಸರ, ತಾವು ಕಂಡ ಸ್ಥಳಗಳಲ್ಲಿನ ವೈಶಿಷ್ಟತೆಯನ್ನು ಈ ಪ್ರಬಂಧಗಳ ಮೂಲಕ ವ್ಯಕ್ತಪಡಿಸಿದ್ದಾರೆ.

### ೪.೩. ವಸ್ತು, ವ್ಯಕ್ತಿ, ಘಟನೆ ಆಧಾರಿತ

ವೀರೇಂದ್ರ ಸಿಂಪಿಯವರು ತಮ್ಮ ಲಲಿತ ಪ್ರಬಂಧಗಳಲ್ಲಿ ವಸ್ತು ಒಂದನ್ನು ಆಯ್ದುಕೊಂಡು ಅದನ್ನು ಅನುಭವ ಪ್ರಪಂಚದಿಂದ ರೂಪುಗೊಂಡಿರುವಂತೆ ಮಾಡಿ, ಕಲ್ಪನೆಯ ಕೈವಾಡದಿಂದ ತನ್ನ ಕಥನ

ಕೌಶಲ್ಯದ ಮೂಲಕ ಜೀವಕಳೆ ತುಂಬಿದ್ದಾರೆ. ಹಾಗೇನೇ ವ್ಯಕ್ತಿಯೊಬ್ಬರನ್ನು ಕೇಂದ್ರವಾಗಿರಿಸಿಕೊಂಡು ಆತ್ಮ ವಿವೇಚನೆ ಮೂಲಕ ಜೀವನವನ್ನು ಸೂಕ್ಷ್ಮವಾಗಿ ನೋಡಿ ಸಾಕ್ಷಿಭೂತವಾಗಿ ಚಿತ್ರಿಸುವ ಪ್ರಬಂಧಗಳು ಸಹ ಮೂಡಿಬಂದಿವೆ. ಹಾಗೇನೇ ಘಟನೆಯೊಂದರ ಪರಿಕಲ್ಪನೆಯನ್ನು ತಮ್ಮ ಲೋಕಾನುಭವದ ಮೂಲಕ ವಾಸ್ತವಿಕ ಬದುಕಿನ ವೈವಿಧ್ಯಮಯವಾದ ಚಿತ್ರಣ ಮೂಡಿಸಿರುವುದನ್ನು ಅವರ ಪ್ರಬಂಧಗಳಲ್ಲಿ ಕಾಣಬಹುದು. ಉದಾಹರಣೆಗೆ

**ಕಾಗದ ಚೂರು**

"ಕಾಗದ ಚೂರು ಎಂದೊಡನೇ ನಿಮ್ಮ ಚೂರಿಯಂತಹ ನಿರ್ಲಕ್ಷ್ಯತೆಯಿಂದ ಮುಂದೆ ಸಾಗಬೇಡಿ ಕಾಗದ ಚೂರಿನಲ್ಲಿ ಬ್ರಹ್ಮಾಂಡವಡಗಿದೆ."[೪೯] ಎಂದು ಹೇಳುವ ಲೇಖಕರು ಕಾಗದದ ಮಹತ್ವವನ್ನು ಹಾಗೂ ಅದರ ಉಪಯೋಗದಲ್ಲಿರುವ ಅಘಾದತೆಯನ್ನು ತಿಳಿಸುತ್ತಾರೆ. ತೀರ ಕ್ಷುಲ್ಲಕವೆನಿಸುವ ಇಂತಹ ವಸ್ತುವೊಂದರಲ್ಲಿ ಸಂಸ್ಕೃತಿಯ ಅನನ್ಯತೆಯನ್ನು ಕಾಣಬಹುದೆನ್ನುವ ರೀತಿಯಲ್ಲಿ ಕಾಗದದ ಬಗ್ಗೆ ಬರೆದಿದ್ದಾರೆ. ಕವಿಗೆ ಅಘಾದ ಸ್ಪೂರ್ತಿಯ ಚಿಲುಮೆಯಾಗಿ ಚಿತ್ರಕಾರನಿಗೆ ಕ್ಯಾನ್ ವಾಸ್ ಕೂಡ ಆಗಬಹುದಾದ ಸಾಧ್ಯತೆಯನ್ನು ಹಾಗೂ ಅದರ ಉಪಯುಕ್ತತೆ ಪಡೆದ ವ್ಯಕ್ತಿಯ ಅಂತರಂಗವನ್ನು ಬಹಿರಂಗವನ್ನಾಗಿ ಮಾಡುವ ಸಾಧನವಾಗಿ ಕಾಗದ ಚೂರು ಬಳಕೆಯಲ್ಲಿದೆ ಎಂಬ ವಿಚಾರವನ್ನು ಪ್ರಬಂಧದಲ್ಲಿ ಗುರುತಿಸಬಹುದು.

ಇಂದು ಒಂದು ಸಣ್ಣ ಕಾಗದ ಚೂರು ದೇಶದ ಆರ್ಥಿಕ ವ್ಯವಸ್ಥೆಯ ಹಣದ ಸಾಂಕೇತಿಕ ರೂಪವಾಗಿ ಬಳಕೆಯಲ್ಲಿದೆ. ಇಂತಹ ಒಂದು ಕಾಗದದಿಂದ ಏನೆಲ್ಲಾ ಪ್ರಯೋಜನ ಎಂಬುದನ್ನು ಸಾಂದರ್ಭಿಕ ವಿವರಗಳಿಂದ ಚರ್ಚೆಗೆ ಒಳಪಡಿಸಿರುವುದನ್ನು ಈ ಪ್ರಬಂಧದಲ್ಲಿ ಕಾಣಬಹುದು. ಲೇಖಕರು ತಾವು ಕಾಗದ ಭಕ್ಷಕನೆಂದು, ತಮಗಿರುವ ಓದುವ ಹುಚ್ಚಿಗೆ ಕಾಗದಗಳಲ್ಲಿನ ಎಲ್ಲಾ ಅಕ್ಷರಗಳನ್ನು ಬಿಡದೇ ಓದುವ ಇವರ ಮನೋಭಾವದಲ್ಲಿ ಸಮಾಜದ ಅಭಿಮುಖಿಕರಣದ ಕಾಳಜಿಯನ್ನು, ಹಾಗೂ ಓದುವಿಕೆಯ ಹವ್ಯಾಸವನ್ನು ಅದರಿಂದಾಗುವ ಜ್ಞಾನ ಸಂಗ್ರಹದಂತಹ ಗುಣಾತ್ಮಕ ಪ್ರಯೋಜನವನ್ನು ಪಡೆಯಬಹುದೆಂಬ ವಿಚಾರವನ್ನು ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ಜೇಬುಗಳೆಂದರೆ ಕೌತುಕದ ವಸ್ತುಗಳಿಂದ ತುಂಬಿದ ಆಗರ. ಅಂತಹ ಜೇಬಿನಲ್ಲಿ ಬರೀ ಕಾಗದಗಳನ್ನೇ ತುಂಬಿಕೊಂಡಿರುವ ಅಧಮರ ಜಾತಿಗೆ ತಾವು ಸೇರಿದವರು ಎಂದು ಲೇಖಕರು ಹೇಳಿಕೊಂಡಿದ್ದಾರೆ. ಜೇಬಿನಲ್ಲಿ ಗೆಳೆಯನೊಬ್ಬನ ಪತ್ರ ಇರಬಹುದು. ಪ್ರವಾಸ ಮಾಡಿದ ದಾಖಲೆಯೆಂಬಂತೆ ಟಿಕೆಟ್ ಗಳಿರಬಹುದು. ಯಾರಿಗೋ ಬರೆದ ಚೀಟಿ ಇರಬಹುದು. ಕ್ಲಾಸಿನಲ್ಲಿ ನೆನಪಿಗೆ ಮಾಡಿದ ಟಿಪ್ಪಣಿಗಳಿರ ಬಹುದು. ಇಂತಹ ವಸ್ತುಗಳಿಂದ ಜೇಬಿಗೆ ಭಾರವೆನಿಸಿದರೂ "ಜೇಬು ಭಾರವಾದಂತೆ ವ್ಯಕ್ತಿತ್ವ ಕೂಡ ಭಾರವಾಗುತ್ತದೆ."[೫೦] ಎನ್ನುವಲ್ಲಿ ಕಾಗದದ ಬಗೆಗಿನ ಕಾಳಜಿಯನ್ನು ಜೇಬಿನ ಮೂಲಕ

ವ್ಯಕ್ತಪಡಿಸಿದ್ದಾರೆ. ಹಾಗೇನೇ ಕಾಗದದ ನಿರ್ಲಕ್ಷತೆಯಿಂದ ಕೆಲವು ಸಕಾರಣಪೂರಿತ ವಿಷಯಗಳು ನಮ್ಮ ಕೈತಪ್ಪುಬಹುದೆಂಬ ಸೂಕ್ಷ್ಮ ವಿವೇಚನಾತ್ಮಕ ಅಂಶ ವ್ಯಕ್ತವಾಗಿದೆ.

ಕಾಗದ ಚೂರುಗಳ ನಿರ್ಲಕ್ಷತೆಯಿಂದ ಕೆಲವು ಸಲ ಪೇಚಾಟದ ಪ್ರಸಂಗಗಳು ಹೇಗೆ ಸೃಷ್ಟಿಯಾಗುತ್ತವೆ ಎಂದು ಹೇಳುತ್ತಾ, ತಾವು ಪ್ರಯಾಣಿಸಿ ಇಳಿದ ಸ್ಟೇಷನ್ನಿನಲ್ಲಿ ಜೇಬಿನಲ್ಲಿನ ಸಣ್ಣ ಟಿಕೇಟ್ ಸಿಗದೇ ಅದಕ್ಕೆ ತಪ್ಪುದಂಡ ಕಟ್ಟಿ ಅದರ ಹುಡುಕಾಟದಲ್ಲೇ ಮೈ ಮೇಲೆ ನೀರಿಳಿಸಿಕೊಂಡಿದ್ದು ಹಾಸ್ಯವೆನಿಸಿದರೂ ಆ ವಸ್ತುವಿನ ಅಗತ್ಯತೆಯ ಅರಿವಾಗುತ್ತದೆ. ಇಂತಹ ವಸ್ತು. ಶಿಕ್ಷಕ, ವಿದ್ಯಾರ್ಥಿ ಲೇಖಕರಿಗೆ ಆಧಾರ ಸ್ತಂಭ, ಶಿಕ್ಷಕರಿಗೆ ಕ್ಲಾಸಿನಲ್ಲಿ ಟಿಪ್ಪಣಿ ಮಾಡಲೋ, ವಿದ್ಯಾರ್ಥಿಗಳಿಗೆ ನೋಟ್ಸ್ ಬರೆಯಲೋ, ಇಲ್ಲ ಕಾಪಿಯೊಡೆಯಲೋ ಸಹಾಯಕವಾದರೆ ಲೇಖಕರಿಗೆ ಅವರ ವಿಚಾರಗಳನ್ನು ಬರೆದಿಡುವ ಮೂಲ ಆಧಾರವಾಗಿ ಕಾಗದ ಬಳಕೆಯಲ್ಲಿದೆ. ಇಂತಹ ಕಾಗದದ ಗುಟ್ಟನ್ನರಿಯದೆ ಗಾಂಧಿ, ಸೀಜರನಂತಹ ಮಹಾತ್ಮರೂ ಸೋತರು ಎಂದು ಹೇಳುವಲ್ಲಿ ಕಾಗದದ ದುರುಪಯೋಗದ ಮಾದರಿಯನ್ನು ಅವರು ತಿರಸ್ಕರಿಸಿದ್ದನ್ನು ಸೂಚ್ಯವಾಗಿ ಹೇಳಿದ್ದಾರೆ. ಕಾಗದ ಕವಿಗೆ ಅವನ ಬರಹಕ್ಕೆ ಮೂಲ ಸಾಧನವಾಗಿದೆ. ಇದರ ಮೂಲಕ ಕವಿಯಾದವನು ವಿಶ್ವದ ವಿರಾಟ್ ಸ್ವರೂಪವನ್ನು ತನ್ಮೂಲಕ ತೋರ್ಪಡಿಸುತ್ತಾನೆ. ಇಂತಹ ವಸ್ತು ಇಂದು ನಿರ್ಲಕ್ಷತೆಗೀಡಾಗಿ ಅದರ ಮಹತ್ವವನ್ನು ಅರಿಯದೇ ಅದನ್ನು ತುಚ್ಛವಾಗಿ ಕಾಣುವ ಜನರ ಮನೋಭಾವವನ್ನು, ಕಾಗದದ ಶ್ರೇಷ್ಠತೆ ಹಾಗೂ ಅದರ ಬಹುಪಯೋಗಿ ನೆಲೆಯ ಹಿನ್ನೆಲೆಯಲ್ಲಿ ಈ ಪ್ರಬಂಧದಲ್ಲಿ ವಿಷದಿಕರಿಸಲಾಗಿದೆ.

## ಜಡ್ಡಿನ ಜಾಪತ್ರಿ

ಮನುಷ್ಯನ ಜೀವನಕ್ಕೆ ಅನುಭವಗಳೇ ಆಧಾರ. ಇವೇ ಜೀವನದ ಸುಗಮತೆಗೆ ಹೊಸ ಮಾರ್ಗವನ್ನು ಕಂಡುಕೊಳ್ಳಲು ಸಹಾಯಕಗಳಾಗಿವೆ. ಇಂತಹ ಅನುಭವಗಳೇ ಕೆಲವು ಸಲ ಜೀವನದ ಉದಾತ್ತತೆಗೆ ಪ್ರೇರಕಗಳಾಗಿವೆ. ಇಂತಹ ಒಂದು ಘಟನೆಯ ಸನ್ನಿವೇಶದ ಅನುಭವವನ್ನು ಲೇಖಕರು 'ಜಡ್ಡಿನ ಜಾಪತ್ರಿ' ಎಂಬ ಪ್ರಬಂಧದಲ್ಲಿ ಅನಾರೋಗ್ಯದಿಂದಾಗುವ ಪ್ರಯೋಜನಗಳೇನು? ಇಂತಹ ಅನಾರೋಗ್ಯದ ಪರಿಸರದಲ್ಲಿನ ಮಾನವ ಸಂಬಂಧಗಳು ಹೇಗಿರುತ್ತವೆ? ಎಂಬುದನ್ನು ಹಾಸ್ಯಾತ್ಮಕವಾಗಿ ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ಜಡ್ಡು ಆರೋಗ್ಯದ ವೈರಿಯಾಗಿ ಮಾನವನನ್ನು ಜನ್ಮಾಂತರದಿಂದ ಹಿಂಬಾಲಿಸಿಕೊಂಡು ಬಂದಿದೆ. ಇಂತಹ ಜಡ್ಡನ್ನು ಲೇಖಕರು ವಿಷಯ ವಸ್ತುವಾಗಿ ತೆಗೆದುಕೊಂಡು ಅದರ ಅನಂತತೆಯನ್ನು ಪ್ರತಿಬಿಂಬಿಸುವ ಕಾರ್ಯ ಈ ಪ್ರಬಂಧದದಲ್ಲಿ ಮಾಡಿದ್ದಾರೆ. ನಾವಿನ್ನದ ನಾಗರಿಕನಾಗಬೇಕೆನ್ನುವ ಲೇಖಕರು ಜಡ್ಡನ್ನು ದೇವರಿಂದ ಪಡೆದ ವರವೆಂದು ಹೇಳಿ "ನಿನ್ನ ಜನನ ಮರಣಗಳ ನಡುವಿನ ಮಧ್ಯಂತರ ಜಡ್ಡಿನ ರಾಜ್ಯದಲ್ಲಿ ವಿಹರಿಸು"[10] ಎಂದು ದೇವರು ನೀಡಿದ ವರವನ್ನು ಶಿರಸಾ ವಹಿಸಿ ಪಾಲಿಸುವ ಲೇಖಕರು

ಒಮ್ಮೆ ತಾವು ಜಡ್ಡಿಗೆ ಬಲಿಯಾದ ಘಟನೆಯನ್ನು ಸ್ವಾರಸ್ಯಕರವಾಗಿ ಹೇಳಿದ್ದಾರೆ. ಡಾಕ್ಟರರನ್ನ ಹಾಸಿಗೆಯಲ್ಲೇ ಕಾಣುವ ಭಾಗ್ಯವನ್ನು ಪಡೆದ ಇವರು ಅವರ ಸಂಕಟವನ್ನು ನೋಡಿ ಹಿಗ್ಗಿ ಹೀರೆಕಾಯಿಯಾದೆ"[೫೨] ಎನ್ನುವಲ್ಲಿ ವ್ಯಂಗ್ಯಾತ್ಮಕ ಅಂಶಗಳು ಚೆಲ್ಲುಚೆಲ್ಲಾಗಿ ವ್ಯಕ್ತಪಡಿಸುತ್ತಾ ಹೋಗಿದ್ದಾರೆ. ಜಡ್ಡಿನ ಸಮಯದಲ್ಲಿ ಡಾಕ್ಟರರ ಪ್ರಾಣ ಸಂಕಟವನ್ನು ಕಾಣುವ ಭಾಗ್ಯದ ಜೊತೆಗೆ ಮನೆಯವರ ಅಪಾರ ಕರುಣೆ-ಪ್ರೀತಿ-ಅನುಕಂಪಗಳನ್ನು ಕಂಡು ಸಾವಿನ ಮುಖದಲ್ಲಿಯೂ ಜೀವಿಸಬೇಕೆನ್ನುವ ಚಿಲುಮೆ ಹುಟ್ಟಿಬಂದಿದ್ದನ್ನು ವ್ಯಕ್ತಪಡಿಸಿ, ಜಡ್ಡಿನ ಸಮಯದಲ್ಲಿ ಬಂಧುಬಾಂಧವರ ಕಾಳಜಿ, ಪ್ರೀತಿಯ ನೈಜತೆಯನ್ನು ನೋಡಬಹುದೆಂದು ಹೇಳಿದ್ದಾರೆ. ದಾವಾಖಾನೆ ದೇವಾಲಯದಂತೆ, ಡಾಕ್ಟರರು ಶಿವನ ಅವತಾರ, ಇಂಜೆಕ್ಷನ್ ತ್ರಿಶೂಲ, ಸ್ಟೆಥಾಸ್ಕೋಪ್ ಬುಸುಗುಡುವ ಹಾವು. ಔಷಧಿ ಕಪಾಟುಗಳು ಸುಡುಗಾಡಿನ ಬೂದಿ, ಎಂದು ಆಸ್ಪತ್ರೆಗಳಲ್ಲಿನ ಪರಿಸರವನ್ನು ಸೂಚ್ಯವಾಗಿ ವಿಡಂಬಿಸುತ್ತಾ "ಸುಡುಗಾಡು ಶಿವನ ತವರು ಮನೆಯಾದರೆ ಡಾಕ್ಟರರು ಸುಡುಗಾಡಿನ ಏಜೆಂಟರು"[೫೩] ಎಂದು ವ್ಯಂಗ್ಯವಾಗಿ ಆಸ್ಪತ್ರೆಗಳಲ್ಲಿ ನಡೆಯುವ ಚಟುವಟಿಕೆಗಳು ಕೇವಲ ದುಡ್ಡು ಮಾಡುವ ಉದ್ದೇಶದಿಂದಲೇ ರೂಪುಗೊಂಡಿದ್ದು, ಅಲ್ಲಿ ಮಾನವೀಯ ಗುಣವನ್ನು ಹಾಗೂ ಸೇವಾ ಮನೋಭಾವವನ್ನು ಮರೆತು ವ್ಯಾಪಾರಿಕರಣ ದೃಷ್ಟಿಯಿಂದ ನಡೆಸುವ ಇಂತಹ ಆಸ್ಪತ್ರೆಗಳನ್ನು ಹಾಗೂ ಡಾಕ್ಟರರನ್ನು ಈ ಮೂಲಕ ವಿಡಂಬಿಸಿದ್ದನ್ನು ಈ ಪ್ರಬಂಧದಲ್ಲಿ ಗುರುತಿಸಬಹುದಾಗಿದೆ.

ಮರೆವಿನ ಮೋಹದಲ್ಲಿ

ಮರೆವು ಮಾನವನ ಹುಟ್ಟು ಗುಣ, ಮರೆವಿಲ್ಲದ ಜೀವನವೇ ಇಲ್ಲ. ಕತ್ತಲೆಯಿಲ್ಲದೆ ಬೆಳಕಿಲ್ಲದಿರುವಂತೆ ಮರೆವು ಜೀವನದಲ್ಲಿ ಸಹ್ಯವಾಗಿ ಬೆರೆತುಕೊಂಡಿದೆ. ಇಂತಹ ಮರೆವು ಲೇಖಕರ ಜೀವನದೊಂದಿಗೆ ಅಂಟಿಕೊಂಡು ಬಂದು ಕೆಲವು ಕರ್ಕಶ, ಘಾಸಿಗೊಳಿಸುವಂತಹ ಕುಹಕ ವಿಚಾರಗಳಿಂದ ದೂರವಿರುವಂತೆ ಮಾಡಿದ್ದನ್ನು ನೆನಪಿಸುತ್ತಾ, ಅದರಿಂದಾಗುವು ಉಪಯೋಗವನ್ನು ಈ ಪ್ರಬಂಧದಲ್ಲಿ ಮನಗಾಣಿಸಿದ್ದಾರೆ.

ಮರೆವು ಮನುಷ್ಯನ ಉಸಿರಾಟದಷ್ಟೇ ಸುಲಭವಾಗಿದೆ. ಮನುಷ್ಯನ ಅಜ್ಞಾನ, ಅವಿವೇಕ ಅಹಂಕಾರದಿಂದ ಅರುವಿನ ಅಸ್ತಿತ್ವನ್ನು ಮರೆವು ಆಕ್ರಮಿಸುತ್ತದೆ. ಅದಕ್ಕೆ ಲೇಖಕರು "ಹಿಂದಿನ ಮರೆಯುವಿಕೆ ಮುಂದಿನ ಅಜ್ಞಾನಗಳ ನಡುವಿನ ಕತ್ತಲೆಯೇ ವರ್ತಮಾನ ಕಾಲ"[೫೪] ಎಂದು ಹೇಳಿದ್ದರಲ್ಲಿ ಮರೆವಿನ ಅಸ್ಥಿತ್ವದ ಅಗಾಧತೆಯನ್ನು ಪ್ರತಿಬಿಂಬಿಸಿದಂತಿದೆ. ಮಾನವ ತನ್ನ ಹುಟ್ಟಿನೊಂದಿಗೆ ಮರೆವನ್ನು ಜೊತೆಯಲ್ಲಿಯೇ ತರುತ್ತಾನೆ. ಇದು ದೇವರ ವರಪ್ರಧಾನವೆಂದು, ಮಾನವ ತನ್ನ ಅಭಿಷ್ಟೆ ಆಕಾಂಕ್ಷೆಗಳಿಂದ ಭೂಮಿಯಲ್ಲಿ ಬಾಳಬೇಕೆಂದು, ದೇವರು ಭೂವಲಯವನ್ನು ಸೃಷ್ಟಿಸಿದ್ದನಾದರೂ ಮರೆವಿನ ಮೋಹದಿಂದ

ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ತಮ್ಮ ಮರೆವಿನ ಕೃಪೆಗೆ ಪಾತ್ರರಾದವರಲ್ಲಿ ಲೇಖಕರು ಒಬ್ಬರು. ಇಂತಹ ಮರೆವಿನ ಪ್ರಸಂಗದ ನೈಜ ಘಟನೆಗಳನ್ನು ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ಲೇಖಕರು ತಮ್ಮ ಬಾಲ್ಯದ ನೆನಪಿನೊಂದಿಗೆ ಮರೆವಿನಿಂದಾದ ಘಟನೆಗಳನ್ನು ಹೇಳುತ್ತಾ, ಅದರಿಂದ ತಮ್ಮ ವ್ಯಕ್ತಿತ್ವದಲ್ಲಾದ ಬದಲಾವಣೆಗಳನ್ನು ಹೇಳಿದ್ದಾರೆ. ಮರೆವಿನಿಂದಾಗುವ ಪ್ರಯೋಜನಗಳನ್ನು ವ್ಯಕ್ತಪಡಿಸುವಲ್ಲಿ ಕೆಲವು ಗೋಮುಖ ವ್ಯಾಘ್ರರಂತಹ ಗೆಳೆಯರು ಬಾಯಲ್ಲಿ ಹಿತ ಬಯಸಿ ಒಳಗೆ ಅವರ ವ್ಯಂಗ್ಯ, ಕುಹಕ ಮಾತುಗಳಿಂದ ಮನಸ್ಸಿಗೆ ಘಾಸಿತನವನ್ನುಂಟು ಮಾಡುತ್ತಾರೆ. ಮರೆವಿಗೆ ಲಂಗು ಲಗಾಮು ಇಲ್ಲದೆ ಪ್ರೀತಿಗೆ ಪಾತ್ರವಾದ ವಸ್ತುವೊಂದನ್ನು ಬಿಟ್ಟು, ಉಳಿದ ವಿಷಯಗಳನ್ನು ಆಕ್ರಮಿಸಿ ಕೊಳ್ಳುವ, "ಮರೆವು ಚಂಚಲ ಮರದ ಶಿಶುವೆಂದು" ಹೇಳುತ್ತದೆ. ಅದಕ್ಕೆ ಮರೆವಿಗೆ ಚಂಚಲತೆಯೇ ಕಾರಣವೆಂದು ಹೇಳುವಲ್ಲಿ ಸತ್ಯಾಂಶವಿದೆ. ಇಂತಹ ಮರೆವು ರಾಜಗಾಂಭೀರ್ಯದ ಗುಣಗಳಲ್ಲಿ ಒಂದೆಂದು ಹೇಳುವ ಲೇಖಕರು ಉಪೇಕ್ಷೆ, ಮೈಗಳ್ಳತನ ಇವೆಲ್ಲಾ ರಾಜಕುಟುಂಬದ ಅಣ್ಣತಮ್ಮಂದಿರಂತೆ ಜೊತೆಯಲ್ಲಿರುತ್ತವೆ. ಇಂತಹ ಮರೆವಿನಿಂದ ಮನಸ್ಸಿಗೆ ಘಾಸಿತನವನ್ನು ಹೋಗಲಾಡಿಸುವ ಶಕ್ತಿ ಒದಗಿಬರುತ್ತದೆ. ಎಂದು ಹೇಳಿದರಲ್ಲಿ ಸತ್ಯಾಂಶವಿದೆ.

ಮನುಷ್ಯ ತನ್ನ ಮರೆವಿನಿಂದ ಅನುಭವಿಸುವ ತೊಂದರೆಗಳನ್ನು ಕೆಲವು ನಿದರ್ಶನಗಳ ಮೂಲಕ ವ್ಯಕ್ತಪಡಿಸಿದ್ದಾರೆ. ವ್ಯಕ್ತಿಯೊಬ್ಬ ಪತ್ರ ಬರೆಯಲು ಪೋಸ್ಟ್ ಆಫೀಸಿಗೆ ಹೋಗಿ ಅಂದು ಭಾನುವಾರವೆಂದು ತಿಳಿದು, ಕೆಲವು ದಿನಗಳ ಬಳಿಕ ಪತ್ರವೊಂದನ್ನು ತೆಗೆದುಕೊಂಡು ನಾಳೆ ಬರೆದರಾಯ್ತು ಎನ್ನುವ ಅವನ ನೂರ್ಕೋಟಿ ನಿನ್ನೆಗಳ ಜೊತೆ ಒಂದಾಗಿ ಹೋದಾಗ, ಒಂದು ದಿನ ಪತ್ರಬರೆದು ಪೋಸ್ಟ ಮಾಡಿ ಅದಕ್ಕೆ ಅಡ್ರಸ್ಸೇ ಬರೆಯದಿದ್ದದು ನೆನಪಿಸಿಕೊಂಡು ಚಿಂತಿಸಿದ್ದು ಮರೆವಿನಿಂದಾದ ವಿಫಲ ಪ್ರಯತ್ನತೆಯನ್ನು ತೋರಿಸುತ್ತದೆ. ಹಾಗೇನೇ ಪರೀಕ್ಷೆ ಬರೆಯಲು ಹೊರಟ ವಿದ್ಯಾರ್ಥಿ, ಸಿನಿಮಾ ಪೋಸ್ಟರ್ ನೋಡಿ ಸಿನಿಮಾಕ್ಕೋ, ಕಾಯಿಪಲ್ಲೆ ತರಲು ಬಂದವನು ಕ್ರಿಕೇಟ್ ಕಾಮೆಂಟರಿ ಕೇಳುತ್ತಾ, ಇದ್ದ ದುಡ್ಡನ್ನೆಲ್ಲಾ ತಿಂಡಿ ಕಾಫಿಗೆ ಖರ್ಚು ಮಾಡಿಕೊಂಡು ಮನೆಗೆ ಬಂದಾಗ ಪೆಂಡತಿಯ ಬೈಗುಳಗಳ ರಾಶಿಯ ಮೇಲೆ ಮಲಗುವ ಪ್ರಸಂಗ, ಇಂತಹ ಸನ್ನಿವೇಶಗಳು ಮಾನವನ ಜೀವನದಲ್ಲಿ ಸಾಕಷ್ಟು ಆಗಿ ಹೋಗಿವೆ. ಮರೆವಿನಿಂದ ಕೆಲವು ಸಹ ಚಪಲ ಸಂಚಾರಿಗಳಾಗಿ ಸಂದಿಗೊಂದಿಗಳನ್ನು ತಿರುಗುವ ಸನ್ನಿವೇಶಗಳನ್ನು ಹೇಳಿದ್ದರಲ್ಲಿ ಮರೆವು ಎಂಬ ವಸ್ತುವಿನ ಅಗಾಧತೆ ಅರಿವಾಗುತ್ತದೆ. ಅದೇ ರೀತಿ ಮರೆವಿನಿಂದ ಎಷ್ಟೇ ತೊಂದರೆ ಅನಾಹುತಗಳಾದರೂ, ಕುಹಕ ಚುಚ್ಚು, ವ್ಯಂಗ್ಯ ನುಡಿಗಳಂತಹ ಮನಸ್ಸಿನ ಘಾಸಿತನಕ್ಕೆ ಮಾರಕವಾಗುವ ಅಂಶಗಳಿಂದ ದೂರವಿರುವಂತೆ ಮಾಡಿ ಮನಸ್ಸಿನ ವೈಶಾಲ್ಯತೆಯನ್ನು ಬೆಳೆಸುವ ಮರೆವಿನ ಮಹಿಮೆಯನ್ನು ಈ ಪ್ರಬಂಧದಲ್ಲಿ ಮನೋಜ್ಞನವಾಗಿ ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

## ಬಸ್ಸು ಪ್ರಯಾಣದ ಸುಖ ದುಃಖಗಳು

ಇಂದು ನಾವು ದಿನದಿಂದ ದಿನಕ್ಕೆ ಆಧುನೀಕರಣದ ಮೋಜಿಗೆ ಒಳಗಾಗಿ ಐಷಾರಾಮಿ ಜೀವನ ಸಾಗಿಸುತ್ತಿದ್ದೇವೆ. ದಿನನಿತ್ಯದ ವ್ಯವಹಾರಕ್ಕಾಗಿ ಸಂಪರ್ಕ ಮಾಧ್ಯಮಗಳನ್ನು ಸೃಷ್ಟಿಸಿಕೊಂಡಿದ್ದೇವೆ. ಜೊತೆಗೆ ನಮ್ಮ ಸರಕು ಸಾಗಾಟಕ್ಕೆ ಸಾರಿಗೆಯ ವ್ಯವಸ್ಥೆ ಕಂಡುಕೊಂಡಿದ್ದೇವೆ. ಇಂತಹ ಮಾನವ ಸರಕುಗಳನ್ನು ಸಾಗಿಸುವ ಬಸ್ಸುಗಳಲ್ಲಿನ ಪ್ರಯಾಣ ಎಂತಹದು. ಅಲ್ಲಿನ ಸನ್ನಿವೇಶಗಳ ಸಾಂದರ್ಭಿಕ ಚಿತ್ರಣ, ವ್ಯವಹಾರಿಕ ಮಾದರಿಯ ಜೀವನವನ್ನು ಹಾಸ್ಯ ವಿಡಂಬನೆಯೊಂದಿಗೆ ಈ ಪ್ರಬಂಧದಲ್ಲಿ ಮೂಡಿ ಬಂದಿದ್ದನ್ನು ಗುರುತಿಸಬಹುದು.

ಪ್ರವಾಸವನ್ನು ಅಲ್ಲಗಳೆಯುವ ಲೇಖಕರು ಬಸ್ಸುಗಳು ತಮಗೆ ಎಷ್ಟು ಪ್ರಿಯವಾದವು ಎಂದು ಹೇಳುತ್ತಾ ರೈಲಿನ ಪ್ರಯಾಣವನ್ನು ಅಲ್ಲಗಳೆಯುತ್ತಾರೆ. ಅದಕ್ಕೆ ಕಾರಣ ರೈಲಿನ ಹೊಗೆ, ರಾಕ್ಷಸ ಆಕಾರ, ಶತಪಥ ಮಾಡುವ ಸ್ಟೇಷನ್ ಮಾಸ್ಟರ್, ಅಪಾರ ಜನಜಂಗುಳಿ, ವೇಗ, ಇಂತಹ ವಾತಾವರಣದಿಂದ ತಾವು ಜಿಗುಪ್ಸೆ ಹೊಂದಿದ್ದು, ಅದರಲ್ಲಿನ ಪ್ರಯಾಣ ನೆಮ್ಮದಿ ತಂದಿಲ್ಲವೆಂದು ಅದಕ್ಕೆ ಅದರ ಶಬ್ದ, ಗಜಿಬಿಜಿಯ ಜನ ಸಂದಣಿ ಕಾರಣವೆಂದು ಹೇಳಿದ್ದಾರೆ. ಎಲ್ಲೆಂದರಲ್ಲಿ ಮುಸುರೆ, ಬಾಳೆ ಸಿಪ್ಪೆಯಂತಹ ಕಸದ ತೊಟ್ಟಿಯಾಗಿ ಕಾಣುವ ಪ್ಯಾಸೆಂಜರ್ ರೈಲುಗಳನ್ನು ಕುರಿತು, ಮೂಗು ಇದ್ದವರು ಪ್ರವಾಸ ಮಾಡಬೇಕು" ಎಂದು ಹೇಳಿದ್ದರಲ್ಲಿ! ರೈಲಿನ ಅವ್ಯವಸ್ಥೆಯ ಅರಿವು ಮೂಡುತ್ತದೆ. ಇಂತಹ ರೈಲನ್ನು ಅಲಕ್ಷಿಸಿ ಬಸ್ಸು ಪ್ರಯಾಣವನ್ನು ಮೆಚ್ಚುವ ಲೇಖಕರು. ಅಲ್ಲಿನ ಸೌಖ್ಯ, ಅಚ್ಚುಕಟ್ಟುತನ, ಡ್ರೈವರ್, ಕಂಡಕ್ಟರ್‌ರ ಸಾಮೀಪ್ಯ, ಇಂತಹ ಪರಿಸರದಿಂದ ಮಾನವೀಯ ಸಂಬಂಧಗಳು ಗಟ್ಟಿಗೊಳ್ಳುತ್ತವೆ. ಜನರ ಜೀವ ರಕ್ಷಕನಂತೆ ಡ್ರೈವರ್ ನು ಕಾರ್ಯ ನಿರ್ವಹಿಸುತ್ತಾನೆ. ಅದೇ ರೀತಿ ಕಂಡಕ್ಟರ್ ಬಸ್ಸಿನ ಜನರ ಬಾಂಧವ್ಯವನ್ನು ಕಾಪಾಡುತ್ತಾನೆ. ನಾನಾ ಸಂಸ್ಕೃತಿ ಜನರ ಸಂಕ್ಷಿಪ್ತ ವಿಶ್ವದಂತೆ ಕಂಗೊಳಿಸುವ ಬಸ್ಸುಗಳಲ್ಲಿನ ಪರಿಸರವನ್ನು ಕುರಿತು ಮನೋಜ್ಞನವಾಗಿ ವ್ಯಕ್ತಪಡಿಸಿದ್ದಾರೆ.

ಬಸ್ಸು ಪ್ರಯಾಣದ ಸುಖವನ್ನು ಅನುಭವಿಸಬೇಕಾದರೆ, ಬಸ್ಸಿಗಾಗಿ ರಣಗುಡುವ ಬಿಸಿಲಿನಲ್ಲಿ ಕಾದು ಕಾದು ಕೊನೆಗೆ ಬರುವ ಬಸ್ಸೊಳಗೆ ನುಗ್ಗುವ ಜನರ ತಿಕ್ಕಾಟ, ಗುದ್ದಾಟ, ಚೀರಾಟ, ಹೋರಾಟಗಳು ನಡೆದು ಅನಾಹುತ ಸಂಬಂಧಿಸಿದರೂ ಇಂತಹ ವಾತಾವರಣವೇ ಅಚ್ಚುಮೆಚ್ಚು ಎನ್ನುತ್ತಾರೆ. ಅಲ್ಲಿನ ಜನರ ವರ್ತನೆಗಳು ಯಾವ ರೀತಿಯಾಗಿರುತ್ತವೆ ಎಂದು ಹೇಳುತ್ತಾ ಕಂಡಕ್ಟರ್ ಪದೇ ಪದೇ ಜನರ ತಲೆಗಳನ್ನು ಎಣಿಸಿ ಟಿಕೆಟ್ ತೆಗೆದುಕೊಳ್ಳದ ಪ್ರಯಾಣಿಕ ಕಳ್ಳರನ್ನು ಹಿಡಿಯುವುದು, ಸಹ ಪ್ರಯಾಣಿಕನೊಬ್ಬ ನಮ್ಮಲ್ಲಿನ ಪತ್ರಿಕೆಯನ್ನು ನಯವಾಗಿ ಕಿತ್ತುಕೊಂಡು ಕೊನೆಗೆ ನಮಗೆ ಆ ಸೀಟಿನಲ್ಲಿ ಅಸ್ತಿತ್ವವಿಲ್ಲದಂತೆ ಮಾಡುವುದು, ತಮ್ಮ ಲಗೇಜುಗಳ ಟ್ರಂಕೊಂದು ಬಸ್ಸಿನ ಜನರ ತುಳಿದಾಟಕ್ಕೆ ನಗ್ಗಿ ನುಗ್ಗೆಕಾಯಿ ಆಗಿದ್ದು, ಇಂತಹ ಪ್ರಸಂಗಗಳನ್ನು ಹೇಳುವಲ್ಲಿ ಹಾಸ್ಯ ವ್ಯಕ್ತವಾದರೂ ಅಲ್ಲಿನ ಪರಿಸರದ ನೈಜತೆಯನ್ನು ಎತ್ತಿ

ತೋರಿಸಿದಂತೆ. ಇಂದು ಜನಸಂಖ್ಯಾ ಸ್ಫೋಟದಿಂದ ಜನರ ಜೀವನ ಮಟ್ಟದ ವಸ್ತುಸ್ಥಿತಿ ಎಂತಹದ್ದು ಎಂಬ ಪರಿಕಲ್ಪನೆ ಮೂಡಿಬಂದಿದೆ.

ಬಸ್ಸು ಪ್ರಯಾಣದ ಸುಖದ ಜೊತೆಗೆ ಅದರಲ್ಲಿನ ದುಃಖದ ಪ್ರಸಂಗಗಳನ್ನು ಈ ಪ್ರಬಂಧದಲ್ಲಿ ಹೇಳಿದ್ದಾರೆ. ಒಮ್ಮೆ ಬಸ್ಸಿಳಿದು ಚಹಾ ಕುಡಿಯಲು ಹೋಗಿ ಸಾಲಾಗಿ ನಿಂತ ಬಸ್ಸೊಂದರಲ್ಲಿ ಕುಳಿತು ಟಿಕೆಟು ತೆಗೆದುಕೊಂಡು ಮತ್ತೆ ತಾವು ಬಂದಿದ್ದ ಊರಿಗೆ ವಾಪಾಸು ಬಂದಿದ್ದು ಎಂದು ತಿಳಿದು ಜನರ ಅಪಹಾಸ್ಯಕ್ಕೆ ಗುರಿಯಾಗಿ ಹೀರೋ ಆಗಿದ್ದ ಇವರು ಜೀರೋ ಆಗಿದ್ದನ್ನು ಹೇಳುವಲ್ಲಿ ಹಾಸ್ಯ ವ್ಯಕ್ತವಾಗಿದೆ. ಅದೇ ರೀತಿ ಲಾರಿಯೊಂದರಲ್ಲಿ ರಾತ್ರಿ ಪ್ರಯಾಣಿಸುವಾಗ ಆ ಲಾರಿಯ ಡ್ರೈವರನ ಕಾಕ ದೃಷ್ಟಿಗೆ ಹೆದರಿ ಹಣದ ಆಸೆಗೆ ಏನಾದರೂ ಮಾಡಬಹುದೆಂಬ ಅಂಜಿಕೆ ಆತುರದ ಆಲೋಚನೆಗಳಿಂದ ಭಯಗೊಂಡು ನಡುಗಿದ್ದನ್ನು ಹೇಳಿದ್ದಾರೆ. ಇಲ್ಲಿ ಹಾಸ್ಯವೆನಿಸಿದರೂ ಜನರ ಜೀವನದಲ್ಲಿ ಬಸ್ಸಿನ ಪ್ರಯಾಣದಿಂದಾಗುವ ಸಾಧಕ ಬಾಧಕಗಳನ್ನು ಈ ಪ್ರಬಂಧದ ಮೂಲಕ ವಿಶದಪಡಿಸಿದ್ದನ್ನು ಗುರುತಿಸಬಹುದು.

**ಸತ್ಯಾಗ್ರಹಗಳು**

ಇಂದು ನಮ್ಮ ದೇಶದಲ್ಲಿ ತೀರಾ ಸಾಮಾನ್ಯವಾಗಿರುವ ಹರತಾಳ, ಸಂಪು, ಸತ್ಯಾಗ್ರಹಗಳು ದಿನನಿತ್ಯ ನಡೆದೇ ಇರುತ್ತವೆ. ಇಂತಹ ಸತ್ಯಾಗ್ರಹಗಳ ಸ್ವರೂಪ ಹಾಗೂ ಅವುಗಳ ಚಟುವಟಿಕೆಗಳು ಯಾವ ರೀತಿಯಾಗಿರುತ್ತವೆ? ಸತ್ಯಾಗ್ರಹದ ಮೂಲ ಆಶಯವೇನು? ಎಂಬುದನ್ನು ವಿವಿಧ ಘಟನೆಗಳನ್ನು ಆಧರಿಸಿ ತಮ್ಮ ಅನುಭವದ ನೆಲೆಯ ಮೇಲೆ ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ಸತ್ಯಾಗ್ರಹವೆಂಬುದು ಒಂದು ಸಾತ್ವಿಕ ಹೋರಾಟ. ಇಂತಹ ಹೋರಾಟವಿಂದು ತನ್ನ ಸ್ವರೂಪವನ್ನು ಬದಲಾಯಿಸಿಕೊಂಡಿದ್ದು ವಿಪರ್ಯಾಸ. ನಮ್ಮ ಮನೆಯೆಂಬ ಸಾಮಾಜಿಕ ಸಂಸ್ಥೆಯಲ್ಲಿ ವಾಸಿಸುವ ಬಂಧುಬಾಂಧವರಲ್ಲಿಯೂ ಸಹ ನಾವು ದಿನನಿತ್ಯ ಸತ್ಯಗ್ರಹದ ಛಾಯೆಗಳನ್ನು ಕಾಣಬಹುದೆಂದು ತಮ್ಮ ಮನೆಯ ಪರಿಸರದ ಘಟನೆಗಳನ್ನು ಹೇಳಿದ್ದಾರೆ. ತಾವು ಬೆಳಗಾದರೂ ನಿದ್ರೆ ಮಂಪರಿನಲ್ಲಿ ಮಲಗಿರುವುದನ್ನು ಕಂಡ ತಂದೆಯವರು ಬೈಯುವುದು, ತಾಯಿ ಮೌನವಾಗಿ ಆಕಳ ಹಾಲು ಹಿಂಡುತ್ತಿರುವಾಗ ಆಕಳು ಜೋರಾಗಿ ಪಾತ್ರೆಯನ್ನು ಒದ್ದುದ್ದಕ್ಕೆ ಹಾಲೆಲ್ಲಾ ನೆಲದ ಪಾಲಾಗಿ ತಾಯಿ ಸಿಟ್ಟಿಗೇಳುವುದು, ಶಾಲೆಗೆ ಹೋಗದೆ ತಂಗಿಯೊಬ್ಬಳು ಬಟ್ಟೆ ಇಲ್ಲವೆಂದು ಮೂಲೆಗೆ ಕುಳಿತುಕೊಳ್ಳುವುದು, ತಮ್ಮನೊಬ್ಬ ಏನೋ ಬೇಡಿ ನೆಲದ ಮೇಲೆ ಬಿದ್ದು ಹೊರಳಾಡಿದ್ದು, ಇಂತಹ ಪ್ರಸಂಗಗಳಲ್ಲಿ ಸಹ ಒಂದಿಲ್ಲೊಂದು ಬೇಡಿಕೆ ಇದ್ದೆ ಇರುತ್ತದೆ ಎಂದು ನಮ್ಮ ಮನೆಯೂ ಸತ್ಯಾಗ್ರಹದಿಂದ ಹೊರತಾಗಿಲ್ಲ ಎಂಬ ಮಾತು. ಸತ್ಯಾಗ್ರಹದ ವೈಶಾಲ್ಯತೆಯನ್ನು ತೋರಿಸುತ್ತದೆ.

ಸತ್ಯಾಗ್ರಹಗಳು ನಮ್ಮ ಹಕ್ಕು ಬಾಧ್ಯತೆಗಳನ್ನು ಪಡೆಯಲು ಹಾಗೂ ಅಧಿಕಾರಿಗಳನ್ನು ಎಚ್ಚರಿಸುವ ವಿಧಾನ. ಆದರೆ ಇಂದು ಇದು ಆಗ್ರಹವಾಗಿ ತನ್ನ ಮೂಲ ಸ್ವರೂಪವನ್ನು ಬದಲಾಯಿಸಿಕೊಂಡಿದೆ. ಅಂದು "ಮಹಾತ್ಮಾಗಾಂಧಿಯವರು ಕೈಗೊಂಡ ಉಪವಾಸ ಸತ್ಯಾಗ್ರಹಗಳು ಆತ್ಮ ಶುದ್ಧಿಗಾಗಿಯೇ ಹೊರತು ಪ್ರಚಾರಕ್ಕಾಗಿ ಇರಲಿಲ್ಲ"[೫೭] ಎಂಬ ಲೇಖಕರ ಹೇಳಿಕೆ ಸತ್ಯನಿಷ್ಠವಾದುದು. ಇಂದಿನ ಸತ್ಯಾಗ್ರಹಗಳು ಪ್ರಚಾರ, ಆಡಂಬರ ಸ್ವಾರ್ಥ ಸಾಧನೆಗೆ ವೈಯಕ್ತಿಕ ಲಾಭಕ್ಕಾಗಿ ವಿಕೃತ ರೂಪತಾಳಿ ಜನರನ್ನು ಒಕ್ಕಲೆಬ್ಬಿಸುವ ಕಾರ್ಯ ಮಾಡುತ್ತಿವೆ. ಇದರಿಂದಾಗಿ ಗಲಭೆ, ಹಿಂಸಾಚಾರ, ಲಾಟಿಚಾರ್ಜು, ಗೋಲಿಬಾರ್‌ಗಳಂತ ಘಟನೆಗಳು ನಡೆದು ಸಾರ್ವಜನಿಕ ಆಸ್ತಿಪಾಸ್ತಿ ಲೂಟಿ ಮಾಡುವ ಸಂಗತಿಗಳನ್ನು ನೋಡಿದ್ದೇವೆ. ಇಂತಹ ಅರಾಜಕ ಸತ್ಯಾಗ್ರಹಗಳು ಸಾಮಾಜಿಕ ಅವ್ಯವಸ್ಥೆಗೆ ಕಾರಣವಾಗಿದ್ದಕ್ಕೆ ಲೇಖಕರು "ನಾವು ಸ್ವತಂತ್ರ ರಾಷ್ಟ್ರದಲ್ಲಿಲ್ಲ. ಅತಂತ್ರವೇ ನಮ್ಮನ್ನಾಳುತ್ತದೆ"[೫೭] ಎಂದು ಹೇಳಿದ್ದರಲ್ಲಿ ವಾಸ್ತವದಲ್ಲಿ ಸತ್ಯಾಗ್ರಹಗಳಿಂದಾಗುವ ದುಷ್ಪಾರಿಣಾಮವನ್ನು ಹಾಗೂ ನಮ್ಮ ಸಾಮಾಜಿಕ ಅಧಃ ಪತನದ ಹಾದಿ ನಾವೇ ಕಂಡುಕೊಂಡತಾಗಿದೆ. ಶತಮಾನಗಳಿಂದ ಅನ್ಯರ ದಾಸರಾಗಿ ಬೆಳೆದುಬಂದ ನಮಗೆ ಸ್ವತಂತ್ರ ಬಂದರೂ ಅದು ಸ್ವೇಚ್ಛಾಚಾರಕ್ಕೆ ಪರಿವರ್ತನೆಯಾಗಿ ಇಂದಿನ ಸಾಮಾಜಿಕ ಸಂಘರ್ಷಗಳಿಗೆ ಎಡೆ ಮಾಡಿ ಕೊಟ್ಟಿದೆ ಎಂಬ ಅಂಶವನ್ನು ಈ ಪ್ರಬಂಧದಲ್ಲಿ ಸತ್ಯಾಗ್ರಹಗಳ ಸ್ವರೂಪದ ಹಿನ್ನೆಲೆಯಲ್ಲಿ ಹೇಳಿದ್ದಾಗಿದೆ.

### ಪೇಚಾಟದ ಪ್ರಸಂಗಗಳು

ಮಾನವ ಸಮಸ್ಯೆಗಳಿಂದ ಮುಕ್ತನಲ್ಲ. ಅವನು ದಿನವಿಡಿ ಒಂದಿಲ್ಲೊಂದು ಸಮಸ್ಯೆಗಳಿಂದ ಬಳಲುತ್ತಿದ್ದಾನೆ. ನಮ್ಮ ಜೀವನದಲ್ಲಿ ತೀರ ಸಾಮಾನ್ಯ ಘಟನೆಗಳು ನಮ್ಮನ್ನ ಪೇಚಾಟಕ್ಕೆ ಸಿಲುಕಿಸಿ ಜೀವನ ನಶ್ವರತೆಗೆ ದಾರಿ ಮಾಡುವ ಪ್ರಸಂಗಗಳನ್ನು ಹಾಗೂ ಸಮಾಜದಲ್ಲಿನ ಜನರ ವ್ಯವಹಾರಿಕ ಮಾದರಿಗಳನ್ನು ತಾವು ಅನುಭವಿಸಿದ ಪೇಚಾಟದ ಪ್ರಸಂಗಗಳನ್ನು ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ಪೇಚಾಟದ ಪ್ರಸಂಗಗಳು ನಿಸ್ಸಾಹಾಯಕ, ಅಧೈರಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಅದೇ ರೀತಿ ಲೇಖಕರು ತಮ್ಮ ಅಸಾಯಕತೆಗೆ ಪೇಚಾಟದ ಪ್ರಸಂಗಗಳು ಹೆಚ್ಚಾಗಿ ಬಂದಿವೆ ಎಂದಿದ್ದಾರೆ. ಒಂದನೇ ಪಿರಿಯಡ್ಡು ಕ್ಲಾಸ್ ಇದ್ದಾಗ ಕಾಲೇಜಿಗೆ ಹೋಗಲು ತಡವಾಗುವುದು, ಗೆಳೆಯರು ಮನೆಗೆ ಬಂದಾಗ ಸಕ್ಕರೆ, ಹಾಲು ಇಲ್ಲದಿರುವುದು, ಹೋಟೇಲ್‌ಗೆ ಹೋದಾಗ ಜೇಬಿನಲ್ಲಿ ಸಾಕಷ್ಟು ಹಣ ಇಲ್ಲದಿರುವುದು, ಸ್ಟೇಷನ್ ಮುಟ್ಟುವಷ್ಟರಲ್ಲಿ ಟ್ರೇನ್ ಬಿಟ್ಟಿರುವುದು, ಕ್ಷೌರಿಕನ ಸಲೂನಿಗೆ ಹೋದರೆ ಜನಜಂಗುಳಿಯಿಂದ ತುಂಬಿರುವುದು. ಇಂತಹ ಸಾಮಾನ್ಯ ಸಂಗತಿಗಳು ಪೇಚಾಟಕ್ಕೆ ಸಿಲುಕಿಸಿದ್ದನ್ನು ನೆನಪಿಸುತ್ತಾ ಇವುಗಳಿಂದ ತಾನೆಷ್ಟು ಅಲ್ಪನೆಂದು ತಮ್ಮಲ್ಲಿ ಹೀಗಳೆದು ಸಾಮಾಜಿಕವಾಗಿ ಕುಗ್ಗುವ ಅವರ ವ್ಯಕ್ತಿತ್ವ ಸಮಸ್ಯೆಗಳ ಪ್ರಸಂಗಗಳಿಂದ ಮಾನವನಲ್ಲಾಗುವ ಮನೋಧೋರಣೆಗಳು ಎಂತಹದ್ದು ಎಂಬ ಅರಿವು ಮೂಡುತ್ತದೆ.

ಲೇಖಕರು ತಮ್ಮ ವ್ಯವಹಾರ ಮಾದರಿ ಎಂತಹದು ಎಂದು ತಮ್ಮ ಅನುಭವಗಳ ಮೂಲಕ ವ್ಯಕ್ತಪಡಿಸುತ್ತಾರೆ. ಕಾಯಿಪಲ್ಲೆ ಮಾರ್ಕೆಟ್‌ಗೆ ಹೋಗಲಿ, ಬಟ್ಟೆ ಅಂಗಡಿಗೆ ಹೋಗಲಿ, ನನ್ನ ಮೋರೆ ನೋಡಿ ಪೂರ್ತಿ ಟೊಪ್ಪಿಗೆ ಹಾಕಿಯೇ ಕಳಿಸುತ್ತಾರೆಂದು ಅದಕ್ಕೆ ತಮ್ಮ ಅನನುಭವಿ ವ್ಯವಹಾರವೇ ಕಾರಣವೆಂದು ವ್ಯಾಪಾರಿಗಳು ಕೊಟ್ಟ ವಸ್ತುವಿಗೆ ಕೇಳಿದ ಬೆಲೆ ಕೊಟ್ಟು ಖರೀದಿಸಿ, ಅವರ ಜೊತೆಗೆ ದೀರ್ಘ ಚರ್ಚಿಸಿದ್ದು ತಮ್ಮ ದಡ್ಡತನವೆಂದು ಆತ್ಮವಿಮರ್ಶೆಗೈದಿದ್ದರಲ್ಲಿ, ಮಾನವ ವ್ಯವಹಾರ ಶೂನ್ಯನಾಗಿ ಬದುಕುವುದರಲ್ಲಿ ಯಾವ ಅರ್ಥವೂ ಇಲ್ಲವೆಂಬ ಸೂಕ್ಷ್ಮತೆ ಇದೆ. ಬಟ್ಟೆ ಅಂಗಡಿಗೆ ಹೋಗಿ ಒಂದು ತುಂಡು ಬಟ್ಟೆ ಕೇಳಿದರೆ, ಬಟ್ಟೆಗಳ ರಾಶಿಯನ್ನೇ ಮುಂದೆ ಹಾಕಿ ನಮ್ಮನ್ನು ಕೊಳ್ಳುವಂತೆ ಪ್ರೇರೇಪಿಸುತ್ತಾರೆ. ಅದನ್ನು ಹೊಲಿಸಿ ಧರಿಸಿದರೆ "ಏನ್ರಿ ಈ ಕೋಟು ಯಾವ ಮಾಡೆಲ್ಲು ಅಮೇರಿಕಾ ಮಾಡೆಲ್ಲೋ? ಎಂದು ಸ್ನೇಹಿತರ ಅಸ್ವಾಭಾವಿಕ ಟೀಕೆಗಳಿಂದ ಜನರ ವ್ಯವಹಾರಿಕ ಮಾದರಿ ಸಹ ಪೇಚಾಟಕ್ಕೆ ಸಿಲುಕಿಸಿದುಂಟು ಎಂದು ನೆನೆಯುತ್ತಾರೆ.

ಕ್ಷೌರಿಕನ ಶಾಪ್‌ಗೆ ಹೋಗಿ ಅಲ್ಲಿಯೂ ಸಹ ವ್ಯವಹಾರ ಶೂನ್ಯರಾದ ಇವರನ್ನು ಕ್ಷೌರಿಕನು ಮನಬಂದಂತೆ ಕೂದಲು ಕತ್ತರಿಸಿ ಕಳುಹಿಸಿದ್ದು, ಮತ್ತೊಂದು ಸಲ ಇವರ ಕೂದಲು ಕತ್ತರಿಸುತ್ತಿರುವಾಗಲೇ ಸಾಹೇಬನೊಬ್ಬನ ಆಗಮನದಿಂದ ಇವರ ಕೆಲಸವನ್ನು ಅರ್ಧಕ್ಕೆ ನಿಲ್ಲಿಸಿ, ಆ ಸಾಹೇಬನ ಕೂದಲು ಕತ್ತರಿಸಿಯಾದ ಮೇಲೆ ಇವರನ್ನು ಗಮನಿಸಿದ್ದು ಹಣ, ಅಧಿಕಾರದ ಮುಂದೆ ಸಾಮಾನ್ಯನ ವ್ಯಕ್ತಿತ್ವಕ್ಕೆ ಬೆಲೆ ಇಲ್ಲ ಎಂದು. ಇಂತಹ ಪ್ರಸಂಗಗಳು ಸಹ ಪೇಚಿಗೆ ಸಿಲುಕಿಸಿದ್ದನ್ನು ನೆನೆಯುತ್ತಾರೆ.

ಒಂದು ಸಾರೆ ತುಪ್ಪ ಖರೀದಿಸಲು ಅಂಗಡಿಯೊಂದಕ್ಕೆ ಹೋಗಿ ತುಪ್ಪದ ಗುಣಮಟ್ಟದ ಬಗ್ಗೆ ಕೇಳಿದ ಪ್ರಶ್ನೆಗೆ ಶೆಟ್ಟಿಯ ವ್ಯವಹಾರಿಕ ಬುದ್ಧಿಯ ಮಾತುಗಳು ಇವರನ್ನು ವ್ಯವಹಾರ ಶೂನ್ಯವಾಗಿ ಮಾಡಿದ್ದು ಸಹ ಪೇಚಿಗೆ ಸಿಲುಕಿಸಿದ್ದು, ಅದೇ ರೀತಿ ಕಟ್ಟಿಗೆ ತರಲು ಹೋಗಿ ಅಲ್ಲಿಯೂ ತೂಕದ ಗುಣಮಟ್ಟವನ್ನು ಪ್ರಶ್ನಿಸಿದ್ದಕ್ಕೆ ವ್ಯಾಪಾರಿಯ ವಾಚಾಳಿ ಮಾತುಗಳಿಂದ ಸೋತಿದ್ದು, ಹೋಟೇಲ್ ಒಂದರಲ್ಲಿ ಮಾಣಿಯೊಬ್ಬ ಊಟದ ತಾಟಿಗೆ ಚಪಾತಿಯೊಂದನ್ನು ಒಗೆದುದನ್ನು ಪ್ರಶ್ನಿಸಿ ಅವನಿಂದಲೂ ಮಾತಿನ ಗಾಳಕ್ಕೆ ಸಿಲುಕಿ ಸೋತಂತ ಪ್ರಸಂಗಗಳನ್ನು ನೆನೆಯುವ ಲೇಖಕರು ಅಸಹಾಯಕ ವ್ಯಕ್ತಿಯನ್ನು ಸಮಾಜ ನೋಡುವ ದೃಷ್ಟಿಕೋನ ಎಂತಹದ್ದು ಎಂಬ ಅರಿವು ಮೂಡಿಸಿದ್ದಾರೆ. ನಮ್ಮ ಆತ್ಮ ಶ್ಲಾಘನೆ ಕೀಳರಿಮೆಗಳಿಂದ ಇಂದು ವ್ಯವಹಾರಿಕ ಜಗತ್ತಿಗೆ ನಾವು ತೋರುವ ಪ್ರತಿಕ್ರಿಯೆಗೆ ಸಮಾಜ ತೋರಿಸುವ ವ್ಯವಹಾರಿಕ ಮೋಸಗಾರಿಕೆಯನ್ನು ಚಿಂತನೆ ನಡೆಸಿ, ಅನುಭವದ ಹಿನ್ನೆಲೆಯಿಂದ ಅದನ್ನು ವ್ಯಕ್ತಪಡಿಸಿದ್ದು, ವಿಶೇಷವೆನಿಸಿದೆ.

### ಭಾವ ಮೈದುನ

ವೀರೇಂದ್ರ ಸಿಂಪಿಯವರು ಈ ಪ್ರಬಂಧದಲ್ಲಿ ಮಾನವ ದೌರ್ಬಲ್ಯಗಳನ್ನು ಆಮೂಲಾಗ್ರವಾಗಿ ಹಿಂಜಿ ನೋಡುವ ಕಾರ್ಯ ಈ ಪ್ರಬಂಧದಲ್ಲಿ ಮಾಡಿದ್ದಾರೆ. ಹಾಗೂ ಸಾಂಸಾರಿಕ ಜೀವನವನ್ನು ಶುದ್ಧ

ಹಾಸ್ಯದೊಂದಿಗೆ ನೋಡಿ, ಹೆಂಡತಿಯ ತಮ್ಮನಾದ ಕುಮಾರನೆಂಬ ಭಾವಮೈದುನನ ವ್ಯಕ್ತಿನ, ಅವನ ಕಿರಿಕಿರಿ, ಹೆಂಡತಿಯ ಪ್ರಭಾವದಿಂದ ಅವನ ಸ್ವೇಚ್ಛಾಚಾರಿಕೆ ಎಂತಹದು ಎಂದು ಹಾಸ್ಯಾತ್ಮಕವಾಗಿ ಮೈದುನನ ವ್ಯಕ್ತಿ ಚಿತ್ರಣವನ್ನು ಈ ಪ್ರಬಂಧದಲ್ಲಿ ಮೂಡಿಸಿದ್ದಾರೆ.

"ಹೆಂಡತಿ ಅರ್ಧಾಂಗಿಯಾದರೆ ಹೆಂಡತಿಯ ಸಹೋದರ ಭಾವ ಮೈದುನ ಪೂರ್ಣಾಂಗನಾಗಿದ್ದಾನೆ."[೫೮] ಎಂದು ಹೇಳುವ ಲೇಖಕರು ಹೆಂಡತಿಯನ್ನು ಪ್ರೀತಿಸದಿದ್ದರೂ ನಡೆಯುತ್ತದೆ. ಆದರೆ, ಭಾವಮೈದುನನನ್ನು ಪ್ರೀತಿಸದಿದ್ದರೆ ನಡೆಯದು. ಹೆಂಡತಿ ಒಮ್ಮೆ ಮನಿಸು ತೋರಿ, ನಕ್ಕಂತೆ ಮಾಡಿ, ಮುತ್ತು ಕೊಟ್ಟು ಗಂಡನನ್ನು ಗಾಳಿಪಟದಂತೆ ಮಾಡುತ್ತಾಳೆ. ಅರ್ಧಾಂಗಿಯಾದ ಹೆಂಡತಿಯ ಕೈಯೊಳಗಿನ ಗೊಂಬೆಗಳಾಗುವ ಗಂಡಂದಿರು ಪೂರ್ಣಾಂಗನಾದ ಭಾವಮೈದುನನ ಸರ್ವಾಧಿಕಾರಕ್ಕೆ ಮಿತಿ ಎಲ್ಲಿದೆ ಎಂದು ಪ್ರಶ್ನಿಸುವಲ್ಲಿ ಮೈದುನನ ಸ್ವಚ್ಛಾಚಾರಿಕೆ ಎಂತಹದು ಎಂಬ ಅರಿವಾಗುತ್ತದೆ. ಲಗ್ನವಾದ ಕೂಡಲೇ ಹೆಂಡತಿಯ ದಾಸನಾಗಿ ಅತ್ತೆ ಮಾವಂದಿರ ಪಕ್ಷ ಸೇರಿ ಭಾವಮೈದುನನನ್ನು ಆಮಂತ್ರಿಸಬೇಕಾಗುತ್ತದೆ. ಹೀಗೆ ಮದುವೆಯಾದ ಹೊಸತರಲ್ಲಿ ಹೆಂಡತಿಯ ಬಾಲಗಸಿಯಾಗಿ ಬಂದ ಮೈದುನ ಇಂದು ಕಿರಿಕಿರಿ ಮಾಡುವ ಕಿರಿಯನಾಗಿ, ಇವರಿಬ್ಬರ ನಡುವಿನ ಅಡ್ಡಗೋಡೆಯಾಗಿ, ಇಪ್ಪತ್ನಾಲಕು ಗಂಟೆ ಗೊರಕೆ ಹೊಡೆಯುವ ಇವನ ಕಾಯಕದಿಂದ ಇವರ ಏಕಾಂತಕ್ಕೆ ಧಕ್ಕೆ ತರುವ ವೈರಿಯಾಗಿದ್ದಾನೆ ಎಂದು ಅವನ ಬಗೆಗಿನ ಬೇಸರಿಕೆಯನ್ನು ವ್ಯಕ್ತಪಡಿಸಿದ್ದಾರೆ.

ಮದುವೆಯಾದ ಹೊಸತರಲ್ಲಿ ಎಲ್ಲಿಯಾದರೂ ಒಂಟಿಯಾಗಿ ಹೋಗಬೇಕೆಂದರೆ ಇವರ ನೆರಳಾಗಿ ಬರುವ ಇವನಿಗೆ ಸಿನಿಮಾ ನೋಡಿ ಬರಲು ಹೇಳಿದರೆ, ಹೋಗಲಾರೆ ಎನ್ನುವ ಇವನು ಇವರಿಬ್ಬರೂ ಹೊರಟರೆ ಮೊದಲಿಗನಾಗಿ ನಿಂತು ಕಾಡುತ್ತಾನೆ. ಇಂತಹ ವ್ಯಕ್ತಿತ್ವದ ಕುಮಾರನ ವಯಸ್ಸು ಇಪ್ಪತ್ತು ವರ್ಷ. ಮೆಟ್ರಿಕ್ ಪರೀಕ್ಷೆಯಲ್ಲಿ ಮೂರು ಸಾರಿ ಫೇಲಾಗಿ ಬಂದ ಈತನು ಅಕ್ಕನಿಗೆ ಇನ್ನು ಎಳೆಯ ಕೂಸು ಎಂದು ವ್ಯಂಗ್ಯವಾಗಿ ಅವನ ಬಗ್ಗೆ ಹೇಳುತ್ತಾ, ಈತನ ಕಾಯಕವೆಂದರೆ ಉಣ್ಣುವುದು, ಮಲಗುವುದು ತಿಂದಿದ್ದನ್ನು ಕರಿಗಿಸಲು ತಿರುಗುವುದು. ಇದೇ ಕಾಯಕದ ಕಲಿಯಾದ ಇವನು ಯಾವ ಕೆಲಸಕ್ಕೂ ಅರ್ಹನಲ್ಲ ಎಂದು ಹೀಗಳೆಯುತ್ತಾ "ನಾನು ಓಡಾಡುತ್ತಾ ತೆಳ್ಳಗಾಗುತ್ತಾ ನಡೆದಿದ್ದರೆ ಕುಮಾರ ಮಾತ್ರ ತನ್ನ ದೇಹವನ್ನು ಫುಟ್ ಬಾಲ್ ನಂತೆ ಬೆಳೆಸಿ ಗುಂಡನಾಗಿದ್ದಾನೆ"[೫೯] ಎಂದು ಹೇಳುವಲ್ಲಿ ಅವನ ಕುರಿತಾದ ಸಾತ್ವಿಕ ಕೋಪವನ್ನು ವ್ಯಂಗ್ಯವಾಗಿ ವ್ಯಕ್ತಪಡಿಸಿದ್ದಾರೆ.

ಮನೆಯಲ್ಲೇ ತಿಂದು ತಿರುಗುವ ಈ ಮೈದುನ ಯಾರಾದರೂ ಮನೆಗೆ ಬಂದರೆ ಅವರನ್ನು ಬರಮಾಡಿಕೊಳ್ಳುವ ರೀತಿ, ಅವರ ಮುಖಕ್ಕೆ ಹೊಡೆಯುವಂತೆ ಮಾತನಾಡುವ ಶೈಲಿಯನ್ನು ಹೇಳುತ್ತಾ, ಯಾರಾದರೂ ಮೂರ್ತಿ ಇದ್ದಾರೆನ್ರಿ ಎಂದು ಕೇಳಿದರೆ ಅವರನ್ನು ಬಾಗಿಲಲ್ಲೇ ನಿಲ್ಲಿಸಿ ಅವರು ಮನೆಯಲ್ಲಿಲ್ಲ ಎಂದು ಉತ್ತರಿಸುತ್ತಾನೆ. ಪಾಟೀಲ ಬಂದಿದ್ದ ಅಂತ ಹೇಳು ಅಂದರೆ. ನಮಗೆ ಪಾಟೀಲ

ಗೀಟೀಲ ನೆನಪಿರುವುದಿಲ್ಲ ಒಂದು ಚೀಟಿ ಬರೆದುಕೊಡು ಎಂದು ಹೇಳುವ ಇವನನ್ನು ಮೃಗ ಎಂದು ಕರೆದು ತಲೆಯಿದ್ದು ವಿಚಾರ ಮಾಡದ, ಕೈಯಿದ್ದು ಹೊಡೆಯಲಾರದ, ಬಾಯಿದ್ದು ಮಾತನಾಡದ ಅಸಹಾಯಕ ಸ್ಥಿತಿಯನ್ನು ವ್ಯಕ್ತಪಡಿಸುತ್ತಾರೆ.

ಅರ್ಜುನ ಮೂರು ಲೋಕದ ಗಂಡನಾದರೂ ಸುಭದ್ರೆಯ ದಾಸನಾಗಿ ಭಾವಮೈದುನ ಕೃಷ್ಣನ ದಾಸಾನುದಾಸನಾಗಿದ್ದನ್ನು ಹೇಳುವ ಲೇಖಕರು ಕೃಷ್ಣನನ್ನು ಸಾರಥಿಯಾಗಿ ಸ್ವೀಕರಿಸಿ ಅವನ ಭಗವದ್ಗಿತೆಯೆಂಬ ಬೋರಿಂಗ್ ಭಾಷಣ ಕೇಳಿದ್ದನ್ನು ಹೇಳುವಲ್ಲಿ ಭಾವಮೈದುನರೆಂಬ ಪೂರ್ಣಾಗರು ಹೇಗೆ ನಮ್ಮ ಜೀವನಕ್ಕೆ ಅಂಟಿಕೊಂಡು ಬರುತ್ತಾರೆ ಎಂದು ಹೇಳುತ್ತಾ; ಇಂತಹ ಮೈದುನರು ಮನೆಗೆ ಹತ್ತಿದ ಹೆಗ್ಗಣದಂತೆ ಕುಲಕ್ಕೆ ಅಂಟಿಕೊಂಡು, ದಿನವಿಡಿ ತಿಂದು ತೇಗಿ ಇನ್ನೊಬ್ಬರ ಏಕಾಂತವನ್ನು ಹಾಳು ಮಾಡುವ ಇಂತವರ ವಿರುದ್ಧದ ಹೋರಾಟಕ್ಕೆ ಲೇಖಕರು ಕರೆ ಕೊಡುತ್ತಾರೆ. ಭಾವ ಮೈದುನರಂತ ಒಣ ತರಲೆಗಳ ಸ್ವೇಚ್ಛಾಚಾರಿ ವ್ಯಕ್ತಿಗಳ ನಡಾವಳಿಕೆಗಳನ್ನು, ಹಾಗೂ ಇಂದಿನ ಯುವಕರು ಆಲಸ್ಯ, ಅಸಭ್ಯ ವರ್ತನೆಗಳನ್ನು ಮೈಗೂಡಿಸಿಕೊಂಡು ಭವಿಷ್ಯದ ಚಿಂತೆ ಮರೆತು, ಕಾಲಹರಣ ಮಾಡುವ ಇಂತಹ ವ್ಯಕ್ತಿಗಳ ಕುರಿತಾದ ವಿಡಂಬನೆಯನ್ನು ಈ ಪ್ರಬಂಧದಲ್ಲಿ ಮಾಡಿದ್ದಾರೆ.

## ೪.೪. ಶಿಕ್ಷಣ

ವೀರೇಂದ್ರ ಸಿಂಪಿಯವರು ತಮ್ಮ ಸಮಕಾಲೀನ ಶಿಕ್ಷಣದ ವಿದ್ಯಮಾನಕ್ಕೆ ಸಂಬಂಧಿಸಿದಂತೆ ಅಲ್ಲಿನ ಹದಗೆಟ್ಟ ವಾತಾವರಣದ ವಿರುದ್ಧ ತಮ್ಮ ವಾದ ಚಾತುರ್ಯದ ಮೂಲಕ ಅದರ ಒಳನೋಟಗಳನ್ನು ಯಥಾರ್ಥವಾಗಿ ಮೂಡಿಸುವ ಪ್ರಯತ್ನ ಇವರ ಪ್ರಬಂಧಗಳಲ್ಲಾಗಿರುವುದನ್ನು ಗುರುತಿಸಬಹುದು. ಹಾಗೇ ಇವರ ಪ್ರಬಂಧಗಳಲ್ಲಿ ಶೈಕ್ಷಣಿಕ ವ್ಯವಸ್ಥೆಯಲ್ಲಿನ ಕ್ಲೀಷ್ಟ ಸಮಸ್ಯೆಗಳನ್ನು ಸ್ವತಃ ತಾವು ಕಂಡುಂಡ ಅನುಭವದ ಹಿನ್ನೆಲೆಯಲ್ಲಿ ಅವುಗಳನ್ನು ವಿವಿಧ ನೆಲೆಯಲ್ಲಿ ವಿಂಗಡಿಸಿ, ಅಲ್ಲಿನ ಬಿಕ್ಕಟ್ಟಿನ ನಿಲುವುಗಳನ್ನು ತಿಳಿಗೊಳಿಸುವ ಕಾರ್ಯ ಮಾಡಿರುವುದನ್ನು ಇವರ ಪ್ರಬಂಧಗಳಲ್ಲಿ ಗುರುತಿಸಬಹುದು. ಉದಾಹರಣೆಗೆ

### ಕಾಲೇಜು ಚುನಾವಣಾ ಪ್ರಕರಣ

ಕಾಲೇಜುಗಳು ಶಿಕ್ಷಣ ನೀಡುವ ಕೇಂದ್ರಗಳಾದರೂ ಇಂದು ಇಲ್ಲಿ ಸಹ ರಾಜಕೀಯ ಪ್ರಭಾವದಿಂದಾಗಿ ಚುನಾವಣೆಗಳಂತಹ ಚಟುವಟಿಕೆಗಳು ನಡೆದು ವಿದ್ಯಾರ್ಥಿ ಸಮೂಹದಲ್ಲಿ ಸಂಚಲನ ಸೃಷ್ಟಿ ಮಾಡುತ್ತದೆ. ಇಲ್ಲಿ ಪ್ರತಿ ವರ್ಷ ಒಬ್ಬ ವಿದ್ಯಾರ್ಥಿ ಮುಖಂಡನನ್ನು ಆಯ್ಕೆ ಮಾಡವ ಪ್ರಕ್ರಿಯೆ ನಡೆಯುತ್ತದೆ. ತುರ್ತು ಪರಿಸ್ಥಿತಿಯಂತಹ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿಯೂ ಕಾಲೇಜುಗಳಲ್ಲಿ ಚುನಾವಣೆಗಳು ನಡೆಯಲೇ ಬೇಕೆಂಬ ಹಠ ವಿದ್ಯಾರ್ಥಿಗಳಿಗಿರುತ್ತದೆ. ಇಂತಹ ಸಂದರ್ಭಗಳಲ್ಲಿ ನಡೆಯುವ ವಿದ್ಯಾರ್ಥಿಗಳ ಕಲಹ, ಶಿಕ್ಷಕರಲ್ಲಿನ ಗೊಂದಲಗಳನ್ನು ಚಾಣಾಕ್ಷತನದಿಂದ ಬಗೆಹರಿಸಬೇಕಾದುದು ಪ್ರಿನ್ಸಿಪಾಲನ ಕರ್ತವ್ಯ. ಇಂತಹ ಒಂದು

ಶೈಕ್ಷಣಿಕ ವಲಯದಲ್ಲಿ ರಾಜಕೀಯ ಚಟುವಟಿಕೆಗಳು ಯಾವ ರೀತಿಯಾಗಿರುತ್ತವೆ ಎಂದು ಹೇಳುತ್ತಾ ಈ ಪ್ರಬಂಧ ಮುನ್ನಡೆಯುತ್ತದೆ.

ಕಾಲೇಜಗಳಲ್ಲಿ ಪ್ರತಿವರ್ಷ ಚುನಾವಣೆಗಳು ನಡೆಯಲೇಬೇಕೆಂಬ ನಿಯಮವನ್ನು ವಿದ್ಯಾರ್ಥಿಗಳೇ ರೂಪಿಸಿಕೊಂಡಿದ್ದಾರೆ. ಇದರಿಂದಾಗಿ ಎಂತಹ ಪರಿಸ್ಥಿತಿಯಲ್ಲಿಯೂ ಚುನಾವಣೆಗಳು ನಡೆಯುತ್ತವೆ. ಇದರ ಮೂಲಕ ವಿದ್ಯಾರ್ಥಿ ಮುಖಂಡರನ್ನು ಆಯ್ಕೆ ಮಾಡಿ ಶೈಕ್ಷಣಿಕ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಮಾಡುತ್ತಾರೆ. ಇಲ್ಲಿ ಆಡಳಿತದಲ್ಲಿ ಭಾಗಿಯಾಗುವುದು ಒಂದು ಪ್ರತಿಷ್ಠೆ ಎಂಬಂತೆ ಸ್ವೀಕರಿಸುವ ವಿದ್ಯಾರ್ಥಿಗಳು ಯಾವ ಎಂ.ಎಲ್.ಎ., ಎಂ.ಪಿ.ಎಲೆಕ್ಷನ್‌ಗಿಂತ ಕಡಿಮೆ ಇಲ್ಲದಂತೆ ಚುನಾವಣೆ ನಡೆಸುತ್ತಾರೆ. ಕಾಲೇಜು ಪ್ರಾರಂಭವಾಗಿ ಇನ್ನೂ ಅಡ್ಮಿಶನ್ ನಡೆದಿದ್ದರೂ ಚುನಾವಣೆ ನಡೆಸಬೇಕೆಂಬ ನಿರ್ಧಾರಕ್ಕೆ ವಿದ್ಯಾರ್ಥಿಗಳು ಬಂದಿರುತ್ತಾರೆ. ಪ್ರಿನ್ಸಿಪಾಲರು ಈಗ ಬೇಡವೆಂದರೆ, ಅವರ ವಿರುದ್ಧ ಘೋಷಣೆ ಕೂಗಿ ಅವರನ್ನು ವಿಚಲಿತರನ್ನಾಗಿ ಮಾಡುವ ಸಂಸ್ಕೃತಿ ವಿದ್ಯಾರ್ಥಿಗಳಲ್ಲಿರುತ್ತದೆ ಎಂದು ಹೇಳಿದ್ದಾರೆ. ಇದರಿಂದ ಬೇಸತ್ತ ಪ್ರಿನ್ಸಿಪಾಲರು ಸಹ ಪ್ರಾಧ್ಯಾಪಕರೊಬ್ಬರನ್ನು ಸಂಧಾನಕ್ಕೆ ಬಿಟ್ಟು ಮುಂದಿನ ತಿಂಗಳು ಚುನಾವಣೆ ನಡೆಸುವ ನಿರ್ಧಾರಕ್ಕೆ ಬರುತ್ತಾರೆ. ಇಲ್ಲಿ ಪ್ರಾಧ್ಯಾಪಕರಾದವರು. ವಿದ್ಯಾರ್ಥಿಗಳ ಜೊತೆ ಅತಿ ಸಲುಗೆಯಿಂದ ಇರುತ್ತಾರೆ. ಶೈಕ್ಷಣಿಕ ಚಟುವಟಿಕೆಗಳಿಗಿಂತ ರಾಜಕೀಯ ಚುಟವಟಿಕೆಗಳಲ್ಲಿ ಉತ್ಸುಕರಾಗಿ ಕಾಲೇಜಿನಲ್ಲಿ ರಾಜಕೀಯತೆ ಬೆಳೆಸುವಲ್ಲಿ ಮೂಲ ಪ್ರೇರಕರಾಗಿರುತ್ತಾರೆ.

ಚುನಾವಣೆಯ ದಿನಾಂಕವನ್ನು ಪ್ರಕಟಿಸಿದರೆ ಸಾಕು ವಿದ್ಯಾರ್ಥಿಗಳಲ್ಲಿ ರಕ್ತಸಂಚಲನ ಹೆಚ್ಚಾಗಿ, ಬೆಳಿಗ್ಗೆಯಿಂದ ಸಂಜೆಯವರೆಗೂ ಸಾರ್ವಜನಿಕ ಹಾದಿ ಬೀದಿಗಳಲ್ಲಿ ಪ್ರಚಾರದ ಅರ್ಭಟಗಳು ನಡೆದು, ತರಗತಿ ನಡೆಯುವ ಕೋಣೆಯೊಳಗೂ ಗದ್ದಲ ಎಬ್ಬಿಸಿ ತರಗತಿ ನಡೆಯದಂತೆ ತಡೆಯುತ್ತಾರೆ. ಕಾಲೇಜನ್ನು ರಾಜಕೀಯ ಪ್ರಭಾವಕ್ಕೆ ಒಳಪಡಿಸಿ, ವಿದ್ಯಾರ್ಥಿಗಳೇ ಕಾಲೇಜಿನ ಸಾತ್ವಿಕ ವಾತಾವರಣವನ್ನು ಹಾಳು ಮಾಡುತ್ತಾರೆ. ಕಾಲೇಜುಗಳು ಚುನಾವಣೆಯ ಕುಟಿಲ ಕಾರಸ್ಥಾನಗಳಾಗಿ ಅಲ್ಲಿ ಕಲ್ಲಣ್ಣನವರ ಒಂದು ಗುಂಪು, ಪಾಟೀಲಿನ ಮತ್ತೊಂದು ಗುಂಪಿನ ನಡುವಿನ ಜಟಾಪಟಿ ಪರಸ್ಪರ ಆರೋಪ ಪ್ರತ್ಯಾರೋಪದೊಂದಿಗೆ "ನಮ್ಮದು 'ಬಡಿಗೆ ಪಕ್ಷ' ನಮಗೆ ಓಟು ಕೊಡಿ, ನಾವು ಗೆದ್ದು ಬಂದರೆ ವರ್ಷವಿಡೀ ಆಟದ ಬಯಲಿನಲ್ಲಿ ಆಟ ಆಡಲು ಪ್ರೋತ್ಸಾಹ ಕೊಡುವೆವು. ಆಡಳಿತದಲ್ಲಿ ಅಡ್ಡ ಬರುವ ಪ್ರಾಧ್ಯಾಪಕರಾಗಲಿ, ಪ್ರಿನ್ಸಿಪಾಲರಾಗಿರಲಿ ಅವರಿಗೆ ಬೂಟಿನ ಏಟುಗಳು ಬೀಳಬಹುದು, ಪರೀಕ್ಷಾ ಮಂದಿರದಲ್ಲಿ ಸಂಪೂರ್ಣ ಸ್ವಾತಂತ್ರ್ಯವನ್ನು ಜಾರಿಗೆ ತಂದು, ಆಯಾ ವಿಷಯಗಳ ಪ್ರಾಧ್ಯಾಪಕರು ಕಾಪಿ ಒದಗಿಸುವಂತೆ ನಿಯಮ ರೂಪಿಸುತ್ತವೆ"[೬೦] ಎನ್ನುವ ವಿದ್ಯಾರ್ಥಿಗಳು ಚುನಾವಣೆಗಳನ್ನು ಯಾವ ಉದ್ದೇಶಕ್ಕಾಗಿ ನಡೆಸುತ್ತಾರೆ ಎಂಬ ಸತ್ಯ ಬಹಿರಂಗವಾಗುತ್ತದೆ.

ವಿದ್ಯಾರ್ಥಿ ಪ್ರಭುತ್ವ ಬೇಕೋ, ಇಲ್ಲ ಹಳೆಯಕಾಲದ ಪ್ರಾಧ್ಯಾಪಕರ ಪ್ರಭುತ್ವ ಬೇಕೋ? ಎಂದು ಪ್ರಶ್ನಿಸುವ ಪಾಟೀಲನ ಗುಂಪು ಚುನಾವಣೆಯ ಪ್ರಣಾಳಿಕೆ ಸಿದ್ಧಪಡಿಸಿ, ಊರಲೆಲ್ಲಾ ಗಡಿಬಿಡಿಯಿಂದ ಓಡಾಡಿ, ಸಾರ್ವಜನಿಕ ಸ್ಥಳಗಳಲ್ಲಿ ಭಾಷಣಗಳು ನಡೆದು, ಚುನಾವಣೆ ಯಶಸ್ವಿಯಾಗಿ ಜರುಗಿದಾಗ ಮತ ಏಣಿಕೆಯಲ್ಲಿ ಕಲ್ಲಣ್ಣನವರ ಗುಂಪು ಜಯಶಾಲಿಯಾದರೆ ಪಾಟೀಲಿನ ಗುಂಪು ರೀಕೌಂಟ್ ಆಗಬೇಕೆಂದು ಪಟ್ಟು ಹಿಡಿಯುತ್ತಾರೆ. ಅದಕ್ಕೆ ಪ್ರತಿಯಾಗಿ ರೀಕೌಂಟ್ ಮಾಡಿದರೆ ನಿಮ್ಮನ್ನು ನೋಡಿಕೊಳ್ಳುತ್ತವೆ ಎಂದು ಬೆದರಿಸುವ ಕಲ್ಲಣ್ಣರ ಗುಂಪಿನ ಮಧ್ಯದಲ್ಲಿ ಸಿಕ್ಕಿಹಾಕಿಕೊಂಡ ಪ್ರಿನ್ಸಿಪಾಲನು ತನ್ನ ಚೇಂಬರಿನಲ್ಲಿ ಉನ್ನತ ಮಟ್ಟದ ಮಾತುಕತೆ ನಡೆಸಿ, ಮರುದಿನ ವಿದ್ಯಾರ್ಥಿ ಸಂಘದ ಉದ್ಘಾಟನೆ ನಡೆಯುತ್ತದೆ. ಆಗ ಗೆದ್ದ ಕಲ್ಲಣ್ಣನಿಗೆ ಸೋತ ಪಾಟೀಲನಿಂದ ಹಾರ ಹಾಕಿಸಿ ಪಾಟೀಲನನ್ನು ಎನ್.ಎಸ್.ಎಸ್.ಗುಂಪಿನ ಮುಖಂಡನನ್ನಾಗಿ ನೇಮಕ ಮಾಡಿ ಕಾಲೇಜಿನಲ್ಲಿ ಜರುಗಬಹುದಾದ ಅನಾಹುತವನ್ನು ಪ್ರಿನ್ಸಿಪಾಲರು ತಮ್ಮ ಚಾಣಾಕ್ಷತನದಿಂದ ತಪ್ಪಿಸಿದರು. ಇಂತಹ ಸಾಮಾನ್ಯದಿಂದ ಗಂಭೀರ ಸಮಸ್ಯೆಗಳು ಕಾಲೇಜುಗಳಲ್ಲಿ ಸಂಭವಿಸಿ ಶೈಕ್ಷಣಿಕ ಕಾರ್ಯ ಚಟುವಟಿಕೆಗಳು ಕುಂಠಿತಗೊಳಿಸುತ್ತವೆ ಆದ್ದರಿಂದ ಇಂತಹ ಚುನಾವಣೆಗಳು ಅನಗತ್ಯ ಎಂಬ ತೀರ್ಮಾನಕ್ಕೆ ಬಂದಿದ್ದು ಸೂಕ್ತವೆನಿಸಿದೆ.

**ಕಾಲೇಜಿನಲ್ಲಿ ಹಾಸ್ಯ**

ಕಾಲೇಜೆಂದರೆ ಅದೊಂದು ರಂಗುರಂಗಿನ ಪ್ರಪಂಚ. ಇಂತಹ ಸ್ಥಳದಲ್ಲಿ ನಡೆಯುವ ಚಟುವಟಿಕೆಗಳು, ಪ್ರಾಧ್ಯಾಪಕ, ವಿದ್ಯಾರ್ಥಿಗಳ ಹಾಸ್ಯ ಪ್ರಸಂಗಗಳು, ವಿದ್ಯಾರ್ಥಿಗಳ ಸ್ವೇಚ್ಛಾಚಾರ, ಪ್ರಾಧ್ಯಾಪಕರ ನೈಪುಣ್ಯತೆ ಮುಂತಾದ ವಿಚಾರಗಳನ್ನು ವ್ಯಕ್ತಪಡಿಸುವ ಈ ಪ್ರಬಂಧ ಹಾಸ್ಯತ್ಮಕವಾಗಿ ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಅಂಕುಡೊಂಕುಗಳನ್ನು ತಿದ್ದುವ ಕಾರ್ಯ ಮಾಡಿದೆ. ಶಿಕ್ಷಣವನ್ನು ಅಪಮೌಲ್ಯಗೊಳಿಸುವ ಅಲ್ಲಿನ ವ್ಯವಸ್ಥೆಯನ್ನು ವಿಡಂಬನಾತ್ಮಕವಾಗಿ ಟೀಕಿಸುವ ಕಾರ್ಯ ಈ ಪ್ರಬಂಧದಲ್ಲಿ ಮಾಡಿದ್ದಾರೆ.

ಕಾಲೇಜೆಂಬ ರಂಗಾದ ಪ್ರಪಂಚದಲ್ಲಿ ರಂಗಾದ ಅಪ್ಸರೆಯರೂ ಇರುತ್ತಾರೆ. ಇವರ ಮನಸೆಳೆಯುವ ಶೋಕಿಲಾಲರೂ ಇರುತ್ತಾರೆ. ಇಂತಹ ಪರಿಸರದಲ್ಲಿ ಪಾಠ ಪ್ರವಚನಗಳು ತಮ್ಮ ಪಾಡಿಗೆ ಅವು ನಡೆದಿರುತ್ತವೆ. ಅಲ್ಲಿ ಓದುವವರು ಓದುತ್ತಾರೆ. ಓದದವರು ವರ್ಷವಿಡೀ ಗದ್ದಲ, ಧರಣೆ ಮಾಡಿಕೊಂಡು ತಿರುಗುತ್ತಾರೆ. ಕೊನೆಯ ಪರೀಕ್ಷೆಯಲ್ಲಿ ಇಂತವರೂ ಕಾಪಿಯೊಡೆದು ಪಾಸಾಗಿ ರ್‍ಯಾಂಕ್ ಬರುತ್ತಾರೆ. ಇಂತಹ ಕಾಲೇಜುಗಳು ಪದವೀಧರನ್ನು ನಿರ್ಮಾಣ ಮಾಡುವ ಕಾರ್ಖಾನೆಗಳಂತಿವೆ. ಹಾಗೆ ದೇಶದ ಭಾವಿ ನಾಯಕರನ್ನು ನಿರ್ಮಾಣ ಮಾಡುವ ತರಬೇತಿ ಕೇಂದ್ರಗಳಂತೆ ಸಹ ಮಾರ್ಪಟ್ಟಿರುವ ಇಂದಿನ ಕಾಲೇಜು ಶಿಕ್ಷಣದ ವಸ್ತುಸ್ಥಿತಿಯ ಮೂಲಕ ವ್ಯಕ್ತಪಡಿಸಿದ್ದಾರೆ. ಇಂತಹ ಸಂಸ್ಥೆಗಳಲ್ಲಿ ನಡೆಯುವ ಕೆಲವು ಹಾಸ್ಯ ಪ್ರಸಂಗಗಳು ಕಾಲೇಜು ರಂಗವನ್ನು ನಾಟಕ ಮಂದಿರದಂತೆ ರೂಪಿಸುತ್ತದೆ.

ಪ್ರತಿವರ್ಷ ಕಾಲೇಜು ಪ್ರಾರಂಭದ ಅವಧಿಯಲ್ಲಿ ಸ್ಥಳೀಯ ಪತ್ರಿಕೆಯೊಂದಕ್ಕೆ ತನ್ನ ಅಸ್ತಿತ್ವದ ಜಾಹಿರಾತನ್ನು ನೀಡಿ ಪ್ರಾರಂಭವಾಗುವ ಕಾಲೇಜಿನಲ್ಲಿ ಪ್ರಿನ್ಸಿಪಾಲರ ಪ್ರತಿಷ್ಠೆಯ ಇಂಗ್ಲೀಷ್ ಭಾಷಣ ನಡೆಯುತ್ತದೆ. ಇವರ ಅರ್ಥಹೀನ ಭಾಷಣ ಕೇಳಿ ಸಹ ಪ್ರಾಧ್ಯಪಕರು "ನಿಮ್ಮ ಭಾಷಣ ಅದ್ಭುತವಾಗಿತ್ತು, ಆದರೆ ಅದರಲ್ಲಿ ಒಂದು ಶಬ್ದವೂ ನಮಗೆ ತಿಳಿಯಲೇ ಇಲ್ಲ" ಎಂದು ಹೇಳಿದ್ದರಲ್ಲಿ ಅವರ ಭಾಷಣದ ಶ್ರೇಷ್ಠತೆಯ ಅರಿವು ವ್ಯಕ್ತವಾಗುತ್ತದೆ. ಒಂದು ಕಡೆ ತರಗತಿಗಳು ನಡೆದಿದ್ದರೆ ಮತ್ತೊಂದು ಕಡೆ ಸ್ವತಂತ್ರಪ್ರಿಯ ವಿದ್ಯಾರ್ಥಿಗಳು ತರಗತಿಗೆ ಚಕ್ಕರ್ ಹೊಡೆದು ತಿರುಗುತ್ತಾರೆ. ಇಂತಹ ಪರಿಸರದಲ್ಲಿ ಹಾಸ್ಯ ಪ್ರಸಂಗಗಳು ಹೇಗಿರುತ್ತವೆ ಎಂಬುದನ್ನು ಹೇಳುತ್ತಾ ತರಗತಿಯಲ್ಲಿ ಅಟೆಂಡೆನ್ಸ್ ತೆಗೆದುಕೊಳ್ಳುವ ಸಂದರ್ಭದಲ್ಲಿ ಹುಡುಗನೊಬ್ಬನ ನಂಬರಿಗೆ ಹಿಂದಿನಿಂದ ಕೋಮಲೆಯ ಧ್ವನಿಯಿಂದ yes sir ಎನ್ನುವ ಹುಡುಗರು ಅದಕ್ಕೆ ಪ್ರತಿಯಾಗಿ "ಯಾರು ಏನನ್ನು ಪಡೆಯಲು ಹಾತೊರೆದು ವಿಫಲರಾಗುತ್ತಾರೋ ಅವರ ಅನುಕರಣೆ ಮಾಡುತ್ತಾರೆ" ಎಂದು ಮೊನಚಾಗಿ ಉತ್ತರಿಸುವ ಪ್ರಾಧ್ಯಾಪಕರ ಮಾತುಗಳು ತರಗತಿಯಲ್ಲಿ ಹಾಸ್ಯವನ್ನುಂಟು ಮಾಡುತ್ತವೆ.

ಕಾಲೇಜಿನ ಕ್ಲಾಸ್ ರೂಮಿನಲ್ಲಿ ನಡೆಯುವ ಪ್ರಸಂಗಗಳನ್ನು ಹೇಳುತ್ತಾ ಪ್ರಾಧ್ಯಾಪಕರು ಸೂಟು ಭೂಟುಧಾರಿಯಾಗಿ ವೇದಿಕೆ ಮೇಲೆ ಏರಿದಾಗಲೂ ವಿದ್ಯಾರ್ಥಿಗಳ ಗುಜು ಗುಜು ನಡೆದೇ ಇರುತ್ತದೆ. ಪ್ರಾಧ್ಯಾಪಕರೊಮ್ಮೆ ಕೆಕ್ಕರಿಸಿ ನೋಡಿದರೆ ಸ್ತಬ್ಧವಾಗುವ ವಿದ್ಯಾರ್ಥಿಗಳು ಇವರು ಕಲಿಹಲಗೆಯ ಕಡೆ ತಿರುಗಿದರೆ ಸಾಕು ವಿದ್ಯಾರ್ಥಿಯೊಬ್ಬ ಕಾಗದದ ಬಾಣವೊಂದನ್ನು ಗುರಿಯಿಟ್ಟು ಹೊಡೆಯುವ ಅರ್ಜುನನಾಗಿರುತ್ತಾನೆ. ಇದರಿಂದ ಕುಪಿತಗೊಂಡು ಚಾಕ್ ಪೀಸ್ ವೊಂದನ್ನು ತೆಗೆದುಕೊಂಡು ಹೊಡೆದರೆ ಅದು ವಿದ್ಯಾರ್ಥಿನಿಯೊಬ್ಬಳ ಎದೆಗೆ ಬಡಿದದನ್ನು ಕಂಡು 'ಏನ್ ಗುರಿಯಪ್ಪ ಮಗಂದು' ಎಂದು ಹಾಸ್ಯ ಚಟಾಕಿ ಹಾರಿಸುವ ವಿದ್ಯಾರ್ಥಿಗಳ ಅವಿವೇಕವನ್ನು ಹಾಸ್ಯತ್ಮಕವಾಗಿ ಹೇಳಿದ್ದಾರೆ. ಇಂತಹ ಮಂಗಾಟಗಳ ನಡುವೆ ಸಾಗುವ ತರಗತಿಗಳು ನೆಪಮಾತ್ರಕ್ಕೆ ಮಾತ್ರ ನಡೆದು ಶೈಕ್ಷಣಿಕ ಗುಣಮಟ್ಟ ಕುಸಿಯುವಂತೆ ಮಾಡುತ್ತದೆ. ಹೊಸಬರೊಬ್ಬರು ಏನಾದರೂ ತರಗತಿಗೆ ಬಂದರೆ ಅವರನ್ನು ಸೊಸೆಯರಂತೆ ನಡೆಸಿಕೊಳ್ಳುವ ವಿದ್ಯಾರ್ಥಿಗಳು ಅವರನ್ನು ಗಾಬರಿಗೊಳಿಸಿ, ಅವರಿಂದ ಏನನ್ನು ಹೇಳದಂತೆ ಮಾಡಿ ಇನ್ನೊಮ್ಮೆ ತರಗತಿಗೆ ತಿರುಗಿ ನೋಡದಂತೆ ಮಾಡುತ್ತಾರೆ. ಇಂತಹ ಪ್ರಸಂಗಗಳು ಕಾಲೇಜಿನಲ್ಲಿ ದಿನನಿತ್ಯ ನಡೆದು ಕಾಲೇಜು ಶಿಕ್ಷಣದ ಗುಣಮಟ್ಟ ಕುಸಿಯುವುದಕ್ಕೆ ಕಾರಣವಾಗಿದೆ ಎಂದಿದ್ದಾರೆ.

ಕಾಲೇಜಿನಲ್ಲಿ ಹುಡುಗಿಯರ ಸ್ಥಿತಿ ಯಾವಾಗಲೂ ಗಂಭೀರವಾದದ್ದಾಗಿರುತ್ತದೆ ಎಂದು ಹೇಳುವ ಲೇಖಕರು ದಿನವಿಡಿ ಇವರ ಗಮನ ಸೆಳೆಯಲು ಹುಡುಗರು ಏನೆಲ್ಲಾ ಮಂಗಚೇಷ್ಟೆ ಮಾಡುತ್ತಾರೆ. ಇದರಿಂದ ಆ ಹುಡುಗಿಯರು ಏನಾದರೂ 'ಏ ಕೋತಿ ಸುಮ್ಮನೆ ಕೂಡು' ಎಂದರೆ ಅದನ್ನೆ ಬೆಂಚು ಬಾರಿಸಿ ನಗುವ ಹುಡುಗರ ಸಮೂಹಕ್ಕೆ ನಾಚಿಕೆಯೆಂಬುದೇ ಇರುವುದಿಲ್ಲ. ಇನ್ನೊಂದು ಕಡೆ ಪ್ರಾಧ್ಯಾಪಕರು

ಲೇಟಾಗಿ ಬರುವ ವಿದ್ಯಾರ್ಥಿನೀಯರಿಗೆ "ನೀವು ಮಂದಗಮನೆಯರೋ, ಅಥವಾ ಗಜಗಮನೆಯರೋ"?[೬೨] ಎಂದು ಹಾಸ್ಯ ಚಟಾಕಿ ಹಾರಿಸುವ ಪೀಡಕರಾಗಿರುತ್ತಾರೆಂದು ಅಲ್ಲಿನ ವಸ್ತುಸ್ಥಿತಿಯ ಅರಿವು ಮೂಡಿಸಿದ್ದಾರೆ. ನಾಯಿ ಕೊಡೆಗಳಂತೆ ಹುಟ್ಟಿಕೊಂಡ ಕಾಲೇಜುಗಳಲ್ಲಿಯ ವಯಸ್ಕರಾದವರ ದಂಡು ನೆರೆದು ಪ್ರಾಧ್ಯಾಪಕರ ಅರಣ್ಯರೋಧನದ ನಡುವೆ ನಿದ್ದೆ ಮಾಡಿ ಪ್ರವಚನ ಮುಗಿದ ನಂತರ ಆಕಳಿಸುತ್ತಾ ಹೊರಬೀಳುವವರಿದ್ದಾರೆ. ಒಂದು ವೇಳೆ ಕಾಲೇಜಿನಲ್ಲಿ ಸಾಂಸ್ಕೃತಿಕ ಚಟುವಟಿಕೆಗಳು, ಎಲೆಕ್ಷನ್ ಎಂಬ ಭೂತ ಹೊಕ್ಕರೆ ಸಾಕು ಕ್ರಿಯಾಶೀಲರಾಗಿ ತಮ್ಮ ಕಾರ್ಯ ಚಟುವಟಿಕೆಗಳಲ್ಲಿ ತೊಡಗುತ್ತಾರೆ. ಇಂತಹ ವಾತಾವರಣವನ್ನು ಸೃಷ್ಟಿಸುವ ಕಾಲೇಜುಗಳು ನಮ್ಮ ನಿಮ್ಮಲ್ಲಿ ಸಾಕಷ್ಟಿವೆ ಎಂಬ ಅರಿವು ಮೂಡಿಸಿದ್ದಾರೆ.

ಕಾಲೇಜುಗಳಲ್ಲಿ ಉತ್ತಮ ಪ್ರಾಧ್ಯಾಪಕರ ಜೊತೆ ಮರೆಗುಳಿ ಪ್ರಾಧ್ಯಾಪಕರು ಇರುತ್ತಾರೆ. ಅವರ ಸ್ವಂತ ಮಕ್ಕಳನ್ನು ಗುರುತಿಸಿದ ಅವರು, ಮೇಡಂ ಒಬ್ಬರಿಗೆ ಇವನು ನಿಮಗೆ ಎಷ್ಟನೇ ಮಗನೆಂದು? ಅವಿವಾಹಿತರಾದ ಅವರಿಗೆ ಕೇಳಿದ್ದು ಆತನ ಮರೆಗುಳಿಯ ಅವಿವೇಕತನ ತೋರಿಸುತ್ತದೆ. ಇಂತಹ ಪ್ರಾಧ್ಯಾಪಕರು ಬಿ.ಎ.ಕ್ಲಾಸಿನಲ್ಲಿ ಪಿ.ಯು.ಸಿ ಪಾಠ ಮಾಡಿ ವಿದ್ಯಾರ್ಥಿಗಳ ನಗೆ ಪಾಟಲಿಗೆ ಗುರಿಯಾಗುತ್ತಾರೆ. ಹಾಗೇನೇ ಗಾಂಧಿ ಜಯಂತಿಯಂದು ಪ್ರಾಧ್ಯಾಪಕರೊಬ್ಬರು ಮಾಡಿದ ಸ್ಫೂರ್ತಿದಾಯಕ ಭಾಷಣ ಕೇಳಿ ವಿದ್ಯಾರ್ಥಿಯೊಬ್ಬ "ಗಾಂಧೀಜಿ ಅಂದರೆ ಯಾರು ಸಾರ್? ನಮ್ಮ ಇಂದಿರಾ ಗಾಂಧೀಜಿಯವರ ತಂದೆ ಏನ್ರೀ ಸಾರ್?"[೬೩] ಎಂದು ಕೇಳಿದಕ್ಕೆ 'ನಿನ್ನ ತಲೆ' ಎಂದು ಉತ್ತರಿಸುವ ಅವರ ಅಲ್ಪ ಪಾಂಡಿತ್ಯ 'ಯಥಾ ಶಿಕ್ಷಕ ತಥಾ ಶಿಷ್ಯ' ಎಂಬ ಗಾದೆಗೆ ಸೂಕ್ತವೆನಿಸುತ್ತದೆ. ಹೀಗೆ ಕಾಲೇಜೊಂದರಲ್ಲಿ ನಡೆಯುವ ಕೆಲವು ಅವಿವೇಕದ ಪ್ರಸಂಗಗಳು ಹಾಸ್ಯವನ್ನು ವ್ಯಕ್ತಪಡಿಸಿದರೂ ಅವುಗಳಲ್ಲಿ ಶೈಕ್ಷಣಿಕ ಜವಾಬ್ದಾರಿಯ ಕಳಕಳಿಯ ಅರಿವನ್ನು ಸೂಚ್ಯವಾಗಿ ವ್ಯಕ್ತಪಡಿಸಿರುವುದನ್ನು ಗುರುತಿಸಬಹುದಾಗಿದೆ.

### ಪ್ರಾಧ್ಯಾಪಕರ ಸಿಟ್ಟು

ಹಿಂದೆ ಒಂದು ಕಾಲದಲ್ಲಿ "ಗುರುಬ್ರಹ್ಮ, ಗುರುವಿಷ್ಣು, ಗುರುದೇವೋ ಮಹೇಶ್ವರ" ಎಂಬ ಕಾಲವಿತ್ತು. ಒಂದು ಅಕ್ಷರ ಕಲಿಸಿದಾತನೇ ಗುರುವೆಂದು ತಿಳಿದು ಶಿಷ್ಯ ಗುರುವಿನ ಗುಲಾಮನಾಗುತ್ತಿದ್ದ. ಆದರೆ ಇಂದು ಅದಕ್ಕೆ ವ್ಯತಿರಿಕ್ತವೆಂಬಂತೆ, ಗುರು ಶಿಷ್ಯನ ಗುಲಾಮನಾಗಿ 'ಶಿಷ್ಯ ದೇವೋಭಾವ' ಎನ್ನುವಂತ ಕಾಲ ಸನ್ನಿಹಿತವಾಗಿದೆ. ಇಂತಹ ಕಾಲದಲ್ಲಿ ಶಿಕ್ಷಕನಾದವನಿಗೆ ವಿದ್ಯಾರ್ಥಿ ಹಾಗೂ ಸಮಾಜ ತೋರಿಸುವ ಅನಾಧರದಿಂದ ಶಿಕ್ಷಕನ ಸ್ಥಾನಮಾನಕ್ಕೆ ಬೆಲೆ ಇಲ್ಲದಂತಾಗಿದೆ ಎಂಬ ಅಂಶವನ್ನು ವಿವಿಧ ಪ್ರಸಂಗಗಳ ಮೂಲಕ ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

"ಮನುಷ್ಯನಿಗೆ ಕೋಪ ಬರುವುದು ಒಳ್ಳೆಯದೋ ಕೆಟ್ಟದೋ ಗೊತ್ತಿಲ್ಲ. ಆದರೆ ಶಿಕ್ಷಕರಿಗೆ ಮಾತ್ರ ಸಿಟ್ಟು ಎಂದೂ ಬರಬಾರದು." ಒಂದು ವೇಳೆ ಬಂದರೆ ಅವರ ಅಳಿಗಾಲ ಬಂತೆಂದು ತಿಳಿಯಬೇಕು"[೬೪]

ಎಂದು ಲೇಖಕರು ಶಿಕ್ಷಕನಾದವನ ಕೋಪ ಧವಡೆಗೆ ಮೂಲವಾಗುತ್ತದೆ ಎಂಬರ್ಥದಲ್ಲಿ ಹೇಳಿ ಅದನ್ನು ಕೆಲವು ಪ್ರಸಂಗಗಳಿಂದ ದೃಢಪಡಿಸುತ್ತಾರೆ. ಶಿಕ್ಷಕನಾದವನು ಮಾನಾಪಮಾನಗಳನ್ನು ಸಮನಾಗಿ ಸ್ವೀಕರಿಸುವವನಾಗಬೇಕು, ಯಾರ ಮೇಲೂ ಸಿಟ್ಟಿಗೆ ಬರುವಂತಿಲ್ಲ. ಈತನು ಆಯುಷ್ಯವಿಡಿ ಮಕ್ಕಳೊಂದಿಗೆ ಜೀವನ ಕಳೆದರೂ ಸಾರ್ವಜನಿಕರ ಕಣ್ಣಿಗೆ ಕಾಣುವ ವ್ಯಕ್ತಿಯಾಗುವುದಿಲ್ಲ. ಏಕೆಂದರೆ "ಇವರೇನು ಲಂಚಕೋರ ಅಧಿಕಾರಿಯೇ, ದೇಶದ ಉದ್ಧಾರದ ಹೆಸರೇಳಿ ಕೊಳ್ಳೆ ಹೊಡೆಯುವ ರಾಜಕಾರಣಿಯೇ?" ಎಂದು ಕೊಂಕು ಪ್ರಶ್ನೆ ಹಾಕುವ ಲೇಖಕರು ನಾಲ್ಕನೇ ವರ್ಗದ ಅಧಿಕಾರಿಯಾದ ಪೋಲಿಸ್ ಪೇದೆಗೆ ಇರುವಷ್ಟು ಮಾನ ಶಿಕ್ಷಕನಿಗೆ ಇಲ್ಲದಾಯಿತಲ್ಲ ಎಂಬ ಕೊರಗನ್ನು ತೋರ್ಪಡಿಸಿದ್ದಾರೆ.

ಶಿಕ್ಷಕನಿಗೆ ಸಂಬಂಧಿಸಿದ ವಿದ್ಯೆ ವಿದ್ಯಾರ್ಥಿಗಳ ಮುಂದೆ ಅದು ಹೋಮ ಮಾಡಿದಂತಾಗಿದೆ. ಇಂದು ಪರೀಕ್ಷೆಗಳಲ್ಲಿ ನಡೆಯುವ ಅಕ್ರಮ, ಅನೀತಿ ಪ್ರಸಂಗಗಳಿಂದ ಅದು ಧೃಢವಾಗಿದೆ ಎಂದಿದ್ದಾರೆ. ಪರೀಕ್ಷೆಯಲ್ಲಿ ರೂಮು ಸುಂಪರವೈಜರಾದವರು ನಕಲಿಗೆ ಸಹಕರಿಸುವ ಧೃತರಾಷ್ಟ್ರರಾಗಿ ಕಂಡುಬರುತ್ತಾರೆ. ವಿದ್ಯಾರ್ಥಿಗಳು ಡೆಸ್ಕಿನ, ಮೇಲೆ ಬೆಂಚಿನ ಕೆಳಗೆ ಕರ್ಚಿಪ್ ಒಳಗೆ ಮುಂತಾದ ಸ್ಥಳಗಳಲ್ಲಿ ಕಾಪಿಯ ಮ್ಯೂಜಿಯಂನ್ನು ತುಂಬಿಕೊಂಡು ಪರೀಕ್ಷೆ ಬರೆಯುತ್ತಿದ್ದಾರೆ. ಇಂತಹ ಪರೀಕ್ಷಾ ಕೇಂದ್ರಕ್ಕೆ ಹಿರಿಯ ಮೇಲ್ವಿಚಾರಕರಾಗಿ ಬರುವವರು ತಮ್ಮ ಕಟ್ಟುನಿಟ್ಟಿನ ಧ್ಯೇಯದಿಂದ ಸಿಕ್ಕಿಹಾಕಿಕೊಂಡ ವಿದ್ಯಾರ್ಥಿಯ ಪೇಪರನ್ನು ಕಸಿಯುವಲ್ಲಿ ಹರಿದ ಪತ್ರಿಕೆಯನ್ನು ನೋಡಿದ ವಿದ್ಯಾರ್ಥಿ. ಇವರ ಕೆನ್ನೆಗೆ ಜೋರಾಗಿ ಹೊಡೆದಿದ್ದು, ಆ ವಿದ್ಯಾರ್ಥಿಗಳ ಉದ್ದಟತನ ತೋರಿಸುತ್ತದೆ. ಇದನ್ನು ಕಂಡು ಕಾಣದಂತೆ ತಟಸ್ಥವಾಗಿರುವ ಪ್ರಿನ್ಸಿಪಾಲರನ್ನು ನೋಡಿ ಶಿಕ್ಷಕರಾದವರೂ ಎಂದೂ ಕೋಪಗೊಂಡು ತಮಗೆ ತಾವೇ ದಾಳಿ ತಂದುಕೊಳ್ಳಬಾರದೆಂಬ ನಿಲುವು ತಾಳಿದ್ದು ವಸ್ತುಸ್ಥಿತಿಗೆ ಹಿಡಿದ ಕೈಗನ್ನಡಿಯಾಗಿದೆ.

ಬಸ್ಸುಗಳಲ್ಲಿ ಪ್ರಯಾಣಿಸುವ ಒಂದು ಸಂದರ್ಭವನ್ನು ಹೇಳುತ್ತಾ ತಾವು ಪ್ರಯಾಣಿಸುವ ಬಸ್ಸಿನಲ್ಲಿ ಗದ್ದಲದಿಂದ ಸೀಟುಗಳಿಲ್ಲದೆ ನಿಂತು ಪ್ರಯಾಸ ಪಡುವ ಇವರ ಸಂಕಷ್ಟವನ್ನು ನೋಡಿ ಸೀಟಿನಲ್ಲಿ ಆಯಾಗಿ ಕುಳಿತು ಸಿನಿಮಾ ಒಂದರ ಕುರಿತು ಹರಟೆ ಹೊಡೆಯುವ ವಿದ್ಯಾರ್ಥಿಗಳು, ಇವರ ಕಷ್ಟವನ್ನು ನೋಡಿ ಸಹಕರಿಸದೆ ಹಿಗ್ಗಿ ಹಿರೇಕಾಯಿಯಾದುದನ್ನು ನೋಡಿ ಕೋಪಗೊಂಡು ಹಿರಿಯರಿಗೆ, ಶಿಕ್ಷಕರಿಗೆ ಗೌರವ ಕೊಡದ ಇಂತವರನ್ನು ಸುಡಲು ಮೂರನೇ ಕಣ್ಣು ಕೊಡು ಎಂದು ದೇವರಲ್ಲಿ ಪ್ರಾರ್ಥಿಸುತ್ತಾರೆ. ಇಲ್ಲಿ ಕೋಪ ವ್ಯಕ್ತವಾದರೂ ತಮಗೆ ಗೌರವ ಸಿಗದಿದ್ದಕ್ಕಾಗಿ ಕೋಪಗೊಳ್ಳುವುದು ತನಗೆ ತರವಲ್ಲ ಎಂದುಕೊಂಡಿದ್ದು ವಿವೇಚನಾಯುಕ್ತವಾದ ನಿರ್ಧಾರವೆನಿಸುತ್ತದೆ.

ಶಿಕ್ಷಕರಾದವರು ಸಿನಿಮಾಕ್ಕೆ ಹೋದರೂ ಅಲ್ಲಿಯೂ ಸಹ ವಿದ್ಯಾರ್ಥಿಗಳ ಗುಂಪು ಇವರನ್ನು ನೋಡಿ ಪ್ರಾಧ್ಯಾಪಕ ಮಹೋದಯರು ಕಾಮಶಾಸ್ತ್ರವನ್ನು ನೋಡಬೇಕಾಯ್ತೋ! ಎಂದು ಹೀಗಳೆವ ಸಂದರ್ಭದಲ್ಲಿ ಅವರ ಹಗುರ ಮಾತಿನಿಂದ ಕುಪಿತಗೊಳ್ಳದ ನಿರ್ಧಾರಕ್ಕೆ ಬಂದು, ಶಿಕ್ಷಕನಾದವನು

ಸಿನಿಮಾ ನೋಡುವ ಸ್ವತಂತ್ರವನ್ನು ಪಡೆಯಲಾರದ ಸ್ಥಿತಿಗೆ ಬಂದಿದ್ದನ್ನು ಸೂಚ್ಯವಾಗಿ ಹೇಳಿದ್ದಾರೆ. ಇನ್ನು ಸಾರ್ವಜನಿಕರು ಶಿಕ್ಷಕರನ್ನು ವ್ಯವಹಾರ ಶೂನ್ಯರೆಂದು ತಿಳಿದು ಬಾಡಿಗೆಗೆಂದು ಕೊಟ್ಟ ಮನೆಗೆ ಮೂಲ ಅವಶ್ಯಕತೆಗಳನ್ನು ಒದಗಿಸದೇ ಅವರನ್ನು ಹೊರಹಾಕುವ ಕಾತರತೆಯಲ್ಲಿರುತ್ತಾರೆ. ಇಂತಹ ಪ್ರಸಂಗದಲ್ಲಿ ಯಾರ ಸಹಾನುಭೂತಿಯೂ ದೊರೆಯದೆ, ನೆರವೂ ಸಿಗದೇ ಒದ್ದಾಡುವ ಪರಸ್ಥಿತಿಗೆ ತರುವ ಸಾರ್ವಜನಿಕರು. ಶಿಕ್ಷಕನಿಗೆ ಅವರು ತೋರುವ ನಿಷ್ಠೆ ಎಂತಹದ್ದು ಎಂಬ ಅರಿವಾಗುತ್ತದೆ.

ಉಳಿದ ಸರಕಾರಿ ನೌಕರರಿಗಿಂತ ಇವರ ಸ್ಥಾನ ಎಂತಹದು ಎಂದು ತಿಳಿಯುವಲ್ಲಿ ಒಂದು ಸಲ ವಕೀಲನಿಗೆ "ಮನಷ್ಯನಿಗೆ ಒಂದೇ ಉದ್ಯೋಗ ಎಂಬ ಕಾಯಿದೆ ಜಾರಿಯಲ್ಲಿದೆಯೇ? ಎಂದು ಕೇಳಿದವರು ಪ್ರಾಧ್ಯಾಪಕರೆಂದು ತಿಳಿದ ಮೇಲೆ, ಕುತ್ಸಿಕ ನಗೆ ನಕ್ಕು 'ಸರಿಹೊಯ್ತು ನೀವು ಪ್ರಶ್ನೆ ಕೇಳಿದಾಗಲೇ ಸಂಶಯ ಬಂದಿತ್ತು. ನೀವು ಪ್ರಾಧ್ಯಾಪಕರೆಂದ ಮೇಲೆ ಈ ಸಮಸ್ಯೆ ಎದ್ದಿರಲೇಬೇಕು"[೨೯]ಎಂಬ ಅವರ ತಿರಸ್ಕಾರದ ನುಡಿಯಿಂದ ಶಿಕ್ಷಕರಾದವರು ಬುದ್ಧಿಗೇಡಿ ಸಮಾಜದಲ್ಲಿ ನಿರ್ವಿರ್ಯರಾದೆವೆಂದು ಕೊಂಡು ಸುಮ್ಮನಾದುದು, ಶಿಕ್ಷಕನು ತನ್ನ ಅಸ್ತಿತ್ವದ ಬಗ್ಗೆ ಸಮಾಜ ತೋರುವ ಪ್ರತಿಕ್ರಿಯೆಯಿಂದ ತಟಸ್ಥವಾದ ಮನೋವ್ಯಥೆ ವ್ಯಕ್ತವಾಗಿದೆ. ಇನ್ನು ಸರಕಾರಿ ಕಛೇರಿಗಳಲ್ಲಿ ಸಹ ಶಿಕ್ಷಕನಿಗೆ ಕೊಡು ಎನ್ನುವ ಔದಾರ್ಯವನ್ನು ತೊರದ ಕಾರಕೂನನಾದರೆ, ಹಳೆಯ ವಿದ್ಯಾರ್ಥಿಯೊಬ್ಬ ರೆವಿನ್ಯೂ ಇನ್ಸ್‌ಪೆಕ್ಟರ್‌ರಾದರೂ ಅವನಿಂದ ಕೆಲಸವಾಗ ಬೇಕಾದರೆ ಹತ್ತುಸಾರಿ ತಿರುಗಾಡಿಸುತ್ತಾನೆ. ಕೊನೆಗೆ ಅವನ ವಿರುದ್ಧ ಸಿಟ್ಟಿಗೆ ಬಂದರೆ ಮೇಲಾಧಿಕಾರಿಯನ್ನು ಕಾಣಬಹುದೆಂಬುವ ಅವನ ತಾತ್ಸಾರದ ನುಡಿಯಿಂದ ಶಿಕ್ಷಕನಿಗೆ ಕೋಪ ಎಂದಿಗೂ ಒಳ್ಳೆಯದಲ್ಲ ಎಂಬ ನಿರ್ಣಯಕ್ಕೆ ಬಲವಾಗಿ ಕಟ್ಟುಬಿದ್ದರು. ಸಮಕಾಲೀನ ಸಮಾಜದಲ್ಲಿನ ಶಿಕ್ಷಕನ ವ್ಯಕ್ತಿತ್ವಕ್ಕೆ ಬೆಲೆ ಇಲ್ಲದಂತಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡ ವಿಶಾದ ಈ ಪ್ರಬಂಧದಲ್ಲಿ ವ್ಯಕ್ತವಾಗಿದೆ.

**ವಿದ್ಯಾರ್ಥಿಗಳ ಟೊಂಕ ಪಟ್ಟಿಯಲ್ಲಿ ಒಂದು ರತ್ನ**

ಶಾಲಾ ಕಾಲೇಜುಗಳಲ್ಲಿ ನಡೆಯುವ ಪರೀಕ್ಷೆಗಳಲ್ಲಿ ನಕಲು ಎಂಬ ಪೆಡಂಭೂತ ತನ್ನ ಕಬಂದ ಬಾಹುವಿನಿಂದ ಇಡೀ ಶಿಕ್ಷಣ ವ್ಯವಸ್ಥೆಯನ್ನು ಹೇಗೆ ಅವ್ಯವಸ್ಥೆಗೆ ತಂದು ನಿಲ್ಲಿಸಿದೆ ಎಂಬ ಸತ್ಯವನ್ನು ಹೇಳುವ ಈ ಪ್ರಬಂಧದಲ್ಲಿ, ನಕಲಿಗೆ ಸಹಕರಿಸುವ ಆಯೋಗ್ಯ ಶಿಕ್ಷಕರೂ ಹಾಗೂ ಪಾಲಕರ ವರ್ತನೆಯನ್ನು ಬಿಂಬಿಸುತ್ತಾ, ವಿದ್ಯಾರ್ಥಿಗಳಲ್ಲಿನ ಜಾಣ್ಮೆ ಎಂತಹದು ಎಂಬುದನ್ನು ಅವರ ನಕಲಿನ ಅವಾಂತರದಿಂದ ತೋರ್ಪಡಿಸಿ, ಇಂದಿನ ಶಿಕ್ಷಣದಲ್ಲಿನ ಪರೀಕ್ಷಾ ವ್ಯವಸ್ಥೆಯನ್ನು ವಿಡಂಬನಾತ್ಮಕವಾಗಿ ವ್ಯಕ್ತಪಡಿಸಿದ್ದಾರೆ.

ಪರೀಕ್ಷೆಗಳು ಬಂದವೆಂದರೆ ಶಾಲಾ ಕಾಲೇಜುಗಳ ಮುಂದೆ ಗಡಿಬಿಡಿಯಿಂದ ಓಡಾಡುವ ವಿದ್ಯಾರ್ಥಿಗಳು ಪರೀಕ್ಷಾ ರಾಕ್ಷಸನನ್ನು ಸದೆ ಬಡಿಯಲು ಅನೇಕ ಅಸ್ತ್ರಗಳನ್ನಿಟ್ಟುಕೊಂಡು ಸಿದ್ಧರಾಗಿರುತ್ತಾರೆ.

ಪರೀಕ್ಷೆ ಪ್ರಾರಂಭವಾದ ಕೂಡಲೇ ಹೊರಗಡೆ ಸ್ಮಶಾನ ಮೌನ ಆವರಿಸಿದರೆ, ಒಳಗಡೆ ನಡೆಯಬಾರದ ಅಕ್ರಮ ಚಟುವಟಿಕೆಗಳು ನಡೆದಿರುತ್ತವೆ. "ಇಂದಿನ ಕಾಲದಲ್ಲಿ ಕಾಪಿ ಮಾಡದ ವಿದ್ಯಾರ್ಥಿ ಯಾರಾದರೂ ಇದ್ದರೆ ತೋರಿಸಿ ಆತನನ್ನು ನೋಡುವುದರಿಂದ ತಮಗೆ ತೀರ್ಥಯಾತ್ರೆಯ ಪುಣ್ಯ ಬರುತ್ತದೆ" ಎನ್ನುವ ಲೇಖಕರು ವಿದ್ಯಾರ್ಥಿಗಳ ನಕಲಿನ ಅವಲಂಬನೆ ಎಷ್ಟು ಎಂಬ ಅರಿವಾಗುತ್ತದೆ. ಪರೀಕ್ಷೆಗಳನ್ನು ನಾಟಕಗಳೆಂದೂ, ಯುದ್ಧಗಳೆಂದು ಕರೆಯುವ ಲೇಖಕರು ಅದಕ್ಕೆ ವಿದ್ಯಾರ್ಥಿಗಳು ಪ್ರಾಮಾಣಿಕವಾಗಿ ಪರೀಕ್ಷೆ ಬರೆಯುವಂತೆ ನಟಿಸುತ್ತಾರೆ. ಮೇಲ್ವಿಚಾರಕರು ನಕಲು ಮಾಡುವ ವಿದ್ಯಾರ್ಥಿಯನ್ನು ಹಿಡಿಯುವಂತೆ ನಟಿಸುತ್ತಾರೆ. ಇದೊಂದು ಕಣ್ಣಾಮುಚ್ಚಾಲೆ ಆಟದಂತೆ ನಾಟಕೀಯ ರಂಗಭೂಮಿ ಎಂದು ಅಲ್ಲಿನ ಸ್ವೇಚ್ಛಾಚಾರಿಕೆಯನ್ನು ಟೀಕಿಸಿದ್ದಾರೆ. ಇನ್ನೂ ಯುದ್ಧಗಳೆಂದರೆ ಮೇಲ್ವಿಚಾರಕ, ವಿದ್ಯಾರ್ಥಿಗಳ ನಡುವಿನ ಹೋರಾಟ, ಮೇಲ್ವಿಚಾರಕರ ದೊಡ್ಡ ಜಾಲವನ್ನೇ ನಿರ್ಮಿಸಿಕೊಂಡರೂ ಅದಕ್ಕೆ ಪರ್ಯಾಯವಾಗಿ ಆಪ್ತ ಸಹಾಯಕರನ್ನು ಇಟ್ಟುಕೊಳ್ಳುವ ವಿದ್ಯಾರ್ಥಿಗಳು ಸಮಬಲರಾಗುತ್ತಾರೆ. ಮೇಲ್ವಿಚಾರಕರು ನಿಮ್ಮಲ್ಲಿರುವ ಚೀಟಿಗಳನ್ನು ನಮಗೆ ಕೊಡಿ ಎಂದು ಕೇಳಿದರೆ 'ಎಲಾ ಬಕರಾ ನಿನ್ನ ನೀರು ನಮಗೆ ಗೊತ್ತು' ಎನ್ನುವ ವಿದ್ಯಾರ್ಥಿಗಳು ಟೊಂಕಪಟ್ಟಿಯಲ್ಲಿ, ಪ್ಯಾಂಟಿನ ಜೇಬುಗಳಲ್ಲಿ, ಇನ್ನು ಮುಂತಾದ ಗುಪ್ತ ಸ್ಥಳಗಳಲ್ಲಿ ಚೀಟಿಯ ನಿಧಿಯೇ ತುಂಬಿರುತ್ತದೆ. ಇಂತಹ 'ವಿದ್ಯಾರ್ಥಿಗಳ ಜೇಬೆಂದರೆ ದ್ರೌಪದಿಯ ವಸ್ತ್ರವಿದ್ದಂತೆ' ನೀವು ತೆಗೆಯುತ್ತಾ ಹೋದಂತೆ ಅಲ್ಲಿ ಅಕ್ರಮ ಸಂಗ್ರಹ ಹೊರಬರುತ್ತಲೇ ಇರುತ್ತದೆ ಎಂದು ನಕಲಿನ ಸ್ವಾರಸ್ಯವನ್ನು ಹೇಳಿದ್ದಾರೆ.

ವಿದ್ಯಾರ್ಥಿಗಳು ನಕಲಿಗೆ ಹತ್ತಾರು ವಿಧಾನಗಳನ್ನು ಬಳಸುತ್ತಾರೆ. ಹತ್ತು ನಿಮಿಷಕ್ಕೊಮ್ಮೆ ಮೂತ್ರಕ್ಕೆ ಹೋಗಿ ಅಲ್ಲಿಂದ ಕಾಪಿ ತರುವವರಿದ್ದಾರೆ. ಅರ್ಧಗಂಟೆಗೊಮ್ಮೆ ಪ್ರಶ್ನೆ ಕಾಗದ ಹೊರಗೆ ಕಳಿಸಿ ಜೆರಾಕ್ಸಿನಿಂದ ಉತ್ತರ ಪಡೆಯುವವರು ಇದ್ದಾರೆ. ಅಲ್ಲದೆ ಹೊರಗಡೆ ತಂದೆ, ಅಣ್ಣ, ಸ್ನೇಹಿತರ ನೆರವಿನಿಂದ ತಮ್ಮ ಕಾರ್ಯವನ್ನು ಸುಗಮವಾಗಿ ನಡೆಸಿರುತ್ತಾರೆ. ಹೊರಗಡೆ ಪೋಲೀಸರಿಂದ ಬೈಯಿಸಿಕೊಂಡು ಅವರ ಲಾಠಿ ರುಚಿಯನ್ನು ಪಡೆದರೂ ಬಿಡದೇ ಸಹಾಯಕರಾಗುವ ಆಪ್ತರಾದರೆ, ಒಳಗಡೆ ಚಪ್ಪಲಿಯ ಕೆಳಗೋ, ಕಾಲಿಗೆ ರಬ್ಬರ್‌ನಿಂದ ಸುತ್ತಿಕೊಂಡೋ, ಕೂದಲಲ್ಲಿ ಸಿಕ್ಕಿಸಿಕೊಂಡೊ ಬರುವ ರಮಣೀಯರೂ ತಾವೂ ಯಾರಿಗೂ ಕಡಿಮೆ ಇಲ್ಲವೆಂದು ಬೀಗುತ್ತಾರೆ. ಇಂತಹ ಕಾಪಿ ಎಂಬ ಪೆಡಂಭೂತ ಇಂದು ಶಾಲಾ ಕಾಲೇಜುಗಳಲ್ಲಿ ಸಾರ್ವತ್ರಿಕ ರೂಪ ಪಡೆದು ಶೈಕ್ಷಣಿಕ ವ್ಯವಸ್ಥೆಯನ್ನು ಅಧೋಗತಿಗೆ ತಂದು ನಿಲ್ಲಿಸಿದೆ. ಇಂದಿನ ಶಿಕ್ಷಣ ವ್ಯವಸ್ಥೆಗೆ ಜಡ್ಡಾಗಿ ಪರಿಣಮಿಸಿರುವ ಇದನ್ನು ನಿವಾರಿಸಲು ಯಾವ ಧನ್ವಂತರಿ ಚಿಕಿತ್ಸೆಯೂ ಫಲಕಾರಿಯಾಗದೆಂಬ ಸತ್ಯವನ್ನು ಬಹಿರಂಗ ಪಡಿಸಿದ್ದಾರೆ. ಇಂತಹ ಹೇಸಿ ವರ್ತನೆಗೆ ನಮ್ಮ ಮೌಲ್ಯರಹಿತ ಸಮಾಜವೂ ಕಾರಣವಾಗಿ ಅಯೋಗ್ಯ, ಅದಕ್ಷ ಶಿಕ್ಷಕರನ್ನು ಸೃಷ್ಟಿಸಿ ಇಂತಹ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿದೆ ಎಂಬ ಅಂಶವನ್ನು ಈ ಪ್ರಬಂಧದಲ್ಲಿ ಗುರುತಿಸಬಹುದಾಗಿದೆ.

ಈ ರೀತಿಯಾಗಿ ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳಲ್ಲಿ ಶೈಕ್ಷಣಿಕ ವಿಚಾರಕ್ಕೆ ಸಂಬಂಧಿಸಿದ ಹಲವಾರು ಅಂಶಗಳನ್ನು ತಮ್ಮದೇ ಆದ ಶೈಲಿಯಲ್ಲಿ ಹಾಸ್ಯ ವಿಡಂಬನೆಯೊಂದಿಗೆ ಅಲ್ಲಿನ ಸಮಸ್ಯೆ, ಸವಾಲುಗಳನ್ನು ಚರ್ಚೆಗೆ ಒಳಪಡಿಸಿದ್ದನ್ನು ಕಾಣಬಹುದಾಗಿದೆ. ಇಂತಹ ಒಂದು ಕಾರ್ಯಕ್ಕೆ ಲಲಿತ ಮಾರ್ಗವನ್ನು ಬಳಸಿಕೊಂಡು ಅಲ್ಲಿನ ಓರೆ-ಕೋರೆಗಳನ್ನು ದರ್ಶಿಸಿದ್ದು, ವೀರೇಂದ್ರ ಸಿಂಪಿಯವರ ಪ್ರತಿಭೆಯ ಅಂತಃಸತ್ವ ತೋರಿಸುತ್ತದೆ.

### ೪.೫. ವೈಚಾರಿಕ

ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳು ಅವರ ಅಭಿವ್ಯಕ್ತಿಯ ಮಾಧ್ಯಮಗಳಾಗಿವೆ. ಇಂತಹ ಪ್ರಬಂಧಗಳಲ್ಲಿ ಮನಸ್ಸಿನ ಭಾವನೆ, ವೈಯಕ್ತಿಕ ನೋವು-ನಲಿವುಗಳ ಜೊತೆ ಜೀವನಕ್ಕೆ ಸಂಬಂಧಿಸಿದ ಕೆಲವು ವಿಚಾರಗಳನ್ನು ಸಮಕಾಲೀನ ಸಮಾಜದ ಸ್ಪಂದನೆಯೊಂದಿಗೆ ಚಿಂತನೆ-ಹಾಸ್ಯಗಳ ಮೂಲಕ ವಸ್ತು ವಿಷಯವೊಂದನ್ನು ವೈಚಾರಿಕ ನೆಲೆಯಲ್ಲಿ ನೋಡಿದ್ದಾರೆ. ಸಾಮಾನ್ಯ ವಸ್ತುವಿನಿಂದ ಅಸಾಮಾನ್ಯ ವಸ್ತುವಿನೆಡೆಗೆ ಸಾಗುವಂತೆ ರಚಿಸಿರುವ ಇವರ ಪ್ರಬಂಧಗಳಿಂದ ಹೊಸ ದೃಷ್ಟಿಯನ್ನು ವಿಚಾರ-ವಿಡಂಬನೆಗಳಿಂದ ಗುರುತಿಸಬಹುದು. ಉದಾಹರಣೆಗೆ

### ಭೂಮಿಗೆ ಭಾರವಾದವನು

ಮನುಷ್ಯ ಭೂಮಿ ಮೇಲೆ ಹುಟ್ಟಿಬಂದ ಮೇಲೆ ಏನಾದರೂ ಸಾಧನೆ ಮಾಡಬೇಕು. ಇಲ್ಲದಿದ್ದರೆ ಅವನನ್ನು ಕೂಳಿಗೆ ದಂಡವಾಗಿ, ಭೂಮಿಗೆ ಭಾರವಾದವನು ಎಂದು ಸಮಾಜ ಹೀಗಳೆಯುತ್ತದೆ. ಆದ್ದರಿಂದಲೇ ಲೇಖಕರು ತಮ್ಮನ್ನೆ ಭೂಮಿಗೆ ಭಾರವಾದವನು ಎಂದು ಸಮಾಜದ ಸೋಮಾರಿ ನಿಷ್ಕ್ರೀಯ ದಂಡಪಿಂಡ ಜನರು ಪ್ರತಿನಿಧಿತ್ವವಹಿಸಿ ಈ ಪ್ರಬಂಧದ ಮೂಲಕ ಇವರ ವ್ಯಕ್ತಿತ್ವದ ದರ್ಶನ ಮಾಡಿಸುತ್ತಾರೆ.

ಮಾನವರಲ್ಲಿ ಕೆಲವರು ಹುಟ್ಟಿ, ಬೆಳೆದು, ದೊಡ್ಡವನಾದರೂ ಅವನ ಸಾಧನೆ ಶೂನ್ಯವಾಗಿರುತ್ತದೆ. ಜೀವನದಲ್ಲಿ ವಯಸ್ಸು ಹೆಚ್ಚಾಗುವುದು ಬಿಟ್ಟರೆ ಸಾಧನೆಗಳಲ್ಲೇನು ಬದಲಾವಣೆ ಇರುವುದಿಲ್ಲ. ಕಾಲ ಉರುಳುತ್ತಿರುತ್ತದೆ. ಇಂತಹದರಲ್ಲಿ ದಿನವಡೀ ಆಸೆ, ಆಮೀಷಗಳಿಂದ ವ್ಯಕ್ತಿತ್ವದ ಭವ ಬಂಧನದಲ್ಲಿ ಸಿಕ್ಕು ನರಳಾಡುವ ಜನರು ಅಸೂಯೆ, ದುರ್ಗುಣಗಳಿಂದ ತಮ್ಮ ಅಧಃಪತನದ ಹಾದಿ ತಾವೇ ಕಂಡುಕೊಂಡಿದ್ದಾರೆ. ಇನ್ನೊಬ್ಬರ ಸಂಪತ್ತು, ಪಾಂಡಿತ್ಯಕ್ಕಾಗಿ ಕರುಬುವ ವ್ಯಕ್ತಿಯಾಗಿ ತನ್ನನ್ನು ತಾನು ಆತ್ಮಾವಲೋಕನ ಮಾಡಿಕೊಳ್ಳದೆ ತಾಳತಪ್ಪಿ ಕುಣಿದು, ದಣಿದು, ದಿಕ್ಕುತಪ್ಪಿ ನಿಂತ ನಿರಾಡಂಬರ ಜನರ ಪ್ರತಿನಿಧಿಯಾಗಿ ಲೇಖಕರು ಈ ಪ್ರಬಂಧದಲ್ಲಿ ಕಂಡುಬರುತ್ತಾರೆ.

ಆತ್ಮ ಪ್ರಶಂಸೆಯಿಂದ ಆತ್ಮ ವಂಚನೆಯಾಗುತ್ತದೆಯೇ ವಿನಃ ಉದಾತ್ತತೆ ಬೆಳೆಯಲಾರದು. ನಮ್ಮ ಸಾಮರ್ಥ್ಯ ನಮಗೆ ಗೊತ್ತು. ಇದರ ಅರಿವಿದ್ದರೂ ಸಹ ಸುಳ್ಳು ಆಶ್ವಾಸನೆಗಳಿಂದ ಪೊಳ್ಳು ಆಡಂಬರಕ್ಕೆ ಸಿಲುಕಿ ಮನಸ್ಸಿನ ಅತಿಶಯಕ್ಕೆ ಬಲಿಯಾಗಿ ಬದುಕಲಿಕ್ಕೆ ಅನರ್ಹರಾಗುತ್ತವೆ. ಇಂತಹ ಅಂಶಗಳ ಜೊತೆಗೆ ಪರನಿಂದೆ ಎಂಬ ಹೀನ ಕೃತ್ಯವನ್ನು ಕಾಯಕ ಮಾಡಿಕೊಂಡು ಎರಡನೆಯವರ ಅಳುವಿನಲ್ಲಿ ನಗುವನ್ನು ಕಾಣುವ, ಇನ್ನೊಬ್ಬರ ಸಾಧನೆಯನ್ನು ತುಚ್ಛವಾಗಿ ಭಾವಿಸುವ ಇವರು ತಮ್ಮ ಆತ್ಮವಲೋಕನಗೈಯದೇ ಪರರನ್ನು ಹೀಗಳೆಯುವುದನ್ನು ಲೇಖಕರು "ನಾಲಿಗೆ ಕುಲವನ್ನಷ್ಟೇ ಅರುಹುದಿಲ್ಲ, ವ್ಯಕ್ತಿಯ ವ್ಯಕ್ತಿತ್ವವೂ ಅಳೆದು ಚೆಲ್ಲುತ್ತದೆ" ಎಂದು, ಮಾತು ವ್ಯಕ್ತಿತ್ವವನ್ನು ಪ್ರತಿನಿಧಿಸುವ ಕಾರ್ಯದಿಂದ ಮಾವನನನ್ನು ಸಾಮಾಜಿಕ ತೀಕ್ಷ್ಣತೆಗೆ ಗುರಿ ಮಾಡುತ್ತದೆ ಎಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ.

ಆತ್ಮ ಪ್ರಶಂಸೆ ಮನದಲ್ಲಿ ನಡೆದರೆ, ಪರನಿಂದೆ ಬಾಹ್ಯವಾಗಿ ನಡೆಯುತ್ತದೆ. ಇದರ ಮೂಲಕ ಹರಟೆಗಳು ಸಹ ಸಾರ್ವಜನಿಕವಾಗಿ ನಡೆದು ನಡೆಯುತ್ತಡೆ. ಇದರ ಮೂಲಕ ಹರಟೆಗಳು ಸಹ ಸಾರ್ವಜನಿಕವಾಗಿ ನಡೆದು ನಿಗಧಿತ ಸಮಯವಿಲ್ಲದೆ ಅನ್ಯರ ಟೀಕೆ ಟಿಪ್ಪಣಿಗಳಲ್ಲಿ ಕಾಲ ಕಳೆದು ಮನೆಗೆ ಬಂದಾಗ ಕಳ್ಳಬೆಕ್ಕಿನಂತೆ ತಿರುಗುವ ದಂಡಪಿಂಡ ಜನರನ್ನು ಸಾಮಾಜಿಕ ಟೀಕೆಗೆ ಗುರಿಪಡಿಸುತ್ತಾರೆ. ದಿನವಿಡೀ ತಿನ್ನುವುದು, ಮಲಗುವುದು ಒಂದು ಕಾಯಕ ಮಾಡಿಕೊಂಡು ಏಕತಾನತೆಯ ಬರಡು ಜೀವನ ನಡೆಸುವ ಜನರ ಬದುಕು ರಸಹೀನವಾಗಿದೆ ಎಂದಿದ್ದಾರೆ. ಅದಕ್ಕೆ "ಪುನರಪಿ ಭೋಜನಂ ಪುನರಪಿ ಶಯನಂಗಳ ಗಾಣದಲ್ಲಿ ಸಿಕ್ಕು ಜರ್ಜರಿತನಾಗಿದ್ದೇನೆ" ಎಂದು ಅದಕ್ಕೆ ಅಜ್ಞಾನ ಅವಿವೇಕ ಅಂಧಕಾರಗಳೂ ಕಾರಣವಾಗಿವೆ ಎಂಬ ಅಂಶವನ್ನು ಆತ್ಮವಿವೇಚನೆಯ ಮೂಲಕ ವ್ಯಕ್ತಪಡಿಸಿದ್ದಾರೆ.

ನಾವು ಓದು ಬರಹದ ಜೊತೆ ವಿಚಾರ ಗ್ರಹಿಸುತ್ತವೆ. ಆದರೆ ಈ ವಿಚಾರದಿಂದ ಕವಿಗಾಗಲಿ, ಜನರಿಗಾಗಲಿ ಹೊಸದಿಕ್ಕನ್ನು ತೋರಿಸುವುದಿಲ್ಲ. ಅದಕ್ಕೆ ನಮ್ಮ ವಿಮರ್ಶಾ ಶೂನ್ಯತೆಯೇ ಕಾರಣವಾಗಿದೆ. ಕೃತಿಯ ಬಗೆಗಿನ ಅಸಡ್ಡೆ, ಓದುಭಟ್ಟ, ಕೂಚುಭಟ್ಟ ಎನ್ನುವಂತೆ ಇದ್ದು, ಜೀವನಕ್ಕೆ ಒಂದು ಅರ್ಥಕೊಡದೇ, ಭೂಮಿಗೆ ಭಾರವಾದವರೇ ಆಗುತ್ತಾರೆ ಎಂಬ ಅಂಶವನ್ನು ಈ ಮೂಲಕ ವ್ಯಕ್ತಪಡಿಸುತ್ತಾರೆ.

ದಿನ, ಸಮಯಗಳು ಕಳೆದರೂ ನಾವು ಸಾಧನೆಯಿಂದ ಸ್ಥಿತ ಪ್ರಜ್ಞಾರಾಗಿ ಉಳಿದಿದ್ದೇವೆ. ಇಂತಹ ಒಂದು ಪರಿಸ್ಥಿತಿಯನ್ನು ಲೇಖಕರು "ನಿದ್ದೆಗೊಮ್ಮೆ ಮರಣ, ಎದ್ದಸಲ ನವೀನ ಜನನ ನಮಗೆ ಏಕೆ ಬಾರದೋ" ಎಂದು ಕೇಳುವಲ್ಲಿ ನಿಷ್ಕ್ರಿಯ ಬದುಕಿನಿಂದ ಜನರು ನವೀನ ಜನನವನ್ನು ಪಡೆಯದೇ ಜಾಡ್ಯ ಮೂರ್ತಿಯಾಗಿ ಆಲಸ್ಯ ನಿಷ್ಕ್ರಿಯತೆಯಿಂದ ಭೂಮಿಗೆ ಭಾರವಾಗಿದ್ದನ್ನು ಹೇಳಿದ್ದಾರೆ. ನಾವು ಸಮಾಜದಿಂದ ಪಡೆದಿದ್ದಕ್ಕಿಂತ ಕಡಿಮೆ ಋಣವನ್ನು ತೀರಿಸಿದರೆ ನಾವು ಭೂಮಿಗೆ ಭಾರವೇ ಎಂದು ಹೇಳುವ ಲೇಖಕರು ಇಂತಹ ಭಾರವನ್ನು ಸಹಿಸುವ ಭೂಮಿ ಸಹನೆಯ ಮೂರ್ತಿ ಎಂದಿದ್ದಾರೆ. ತಾಯಿ ತನ್ನ ಮಗುವನ್ನು ರಕ್ಷಿಸುವಂತೆ, ಭೂಮಿ ತಮ್ಮ ಭಾರವನ್ನು ಸಹಿಸಿದೆ ಎಂದು ಭೌತಿಕ ಪ್ರಪಂಚದಲ್ಲಿ ಕೃತಿ ಜೀವನ ನಡೆಸಿ,

ಕಾಯಕ ನಿಷ್ಠೆ ಮರೆತು ಆ ಪರಿಸರಕ್ಕೆ ಹೊಣೆಗಾರನಾಗಿ ಬದುಕುವ ಜನರ ಜೀವನ ಶೈಲಿಯನ್ನು ತಮ್ಮ ಮೂಲಕ ವ್ಯಕ್ತಪಡಿಸಿ ಸಾಮಾಜಿಕ ಕಾಳಜಿಯನ್ನು ವೈಚಾರಿಕತೆ ಮೂಲಕ ಈ ಪ್ರಬಂಧದಲ್ಲಿ ತೋರ್ಪಡಿಸಿದ್ದು ವಿಶೇಷವಾಗಿದೆ.

## ಉದ್ದನ್ನ ವ್ಯಕ್ತಿಯ ಅಡೆತಡೆಗಳು

ಒಬ್ಬ ಎತ್ತರವಾಗಿ ಬೆಳೆದ ವ್ಯಕ್ತಿಯನ್ನು ಸಮಾಜ ನೋಡುವ ದೃಷ್ಟಿಕೋನ ಎಂತಹದು ಎಂದು, ಆವ್ಯಕ್ತಿಯ ವ್ಯಕ್ತಿತ್ವ ಹಾಗೂ ಗುಣಾವಗುಣಗಳನ್ನು ವ್ಯಕ್ತಪಡಿಸುವ ಈ ಪ್ರಬಂಧದಲ್ಲಿ ಉದ್ದ, ಮೊದ್ದ, ಸಾಧಾರಣ ಎನ್ನುವ ಬೌದ್ಧಿಕ ಭಿನ್ನತೆಯನ್ನು ಒಂದು ಸಾಮಾಜಿಕ ವೈರುಧ್ಯದ ಹಿನ್ನೆಲೆಯಲ್ಲಿ ಟೀಕೆ ಟಿಪ್ಪಣಿಗಳ ಮೂಲಕ ಲೇಖಕರೇ ಪ್ರಬಂಧದ ಪಾತ್ರಧಾರಿಯಾಗಿ, ತಮ್ಮದೇ ಆದ ವಿಚಾರ ಶೈಲಿಯಲ್ಲಿ ವ್ಯಂಗ್ಯ-ವಿಡಂಬನೆ ಮೂಲಕ ಪ್ರಸ್ತುತಪಡಿಸಿದ್ದಾರೆ.

'ರೀಪವ್ಯಾನ್ ವಿಂಕಲನು' ಸತತ ಹದಿನೆಂಟು ವರ್ಷ ನಿದ್ದೆ ಮಾಡಿ ಸೋಮಾರಿತನಕ್ಕೆ ಹೆಸರಾದವನು. ಇಂತಹ ರೀಪವ್ಯಾನ್‌ನು ಒಂದು ದಿನ ಎದ್ದು ತನ್ನ ಮೊಳಕಾಲು ಮುಟ್ಟುವ ಗಡ್ಡವನ್ನು ನೋಡಿದಂತೆ. ಲೇಖಕರು ಸಹ ತಾವು ಎತ್ತರವಾಗಿ ಬೆಳೆದಿದ್ದನ್ನು ಹೇಳುತ್ತಾರೆ. ಇಲ್ಲಿ ಬೆಳವಣಿಗೆ ದೈಹಿಕವಾಗಿಯೂ ಆಗಬಹುದು, ಇಲ್ಲ ವಿಚಾರದಿಂದ ಬೌದ್ಧಿಕತೆಯಲ್ಲಿ ದೊಡ್ಡವನಾಗಿರಬಹುದು. ಈ ರೀತಿಯಾಗಿ ಬೆಳೆದ ಇವರಿಗೆ ಜನರು 'ಉದ್ದನ್ನವರಿಗೆ ಬುದ್ದಿಯಿಲ್ಲ' ಎನ್ನುವ ತಿರಸ್ಕಾರ ಪೂರಿತ ಗಾದೆಯನ್ನಾಡುತ್ತಾರೆ. ಇಂತಹ ಗಾದೆಗಳೆಂದರೆ ಸಮಾಜವು ಉಗುಳಿದ ತಂಗುಳನ್ನವೆಂದು ಜರಿಯುವ ಲೇಖಕರು ಸಮಾಜದ ಜನರ ಅಸೂಯೇ ಬೆಳವಣಿಗೆಯನ್ನು ಬಿಡದು ಎಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಹಾಗೆ ಶಿಕ್ಷಕರಿಗೆ ಬುದ್ಧಿಯಿಲ್ಲವೆಂದು ಜರಿದು ಮತ್ತೇ ಅವರ ಬಳಿಗೆ ತಮ್ಮ ಮೇಣದ ಮುದ್ದೆಯಂತಿರುವ ಮಕ್ಕಳನ್ನು ಅದಾವ ಶ್ರದ್ಧೆಯಿಂದ ಕಳುಹಿಸುತ್ತಾರೆ ಎಂದು. ಹಾಗೆ ಸುಳ್ಳಿನ ಮೊಟ್ಟೆಯೆಂದು ವಕೀಲನನ್ನು ಜರಿದು ಮತ್ತೆ ಅವನ ಮನೆಗೇನೆ ಚಪ್ಪಲಿ ಹರಿಯುವಂತೆ ತಿರುಗುವ ಜನರ ಅವಿವೇಕವನ್ನು ಟೀಕಿಸುತ್ತಾರೆ. ವಿಶ್ವಾಸ ಘಾತಕಿ ಎಂದು ತಿಳಿದರೂ ಮತ್ತೆ ಅದೇ ಮುಖಂಡನನ್ನು ಆರಿಸಿ ಎಂ.ಎಲ್.ಎ. ಮಾಡುವ ಸಮಾಜದ ಜನರ ನೀತಿಯನ್ನು "ಪುರಾಣದ ಬದನೆಕಾಯಿ ತಿನ್ನುವ ಪುರಾಣಿಕರ ಸಂತೆ ಈ ಜಗತ್ತು"[೬೭] ಎಂದು ಜರಿದದ್ದು, ಸಮಾಜದ ಜನರ ಜೀವನ ದೃಷ್ಟಿಯನ್ನು ಹಾಗೂ ಅವರ ಕಾರ್ಯವನ್ನು ವಿಡಂಬನಾತ್ಮಕವಾಗಿ ವ್ಯಕ್ತಪಡಿಸಿದ್ದಾರೆ.

'ಉದ್ದನ್ನ ಮೊದ್ದ', 'ಉದ್ದನ್ನ ಬುದ್ದಿಹೀನ' ಎಂದು ಜರಿಯುವ ಜನರು ಅವರ ಪಾಂಡಿತ್ಯವನ್ನು ಪರೀಕ್ಷಿಸದೇ ಈ ರೀತಿ ನುಡಿದದ್ದು ಚೇಳೂ ಕುಟುಕಿದ ವೇದನೆಯಾಗುತ್ತದೆ. 'ಮೊದ್ದ' ಎನ್ನುವ ಮಾತಿಗಿಂತ 'ಉದ್ದನ್ನ' ಎನ್ನುವ ಮಾತೇ ಮನಸ್ಸಿಗೆ ನಾಟುತ್ತದೆ. ಇಲ್ಲಿ ಕೇವಲ ಉದ್ದನ್ನವರು ಮಾತ್ರ

ಮೊದ್ದರಿರುವುದಿಲ್ಲ ಸಾಧಾರಣಾ ನಿಲುವಿನವರೂ ಮೊದ್ದರಿರುತ್ತಾರೆ. ಇವರು ವ್ಯಕ್ತಿತ್ವದಲ್ಲಾಗಲಿ, ನಿಲುವಿನಲ್ಲಾಗಲಿ ಜನರಿಂದ ಗುರುತಿಸಲ್ಪಡದೇ ದಡ್ಡತನವಿದ್ದು ಜನರ ಕಾಕದೃಷ್ಟಿಗೆ ಬೇಳದಿರುವ ಇವರನ್ನು ಬಯಲಿಗೆಳೆಯುತ್ತಾರೆ. ಅದೇ ಪ್ರಸಿದ್ಧರಿದ್ದರೆ ಜನರ ಪ್ರಶಂಸೆಗೆ ಪಾತ್ರರಾಗಿ ಉನ್ನತ ಸ್ಥಾನಮಾನ ಪಡೆಯುತ್ತಾರೆ. ಅದಕ್ಕೆ ಲಾಲಬಹದ್ದೂರ್ ಶಾಸ್ತ್ರಿ, ನೆಪೋಲಿಯನ್‌ನನ್ನು ಉದಾಹರಿಸಿದ್ದಾರೆ. ಇಂತಹ ವ್ಯಕ್ತಿಗಳು ತಮ್ಮ ಅದ್ಭುತ ವ್ಯಕ್ತಿತ್ವದಿಂದ ಉನ್ನತ ಪದವಿಗೇರಿದರು. ಸಾಮಾರ್ಥ್ಯಕ್ಕಿಂತ ಬೌದ್ಧಿಕ ಸಾಮಾರ್ಥ್ಯ ಹೆಚ್ಚು ಎಂಬ ವಿಚಾರವನ್ನು ಈ ಮೂಲಕ ತಿಳಿಯಪಡಿಸಿದ್ದಾರೆ.

ಉದ್ದನ್ನ ವ್ಯಕ್ತಿಯಾಗಿ ತಮಗೆ ಪ್ರಸಿದ್ಧಿಯ ಮಹಾದ್ವಾರಗಳು ಮುಚ್ಚಿವೆ ಎಂದು ಹೇಳುವ ಲೇಖಕರು ತಮ್ಮ ನಿಲುವಿನಿಂದಾದ ಪ್ರಸಿದ್ಧಿಯ ವಿಫಲತೆಗಳನ್ನು ನೆನೆದು, ಸಾಧಾರಣ ವ್ಯಕ್ತಿಗಳ ಮೇಲೆ ಅಸೂಯೆ ಪಡುವುದು ಇವರ ಅವಿವೇಕತನವನ್ನು ತೋರಿಸುತ್ತದೆ. ಅದೇ ತರಹ ಸಾಧಾರಣಾ ನಿಲುವಿನವರೂ ಉದ್ದನ್ನವರನ್ನು ಕ್ರೂರ ಕಣ್ಣಿನಿಂದ ನೋಡಿ ತಾವು ಅವರಂತೆ ಆಗಬೇಕೆಂದು ಜಾಹೀರಾತಿನ ಔಷಧಿಯನ್ನು ಕುಡಿದು ಎತ್ತರವಾದೆವೆಂಬ ಆತ್ಮಪೌರುಷದ ವ್ಯಕ್ತಿತ್ವ ತನ್ನಳವಿಗೆ ದಕ್ಕದ ಬಿಸಿಲ್ಗುದುರೆಯ ಬೆನ್ನು ಹತ್ತಿದಂತೆ ಭಾಸವಾಗುತ್ತದೆ. ಇಂತಹ ಸ್ವಭಾವದಿಂದಲೇ ಇಂದು ಹಾದಿ-ಬೀದಿಗಳಲ್ಲಿ ತಿರುಗುವ ಜನರನ್ನು ನೋಡಿ ಗೋಣಗಾಡುವುದು ಮಾನವ ಬೌದ್ಧಿಕವಾಗಿ ಕೆಳಮಟ್ಟಕ್ಕೆ ಕುಸಿಯುತ್ತಿರುವ ವಿಚಾರವನ್ನು ಈ ಮೂಲಕ ವ್ಯಕ್ತಪಡಿಸಲಾಗಿದೆ.

ಸಮಾಜದಲ್ಲಿ ಉದ್ದನ್ನ ವ್ಯಕ್ತಿ ಎಂದರೆ ಜನರು ಮೋಸಗಾರಿಕೆಯನ್ನು ಕೈಯಲ್ಲಿಡಿದೆ ಕುಳಿತಿರುತ್ತಾರೆ. ಅದಕ್ಕೆ ಬಟ್ಟೆ ಖರೀದಿಸಲು ಹೋದರೆ ಅಲ್ಲಿ ಇವರನ್ನು ವ್ಯವಹಾರಿಕವಾಗಿ ಮೋಸಗೊಳಿಸುವ ಅಂಗಡಿಯವರು. ಚಪ್ಪಲಿ ತೆಗೆದುಕೊಳ್ಳುವಲ್ಲಿಯೂ ಸ್ಪೆಷಲ್ ಆರ್ಡರ್ ಬೇಕೆನ್ನುವ ವ್ಯಾಪಾರಿಗಳ ಕೊಳ್ಳುಬಾಕ ನಿಲುವಿನಿಂದ ಜಗತ್ತು ಒಂದು ಮೋಸದ ಸಂತೆ ಎಂದು ಕರೆದಿದ್ದಾರೆ. ಇವರು ಎತ್ತರದ ನಿಲುವಿನಿಂದ ದೊಡ್ಡವರಾದರೂ ಜನರ ಚುಚ್ಚು ಮಾತುಗಳಿಗೆ ಬೆಲೆಕೊಡದೆ, ಬಾಗಿ ನಡೆಯುವ ಇವರ ವ್ಯಕ್ತಿತ್ವ ವಿಶಿಷ್ಟವಾದುದು. ಯಾರ ಮನೆಯನ್ನು ಪ್ರವೇಶಿಸಬೇಕೆಂದರೂ ಅವರ ಆಸ್ತಿ ಅಂತಸ್ತು ನೋಡದೇ ಮನೆಯ ಬಾಗಿಲಿನ ಚೌಕಟ್ಟನ್ನು ಮೊದಲು ನೋಡುವ ಇವರು ತಮ್ಮ ಜಾಗೃತ ನಿಷ್ಠೆಯಿಂದ ಮಹನೀಯರೆನಿಸಿಕೊಳ್ಳುತ್ತಾರೆ.

ಮನುಷ್ಯನು ತನ್ನ ತಗಲು-ತಿಪಲುಗಳಿಂದ ಮೋಸಗಾರಿಕೆಗೆ ಬಲಿಯಾಗುತ್ತಾನೆ. ಆದರೆ ಎತ್ತರದ ನಿಲುವಿನವರು ಪಾಪದ ಲೇಪವಿಲ್ಲದೆ ಎದ್ದುನಿಲ್ಲುವುದು. ಅವರ ಪುರುಷ ಗುಣಧರ್ಮವನ್ನು ತೋರಿಸುತ್ತದೆ. ಬೆಳೆಯುವ ವ್ಯಕ್ತಿ ವಿಶ್ವಾಸಕ್ಕೆ ಅರ್ಹನಲ್ಲ ಎನ್ನುವುದು ಸಾಧಾರಣಾ ನಿಲುವಿನವರಿಗೂ ಅನ್ವಯಿಸುತ್ತದೆ. ಇಂತಹ ವೈರುಧ್ಯಗಳ ನಡುವೆ ನಮ್ಮ ಬೌದ್ಧಿಕ ಕಾಲದ ಸಾಂಸ್ಕೃತಿಕ ವಲಯದಲ್ಲಿ ಉದ್ದನ್ನ ಮೊದ್ದನಿದ್ದರೂ ಅವನು ಗಾಂಭೀರ್ಯದಿಂದ ಶ್ರೇಷ್ಠನೆನಿಸಿಕೊಳ್ಳುತ್ತಾನೆ. ಸಾಧಾರಣಾ ವ್ಯಕ್ತಿ ತನ್ನ ಕುಂಠಿತ

ನಿಲುವಿನಿಂದಾಗಿ ಮನಸ್ಸಿನ ಜಾಡ್ಯದಿಂದ ಬಳಲುತ್ತಾನೆ. ಇಂತಹ ವೈಚಾರಿಕ ವಿಚಾರವನ್ನು ಈ ಪ್ರಬಂಧದ ಮೂಲಕ ವ್ಯಕ್ತಪಡಿಸಲಾಗಿದೆ.

**ಬೇಸರ**

ವೀರೇಂದ್ರ ಸಿಂಪಿಯವರು ಬೇಸರ ಎಂಬ ವಿಚಾರವನ್ನು ತುಂಬಾ ಅರ್ಥವಂತಿಕೆಯಿಂದ ಈ ಪ್ರಬಂಧದಲ್ಲಿ ಚಿತ್ರಿಸಿದ್ದಾರೆ. ಬೇಸರ ಎನ್ನುವುದು ಜಗತ್ತಿನಲ್ಲಿ ಸರ್ವವ್ಯಾಪಿಯಾಗಿ ಅದರಲ್ಲೂ ಮನುಷ್ಯನಿಗೆ ಬೆಂಬಿಡದ ಬೇತಾಳದಂತಿದೆ. ಇಂತಹ ಬೇಸರವನ್ನು ಕುರಿತು ಅದರಿಂದಾಗುವ ಸಾಧಕ ಬಾದಕಗಳನ್ನು ವೈಚಾರಿಕ ನೆಲೆಯಲ್ಲಿ ಚಿತ್ರಿಸಿರುವುದನ್ನು ಈ ಪ್ರಬಂಧದಲ್ಲಿ ಗುರುತಿಸಬಹುದು.

ಬೇಸರ ಎನ್ನುವುದು ತಿರಸ್ಕಾರ ಪೂರಿತವಾದುದು. ಬೇಸರವೆಂದರೆ ಎಲ್ಲರಿಗೂ ಸಿಟ್ಟು. ಅದೇ ರೀತಿ ಲೇಖಕರಿಗೂ ಬೇಸರಕ್ಕೂ ಅಂಟಿದ ನಂಟನ್ನು ಅವರು "ಬೇಸರ ನನ್ನ ಜೀವನದುದ್ದಕ್ಕೂ ನನ್ನ ನೆರಳಾಗಿ ನಾನು ಹೋದತ್ತ ಹೋಗಿ, ಬಂದತ್ತಾ ಬಂದು, ಸುಖವಾಗಿ ಇದ್ದುಬಿಟ್ಟಿದೆ"[೬]ಎಂದು ತಾವು ಬೇಸರದಿಂದ ಹೊರತಾಗಿಲ್ಲ ಎಂಬ ಮಾತನ್ನು ಹೇಳಿದ್ದಾರೆ. ಇಂತಹ ಬೇಸರ ಕೆಲವು ಸಲ ಊಟ ಮಾಡುವಾಗಲೂ, ತುತ್ತು ನುಂಗಬೇಕಾದಗಲೂ, ರಾತ್ರಿ ಹಾಯಾಗಿ ನಿದ್ದೆ ಮಾಡುವಾಗಲೂ, ಪುಸ್ತಕ ಓದುವಾಗಲೂ, ಹೊರಗಡೆ ತಿರುಗುವಾಗಲೂ ಬಂದು ನಮ್ಮ ಮೇಲೆರಗುತ್ತದೆ ಎಂಬುದನ್ನು ಅವರ ಅನುಭವದ ಪ್ರಸಂಗಗಳಿಂದ ವ್ಯಕ್ತವಾಗಿದೆ. ಬೇಸರಕ್ಕೆ ಆಮಂತ್ರಣ ಹೇಗೆ ಸಿಗುತ್ತದೆ ಎಂದು ಹೇಳುವ ಲೇಖಕರು ತಮ್ಮ ಪ್ರಾಧ್ಯಾಪಕ ವೃತ್ತಿಯಿಂದಾಗಿ ಬೆಳಿಗ್ಗೆ ಕಾಲೇಜಿಗೆ ಹೋಗಿ ಬಂದರೆ ದೀರ್ಘಾವಧಿಯ ಸಮಯ ಉಳಿದು ಮಧ್ಯಾಹ್ನ ನಿದ್ದೆ ಮಾಡಿ, ಸಾಯಂಕಾಲ ತಿರುಗಾಡಿ, ಇಂತಹ ಕಾರ್ಯವನ್ನು-ದಿನವೂ ಮಾಡಿದಾಗ ಜೀವನ ರೋಸಿ ಹೋದಂತೆ ಭಾಸವಾಗಿ ಕೊನೆಗೆ ಬೇಸರದಿಂದ ಸಿನಿಮಾಕ್ಕೆ ಹೋಗಲು ನಿರ್ಧರಿಸಿ ಅಲ್ಲಿಯೂ ಗೋಜು, ಗದ್ದಲ ರಸಹೀನ ಸಿನಿಮಾದಿಂದ ಮತ್ತಷ್ಟು ಬೇಸರವಾಗಿ ಮತ್ತೊಮ್ಮೆ ಸಿನಿಮಾ ನೋಡದಿರಲು ನಿರ್ಧರಿಸಿ ಬಂದಿದ್ದು ಸಹ ಬೇಸರದ ಸರ್ವ ವ್ಯಾಪಕತೆ ಹಾಗೂ ಅದು ನಮ್ಮೊಂದಿಗೆ ಸಹ್ಯವಾಗಿ ಬೆರೆತಿರುವುದನ್ನು ಈ ಮೂಲಕ ಹೇಳಿದ್ದಾರೆ.

ಯಾರಾದರೂ ನಮಗೆ ಹೊತ್ತೇ ಹೋಗುವುದಿಲ್ಲ. ಜೀವನ ಬೇಜಾರಾಗಿದೆ ಎನ್ನುವವರಿಗೆ ಯಾಕೆ? ಜೀವಿಸಬೇಕೆಂದು ಪ್ರಶ್ನಿಸುವ ಲೇಖಕರು ಅವರ ಸೋಮಾರಿತನವನ್ನು ಟೀಕಿಸುತ್ತಾರೆ. ಇಂತಹ ಸೋಮಾರಿಗಳು ದಿನವೀಡಿ ಟೈಂ ಪಾಸ್ ಬಟಾಣಿಯಂತೆ ಮಾತಾಡಿ, ಮಲಗಿ, ಎದ್ದು, ಹಿಪ್ಪಿಗಳಂತೆ ವೇಷಹಾಕಿ ಕಾಲಹರಣ ಮಾಡಿ ಯಾವುದೋ ಕಚಡಾ ಕಾದಂಬರಿ ಓದಿ ಬೇಸರಕ್ಕೆ ಆಹ್ವಾನ ಕೊಡುತ್ತಾರೆ. ಇಂತಹ ಬೇಸರದ ಸ್ಥಿತಿ ಯಾವ ರೀತಿಯಾಗಿರುತ್ತದೆ ಎಂದು ಹೇಳುವ ಲೇಖಕರು. "ಒಂದೇ ಕಡೆ ಕಲ್ಲಿನಂತೆ ಕುಳಿತೋ, ನಿಂತೋ ಇರುವುದು ಒಂದು ತರಹ ಅನಿಮಿಷ ನೇತ್ರರಾಗಿ ಗಳಿಗೆಗೊಮ್ಮೆ ಆಕಳಿಸುತ್ತಲೋ, ತೂಕಡಿಸುತ್ತಲೋ

ಒಮ್ಮೆ ಜಂತಿಯನ್ನು ನೋಡುತ್ತಲೋ, ಇನ್ನೊಮ್ಮೆ ಟೇಬಲ್ಲನ್ನು ತಬಲಾ ಮಾಡಿ ಬಾರಿಸುತ್ತಲೋ, ನೆಲವನ್ನು ಹೆಬ್ಬೆರಳಿನಿಂದ ಕೆದರುತ್ತಲೋ, ಕೈ ಕಟ್ಟಿ ಕೂಡುತ್ತಲೋ ಇಲ್ಲವೇ ಕಾಗದದ ಮೇಲೆ ಬರೆಯುತ್ತಲೋ ಇರುವ ಸ್ಥಿತಿಯಲ್ಲಿ ದಿನ ಸಮಯಗಳು ಕಳೆದು ಅದೇ ಸ್ಥಳ ಸನ್ನಿವೇಶದಲ್ಲಿದ್ದರೆ ಅಲ್ಲಿ ಬೇಸರದ ಅಚಲ ಸ್ಥಿತಿಯು ವ್ಯಕ್ತವಾಗುತ್ತದೆ." ಬೇಸರದಿಂದ ಒಮ್ಮೊಮ್ಮೆ ಜನರ ಓಡಾಟ, ಅಲೆದಾಟ, ಅವರ ದುಡಿಮೆ, ಅದರ ಶಾಶ್ವತತೆ, ಸಾವು ಬದುಕಿನ ಬಗ್ಗೆ, ಅದರ ನಶ್ವರತೆಯನ್ನು ಪ್ರಶ್ನಿಸುವ ಹಂತಕ್ಕೆ ತಂದಿರುತ್ತದೆ ಎಂದು ಬೇಸರದಿಂದಾಗುವ ದುಷ್ಪರಿಣಾಮಗಳನ್ನು ವ್ಯಕ್ತಪಡಿಸಿದ್ದಾರೆ.

ಜೀವನದಲ್ಲಿ ಬೇಸರ ಬಂದಿತ್ತೆಂದು ಸುಮ್ಮನೆ ಸೋಮಾರಿಯಾಗಿ ಕೂಡಬೇಡ, ಅದಕ್ಕೆ ಬದಲಾಗಿ ಬ್ಯಾಂಕ್ ದರೋಡೆ ಮಾಡು, ಸ್ವೇಚ್ಛಾಚಾರಿಯಾಗಿ ತಿರುಗು, ಆದರೆ ಕಲ್ಲಿನಂತೆ ನಿರ್ಜೀವಿಯಾಗಿ ಕೂಡಬೇಡ ಎಂದು ಮಾನವನಿಗೆ ಕ್ರಿಯಾಶೀಲತೆಯ ಮಂತ್ರ ಜಪಿಸಿದ್ದಾರೆ. ಇಲ್ಲಿ ಕಟ್ಟುವುದು ಆಗದಿದ್ದರೆ ಕೆಡವುದಾದರೂ ಕಲಿ ಎಂದು ಜೀವನಕ್ಕೆ ಕ್ರಿಯಾಶೀಲತೆಯ ಪಾಠ ಹೇಳದಂತಿದೆ. ಬೇಸರ ಕೆಲಸವಿಲ್ಲದೆ, ಜೀವನದಲ್ಲಿ ಗೊತ್ತುಗುರಿಯಿಲ್ಲದೆ ಮಾನಸಿಕವಾಗಿ ತಿರುಗುವುದರಿಂದ ಬರುತ್ತದೆ. ಇಂತಹ ಬೇಸರವನ್ನು ಇನ್ನೊಬ್ಬರನ್ನು ಟೀಕೆ ಮಾಡುತ್ತ ಕಳೆದುಕೊ, ಆದರೆ ನಿರ್ಜೀವಿಯಾಗಿ ಕಾಲ ಕಳೆಯದಿರು ಎಂದಿದ್ದಾರೆ. ಅದೇ ರೀತಿ ನಮ್ಮ ಜನಾಂಗಕ್ಕೆ ಸಾಕಷ್ಟು ಸಂಪತ್ತಿದ್ದರೂ ಅದನ್ನು ಹೇಗೆ ಬಳಸಬೇಕೆಂಬ ಪರಿಜ್ಞಾನವಿಲ್ಲದೆ, ನಿರ್ಬಲರಾಗಿ, ನಿಶ್ಶಕ್ತರಾಗಿ, ಜೀವಿಸಿ, ಬೇಸರದಲ್ಲಿ ಜೀವನ ಕಳೆದು, ಭೀಕರ ಏಕಾಂಗಿತನವನ್ನು ಅನುಭವಿಸಿ ಮಣ್ಣು ಸೇರುತ್ತಾರೆ. ಇಂತಹ ಸ್ಥಿತಿಗೆ ಮಾನವ ತಲುಪಿದ್ದನ್ನು ಅವನ ದುರ್ದೈವ ಎಂತಹದು ಎಂಬ ವೈಚಾರಿಕತೆಯನ್ನು ವ್ಯಕ್ತಪಡಿಸಿದ್ದಾರೆ.

ಜೀವನದಲ್ಲಿ ಮನುಷ್ಯ ಪ್ರತಿಯೊಂದು ವಿಷಯದಲ್ಲೂ, ಸಂದರ್ಭದಲ್ಲೂ, ಬೇಸರಕ್ಕೆ ಒಳಗಾಗುತ್ತಾನೆ. ಅದಕ್ಕೆ ಅವನ ಯಾಂತ್ರಿಕ ಜೀವನವೇ ಕಾರಣ. ಇಂದಿನ ತಂತ್ರಜ್ಞಾನದಿಂದ ಮಾನವ ತನ್ನ ಬೌದ್ಧಿಕ ಬೆಳವಣಿಗೆಯ ಜೊತೆ ದೈಹಿಕ ಶ್ರಮವನ್ನು ಅಲ್ಲಗೆಳೆದು ಆಲಸಿಗಳಾಗಿ ಬೇಸರಕ್ಕೆ ತುತ್ತಾಗುತ್ತಾನೆ. ಇಂತಹ ಸ್ಥಿತಿಯಲ್ಲಿರುವ ಮನುಷ್ಯ ಜೀವನಕ್ಕೊಂದು ಆದರ್ಶವಿಟ್ಟುಕೊಂಡು ಜಗತ್ತಿನ ಆಚಾರ, ವಿಚಾರಗಳನ್ನು ಪಾಲಿಸಿದ್ದಾದರೆ ಬೇಸರದ ಜಗತ್ತಿನಿಂದ ದೂರವಿರಬಹುದೆಂಬ ಸತ್ಯವನ್ನು ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

### ಪ್ರೀತಿಯ ಮೀಮಾಂಸೆ

ಮನುಷ್ಯನ ಜೀವನದಲ್ಲಿ ಪ್ರೀತಿಗೆ ಸಮಾನವಾದ ಮೌಲ್ಯ ಮತ್ತೊಂದಿಲ್ಲ. ಪ್ರೀತಿ ಆತ್ಮಸೌಂದರ್ಯದ ಅಭಿವ್ಯಕ್ತಿ. ಇಂತಹ ಪ್ರೀತಿಯಿಲ್ಲದ ಜೀವನ ನಶ್ವರ. ಪ್ರೀತಿ ಜೀವನದಲ್ಲಿನ ಉದಾತ್ತ ಧ್ಯೇಯವನ್ನು ಕಾಪಾಡುವ ಕಾರ್ಯ ಮಾಡುತ್ತದೆ. ಇಂತಹ ಪ್ರೀತಿಯ ಪ್ರಾಮುಖ್ಯತೆಯನ್ನು ಸಾರುವ ಈ ಪ್ರಬಂಧದಲ್ಲಿ ಪ್ರೀತಿಯ ಹಿಂದೆ ಇರುವ ಹಲವಾರು ವೈಚಾರಿಕ ಅಂಶಗಳನ್ನು ಈ ಪ್ರಬಂಧದಲ್ಲಿ ವ್ಯಕ್ತಪಡಿಸಲಾಗಿದೆ.

"ಪ್ರೀತಿ ಇಲ್ಲದ ಜೀವನ ಅದೊಂದು ಜೀವನವಲ್ಲ ಸ್ಮಶಾನ. ಎರಡನೇಯವರಿಂದ ಪ್ರೀತಿಸಲ್ಪಡದ ಸ್ಥಿತಿಗಿಂತ ಹೆಚ್ಚಿನ ದುರಂತ ಬಾಳಿನಲ್ಲಿ ಇನ್ನೊಂದಿರಲಾರದು"[೬೦]ಎಂದು ಪ್ರೀತಿಯ ಪ್ರಾಮುಖ್ಯತೆ ಸಾರುವ ಲೇಖಕರು ಜೀವನದಲ್ಲಿ ಪ್ರೀತಿಯ ಅಗತ್ಯತೆ ಅರಿವನ್ನು ವ್ಯಕ್ತಪಡಿಸಿದ್ದಾರೆ. ಭೂಮಿಯ ಮೇಲೆ ಮಾನವ ಜೀವಿಯಾಗಿ ಹುಟ್ಟಿಬಂದ ಮೇಲೆ ಪ್ರೀತಿಸುವುದು ಅವನ ಕರ್ತವ್ಯ. ಇಂತಹ ಪ್ರೀತಿಗೆ ನೂರಾರು ಅವತಾರಗಳಿದ್ದರೂ ಸೂತ್ರ ಒಂದೇ ಆಗಿ, ತ್ಯಾಗದ ತಳಹದಿಯ ಮೇಲೆ ನಿಂತಿದೆ. ಇಂತಹ ತ್ಯಾಗಕ್ಕೆ ಹೆಸರಾದ ಸಲಿಂ ಅನಾರ್ಕಲಿ, ರೋಮಿಯೋ ಜೂಲಿಯಟ್, ಶಾಹಜಾನ್ ಮುಮ್ತಾಜ್ ರ ಜೋಡಿ ಪ್ರೀತಿ ತ್ಯಾಗಕ್ಕೆ ಹೆಸರಾಗಿ ಅಮರತ್ವವನ್ನು ಸಾಧಿಸಿದ್ದಾರೆ. ಇಂತಹ ತ್ಯಾಗದ ತಳಹದಿಯ ಮೇಲೆ ನಿಂತ ಪ್ರೀತಿ ಕೇವಲ ಗಂಡು ಹೆಣ್ಣುಗಳಲ್ಲಿ ಮೀಸಲಾಗಿರದೇ ಗುರುಹಿರಿಯರಲ್ಲಿ ಗೌರವ, ಸರಿಕರಲ್ಲಿ ಸ್ನೇಹ, ಕಿರಿಯರಲ್ಲಿ ವಾತ್ಸಲ್ಯ ಇವುಗಳ ಮೂಲಕ ಒಡಮೂಡಿದೆ. ಈ ಮೂರು ವಿಧಗಳು ಪ್ರೀತಿಯ ಮುಖಗಳಾಗಿ, ತಂದೆ ತಾಯಿಗೆ ಮಕ್ಕಳಲ್ಲಿ ವಾತ್ಸಲ್ಯವಿದ್ದರೆ, ಅಣ್ಣ ತಮ್ಮ, ಅಕ್ಕ ತಂಗಿಯರಲ್ಲಿ ಸೌಹರ್ದತೆ ಇರುತ್ತದೆ. ನೆರೆ ಹೊರೆಯವರಲ್ಲಿ ಸಹೃದಯತೆಯಿದ್ದರೆ, ಪತಿ ಪತ್ನಿಯರಲ್ಲಿ ಪ್ರೇಮವಿದೆ. ಸಮವಯಸ್ಕರಲ್ಲಿ ಸ್ನೇಹವಿದ್ದರೆ, ಗುರು ಹಿರಿಯರಲ್ಲಿ ವಿಶ್ವಾಸವಿದೆ. ದೇವರಲ್ಲಿ ಭಕ್ತಿಯಿದೆ. ಹೀಗೆ ಸಾರ್ವತ್ರಿಕ ವ್ಯಾಪ್ತಿ ಹೊಂದಿರುವ ಪ್ರೀತಿ ಜೀವನಕ್ಕೆ ವೈವಿಧ್ಯತೆಯನ್ನು ತಂದುಕೊಟ್ಟಿದೆ ಎಂಬ ವಿಚಾರವನ್ನು ಈ ಪ್ರಬಂಧದಲ್ಲಿ ಹೇಳಿದ್ದಾರೆ.

ಪ್ರೀತಿಯೆನ್ನುವುದು ಜೀವಕೊಟ್ಟು ಜೀವ ಉಳಿಸುವಂತಹದ್ದು. ಇಂತಹ ಪ್ರೀತಿ ಇರದಿದ್ದರೆ ಜೀವನವೇ ಬರಡಾಗಿರುತ್ತಿತ್ತು. ಕಾಡು ಮೃಗಗಳ ನಡುವಿನ ಸ್ಪರ್ಧೆಯಾಗಿರುತ್ತಿತ್ತು ಎಂದು "ಪ್ರೀತಿ ಮೃಗವನ್ನು ಮಾನವನನ್ನಾಗಿ ಮಾಡುವ ದಿವ್ಯಗುಣ"[೬೧]ಎಂಬ ಸಾಲಿನಲ್ಲಿ ಲೇಖಕರು ಜಗತ್ತಿನ ಸದ್ಗುಣಗಳಿಗೆ ಪ್ರೀತಿಯ ಆರೈಕೆ ಆಧಾರವಾಗಿದೆ ಎಂಬ ಸತ್ಯವನ್ನು ತೋರ್ಪಡಿಸಿದ್ದಾರೆ. ಭೂಮಿಯ ಮೇಲೆ ವಾಸಿಸುವ ನಾವು ಕೆಲವು ಸಲ ಅನಾಥರಾಗುತ್ತೇವೆ. ನಾವು ಸೋತಾಗ ಸಂತೈಸುವವರಿಲ್ಲದೆ, ಗೆದ್ದಾಗ ಸುಖಿಸುವವರಿಲ್ಲದೆ, ಕೆಲವು ಸಲ ಏಕಾಂಗಿಗಳಾಗುತ್ತೇವೆ. ಇಂತಹ ಏಕಾಂಗಿತನವನ್ನು ಕಡಿಮೆ ಮಾಡುವ ಶಕ್ತಿ ಪ್ರೀತಿಗಿದೆ. ಹುಟ್ಟಿದ ಕೂಡಲೇ ತಂದೆ ತಾಯಿಯರ ವಾತ್ಸಲ್ಯ ದೊರೆಯುತ್ತದೆ. ಅದೇ ದೊಡ್ಡವರಾದಾಗ ಪ್ರೀತಿಯಿಂದ ವಂಚಿತರಾದರೆ ವ್ಯಕ್ತಿ ಕ್ರೂರ ಪಶುವಾಗುತ್ತಾನೆಂದು, ಅದಕ್ಕೆ ಹಿಟ್ಲರನಂತಹ ವ್ಯಕ್ತಿಯೇ ಸಾಕ್ಷಿ. ಈ ಮೂಲಕ ಮಾನವ ಅನ್ಯರ ಪ್ರೀತಿಯಿಲ್ಲದೆ ಬದುಕಲು ಸಾಧ್ಯವಿಲ್ಲ ಎಂಬ ಅಂಶವನ್ನು ತೋರ್ಪಡಿಸಲಾಗಿದೆ. ಆದರೆ ಟಾಲ್ ಸ್ಟಾಯ್‌ನು ತನ್ನ 'ಮನುಷ್ಯನು ಬದುಕುವುದು ಏತರಿಂದ" ಎಂಬ ಕಥೆಯಲ್ಲಿ ಕೂಸಿಗೆ ಜನ್ಮವಿತ್ತ ತಾಯಿಯ ಜೀವವನ್ನು ಸೆಳೆಯಲು ಬಂದ ದೇವದೂತ, ಆಕೆಯ ಪ್ರೀತಿಯ ಸತ್ಕಾರಕ್ಕೆ, ಅವಳ ದಯಾಗುಣಕ್ಕೆ ಮರುಳಾಗಿ ಪ್ರೀತಿಯ ಅಮೃತ ಸಿಂಚನವನ್ನು ಪಡೆದಿದ್ದು, ಪ್ರೀತಿಯಿಂದ ಬಾಳು ಹಸನಾಗುತ್ತದೆ ಎಂಬ ಅಂಶ ವ್ಯಕ್ತವಾಗಿದೆ.

ಜೀವನದಲ್ಲಿ ನಾವು ವಾತ್ಸಾಲ್ಯದ ಬಂಧದಲ್ಲಿಯೇ ಬದುಕುತ್ತಿದ್ದೇವೆ. ಕಟುಕನಾದ ಮಗ ತನ್ನ ತಾಯಿಯ ಜೀವವನ್ನು ಕಿತ್ತು ಅಂಗೈಯಲ್ಲಿ ಹಿಡಿದು ಸಾಗುತ್ತಿರುವಾಗ ಎಡವಿ ಬಿದ್ದ ಮಗುವಿಗೆ 'ಪೆಟ್ಟಾಯ್ತು ಮಗು' ಎಂದು ಅವಳ ಕರಳು ಕೇಳಿದ್ದು ತಾಯಿ ಪ್ರೀತಿಯ ಅಗಾಧತೆ ವ್ಯಕ್ತವಾಗುತ್ತದೆ. ಅಣ್ಣ ತಮ್ಮಂದಿರು ಆಸ್ತಿಗಾಗಿ ಎಷ್ಟೇ ಕಚ್ಚಾಡಿದರೂ ಅನ್ಯರ ದಾಳಿಯ ಸಮಯದಲ್ಲಿ ಯಾರು ಕೈಕಟ್ಟಿ ಕೂಡುವುದಿಲ್ಲ. ಇಂತಹ ಪ್ರೀತಿಯ ಸೆಲೆ, ರಕ್ತಸಂಬಂಧಗಳಲ್ಲಿ ವ್ಯಾಪಿಸಿದೆ. ಇನ್ನು ಪತಿಪತ್ನಿಯರ ಪ್ರೇಮ ಅದೊಂದು ಅನನ್ಯ ಅನುಭವ. ಅಲ್ಲಿ ಕ್ರಮವಿದೆ, ಭೋಗವಿದೆ, ತ್ಯಾಗವಿದೆ, ಸ್ವಾರ್ಥವಿದೆ. ಕರುಣೆಯ ಜೊತೆಗೆ ಶೋಷಣೆಯೂ ಇದೆ. ಮಧುರತೆಯ ಜೊತೆಗೆ ಯಾತನೆಯೂ ಇದೆ. ಇಂತಹ ಕಟುಮಧುರ ಅನುಭವಕ್ಕೆ ಪ್ರೀತಿ ಸೆಲೆಯಾದುದು ದೈವ ಸೃಷ್ಟಿ. ಪ್ರೀತಿ ಆಕರ್ಷಣೆಯಿಂದ ಬಂದರೂ ಮನದ ಹಿಂಗಿತಕ್ಕೆ ಒಲಿಯುವ ಆತ್ಮಕ್ಕೆ ಏನನ್ನು ಬೇಕಾದರೂ ಸಾಧಿಸಲು ಪ್ರೇರಣೆ ನೀಡುತ್ತದೆ. ಇದರಿಂದಾಗಿಯೇ ಹಿಂದೆ ಯುದ್ಧ ಮಹಾಯುದ್ಧಗಳು ನಡೆದವು. ಇಂತಹ ಪ್ರೇಮಕ್ಕಾಗಿಯೇ ಎಂಟೋನಿ ಕ್ಲಿಯೋಪಾತ್ರಳಿಗಾಗಿ ತನ್ನ ಸಾಮ್ರಾಜ್ಯ ಮಣ್ಣು ಹುಡಿ ಎಂದು ಭಾವಿಸಿದ್ದು. ಇಂತಹ ಸನ್ನಿವೇಶಗಳಲ್ಲಿ ಪ್ರೀತಿಯ ಉತ್ಕಟತೆ ಹಾಗೂ ಪ್ರಭಾವದಿಂದ ಸಂಭವಿಸಬಹುದಾದ ಘಟನೆಗಳನ್ನು ವ್ಯಕ್ತಪಡಿಸಿದ್ದಾರೆ.

ಪ್ರೀತಿಯೆಂದರೆ ಜೀವನ. ಇಲ್ಲಿ ಆರೋಗ್ಯಕರವಾದ ಪರಂಪರೆ ಇದೆ. ದೀನ ದಲಿತರ ಬಗ್ಗೆ ಅನುಕಂಪ, ಮೂಕ ಪ್ರಾಣಿಗಳ ಬಗ್ಗೆ ಸಹಾನುಭೂತಿ ಇದೆ. ಆದರೆ ಮಾನವ ಜೀವನದಲ್ಲಿ ಸುಖವಾಗಿಲ್ಲವೆಂದು ಪ್ರಾಯಿಡನ ಮೂರು ದುಃಖದ ಸಂಗತಿಗಳನ್ನು ಹೇಳಿದ್ದಾರೆ. ಪ್ರಕೃತಿಯ ಅಪಾರ ಬಲಿ, ದೇಹದ ದೌರ್ಬಲ್ಯ, ಮಾನವ ಸಂಬಂಧಗಳಲ್ಲಿನ ಬಿರುಕು, ಮೊದಲೆರಡು ಅಂಶಗಳನ್ನು ವಿಜ್ಞಾನದ ಬಲದಿಂದ ಹತೋಟಿಯಲ್ಲಿಟ್ಟಿದ್ದೇವೆ. ಆದರೆ ಮಾನವನಲ್ಲಿನ ಅಸಂಗತ ಸಂಬಂಧಗಳಿಗೆ ಪರಿಹಾರ ಕಂಡುಕೊಳ್ಳಲಾಗದೇ ದುಃಖಿಗಳಾಗಿ ಬದುಕುತ್ತಿದ್ದೇವೆ. ದುಃಖಕ್ಕೆ ಒಳಗಾದವರಿಗೆ ಸಹಾಯ ಮಾಡುವ ಔದಾರ್ಯವಿಲ್ಲವಾದರೂ ಮುಗುಳ್ನಗೆಯ ಬೆಳಕು ಚೆಲ್ಲಿ ಸಂತೈಸುವ ಕೆಲಸ ಮಾಡಬೇಕೆಂದು ಹೇಳಿದ್ದಾರೆ. ವ್ಯಕ್ತಿಯ ಸೌಂದರ್ಯ, ಕಿವಿ, ಮೂಗು, ಕಣ್ಣುಗಳಲ್ಲಿಲ್ಲ. ಅದು ನಾವು ಮಾಡುವ ಸುಂದರ ಕೃತ್ಯದಲ್ಲಿದೆ. ಇಂತಹ ಮೌಲ್ಯದಿಂದ ನಾವು ಜೀವನದಲ್ಲಿ ಸಹ್ಯವಾಗಿ ಬದುಕುವುದು ಸಾಧ್ಯ ಎಂಬ ವಿಚಾರವನ್ನು ಪ್ರೀತಿಯ ಮೂಲಕ ವ್ಯಕ್ತಪಡಿಸಿದ್ದು ಈ ಪ್ರಬಂಧದ ವಿಶೇಷವಾಗಿದೆ.

**ಹೆಂಡತಿಯನ್ನು ಒಲಿಸುವುದು ಹೇಗೆ**

'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂಬ ಶರಣರ ನುಡಿಯಂತೆ ಪತಿಯು ಸತಿಯನ್ನು ಒಲಿಸಿಕೊಳ್ಳುವ ಬಗೆ ಹೇಗೆ ಎಂಬುದನ್ನು ಹಾಗೂ ಸಾಂಸಾರಿಕ ಜೀವನದಲ್ಲಿ ಸತಿ ಪತಿಗೆ ಅರ್ಧಾಂಗಿಯಾದರೂ ಅವಳ ಒಲುಮೆಗಾಗಿ ದಾಸನಾಗಿರಬೇಕಾದ ಪ್ರಸಂಗ ಬರುತ್ತದೆ. ಅದಕ್ಕಾಗಿ

ಲೇಖಕರು ಈ ಪ್ರಬಂಧದಲ್ಲಿ ಪಂಚ ಸೂತ್ರಗಳನ್ನು ಹೆಂಡತಿಯನ್ನು ಒಲಿಸುವುದಕ್ಕಾಗಿಯೇ ರೂಪಿಸಿದ್ದನ್ನು ಕಾಣಬಹುದು.

'ಜಗತ್ತಿನಲ್ಲಿ ಹೆಂಡತಿಗಿಂತ ಮೋಹಕ ವ್ಯಕ್ತಿ ಬೇರೊಬ್ಬರಿಲ್ಲ'[೭೨] ಎಂದು ಹೇಳುವ ಲೇಖಕರು ಹೆಂಡತಿಯೂ ಗಂಡನ ಬೇಕು ಬೇಡಗಳನ್ನು ಈಡೇರಿಸುವ ಮಮತೆಯ ಮಾತೆಯಾಗಿರುವುದರಿಂದ ಅವಳು ತಾಯಿಗಿಂತ ಹೆಚ್ಚು ಆಕರ್ಷಿತಳಾಗುತ್ತಾಳೆ. ಅದಕ್ಕೆ ಗಂಡ ಅವಳ ದಾಸನಾಗುತ್ತಾನೆ. ಅವಳೇ ಮನೆಯ ಸಾಮ್ರಾಟಳಾಗೀ ಅಸಹಾಯಕ ಗಂಡನ ಜೀವ ತಿನ್ನುವ ಈಕೆ, ಆತನ ಜೇಬನ್ನು ಅಪಹರಿಸುತ್ತಾಳೆ. ಇಂತಹ ಹೆಂಡತಿಗೆ ದಾಸನಾಗದವ ಇಲ್ಲ ಎಂಬುದನ್ನು ಮೂರು ಲೋಕದ ಗಂಡನೆನಿಸಿಕೊಂಡ ಅರ್ಜುನನು ಚಿತ್ರಾಂಗದೆಯ ದಾಸನಾಗಿದ್ದುದನ್ನು ಉದಾಹರಿಸಿದ್ದಾರೆ. ಇಂತಹ ಹೆಂಡತಿ ಎಂಬ ಶಬ್ದ 'ಜೀವ ಹಿಂಡುತಿ' ಎಂಬುದರ ತದ್ಭವವೆಂದು ಹೇಳುವಲ್ಲಿ ಆಕೆ ತನ್ನ ಮೋಹಕತೆಯಿಂದ ಗಂಡನನ್ನು ಅಡಿಯಾಳಾಗಿ ಮಾಡಿಕೊಂಡು ಕೈಗೊಂಬೆಯಂತೆ ಕುಣಿಸುತ್ತಾಳೆ ಎಂದು ಹೆಂಡತಿಯ ಮಹಿಮೆಯನ್ನು ಮನೋಜ್ಞವಾಗಿ ವ್ಯಕ್ತಪಡಿಸಿದ್ದಾರೆ.

ಸ್ತ್ರೀಯನ್ನು ಪುರುಷ ಸಮಾಜ ಶೋಷಿಸುತ್ತದೆ ಎಂಬುದನ್ನು ಒಪ್ಪದ ಲೇಖಕರು ಸ್ತ್ರೀಯೇ ಪುರುಷ ಶೋಷಕಳಾಗಿದ್ದಾಳೆಂದು ಅದಕ್ಕೆ ಆಧಾರವಾಗಿ ಇಂದಿನ ಮನೆ ಮನೆಗಳಲ್ಲಿ ಮನೆಯ ಒಡತಿ ಹೆಂಡತಿಯೇ ಆಗಿರುವುದನ್ನು ಗುರುತಿಸಿದ್ದಾರೆ. ಆಕೆ ಹೇಳಿದಂತೆ ಕೇಳುವ ಗಂಡನನ್ನು ಅವನ ಕೊರತೆಗಳಿಂದಲೇ ತನ್ನ ಅಧೀನದಲ್ಲಿಟ್ಟುಕೊಂಡಿರುತ್ತಾಳೆ. ಇದರಿಂದ "ಬೀದಿಯಲ್ಲಿ ಸಿಂಹದಂತೆ ಗರ್ಜಿಸುವ ಗಂಡ, ಓಣಿಗೆ ಬಂದಾಗ ಹುಲಿಯಂತಾಗಿ, ಗಲ್ಲಿಗೆ ಬಂದಾಗ ನಾಯಿಯಾಗಿ, ಮನೆಯ ಹೊಸ್ತಿಲಲ್ಲಿ ಕಾಲಿಟ್ಟಾಗ ಬೆಕ್ಕಾಗಿ, ಹೆಂಡತಿಯ ಮುಂದೆ ನಿಂತಾಗ ಇಲಿಯಾಗುವ ಪ್ರಸಂಗವನ್ನು ಹೇಳುವ ಲೇಖಕರ ಮಾತಿನಲ್ಲಿ ಗಂಡನ ಕೊರತೆಯನ್ನರಿತ ಹೆಂಡತಿಯ ಮುಂದೆ ಗಂಡ ಇಲಿಯಾದುದರಲ್ಲಿ ತಪ್ಪೇನಿಲ್ಲ ಎನಿಸುತ್ತದೆ. ಇಂತಹ ಪ್ರಸಂಗಗಳಿಂದಲೇ "ಊರ ಸರದಾರ ಮನೆಯ ಹೆಂಡತಿಯ ಪಿಂಜಾರ" ಎಂಬ ಗಾದೆಯನ್ನು ಸೃಷ್ಟಿಸಿದನ್ನು ಹೇಳಬಹುದು.

ಲೇಖಕರು ತಾವು ಎಂದೂ ಹೆಂಡತಿಯ ದಾಸನಾಗುವುದಿಲ್ಲ ಎಂದು ಪ್ರತಿಜ್ಞೆ ತೊಟ್ಟು, ಮದುವೆಯ ದಿನದಂದೇ ಅಡಿಕೆಯಾಟದಲ್ಲಿ ಸೋತು ತಮ್ಮ ಪರ್ವ ಪ್ರತಿಜ್ಞೆ ಮುರಿದಿದ್ದನ್ನು ನೆನಪಿಸುತ್ತಾ ಹೊರಗೆ ಹುಲಿಯಂತಿದ್ದು ಒಳಗೆ ಇಲಿಯಾದರೆ ಏನೂ ತಪ್ಪಿಲ್ಲ ಎಂದಿದ್ದಾರೆ. ಹೆಂಡತಿಯ ಗುಲಾಮನಾಗಿರುವುದರಲ್ಲಿನ ಸುಖ ನಿಮಗೆ ತಿಳಿಯದೆಂದು ತಮ್ಮ ಗುಲಾಮತನವನ್ನು ಸಮರ್ಥಿಸಿದ್ದಾರೆ. ಅದಕ್ಕಾಗಿಯೇ ಹೆಂಡತಿಯನ್ನು ಒಲಿಸಿಕೊಳ್ಳುವುದಕ್ಕಾಗಿ ಪಂಚಸೂತ್ರಗಳನ್ನು ರೂಪಿಸಿ ಅದರ ಮೂಲಕ ಹೆಂಡತಿಯ ವಿಶ್ವಾಸಗಳಿಸುವ ಪ್ರಯತ್ನ ಮಾಡಿದ್ದಾರೆ.

೧. "ನಿಮ್ಮ ಪತ್ನಿಯ ಬಯಕೆಯನ್ನರಿತು ಅದನ್ನು ಕೂಡಲೇ ಪೂರೈಸಿರಿ, ಇಲ್ಲವಾದರೆ ನಿಮ್ಮ ಗತಿ ದೇವರಿಗೆ ಪ್ರೀತಿ".[೬೩]

ಈ ಸೂತ್ರದಲ್ಲಿ ಹೆಂಡತಿಯಾದವಳು ಹೊರಗಿನಿಂದ ಬಂದ ಗಂಡನನ್ನು ಹಸನ್ಮುಖದಿಂದ ಸ್ವಾಗತಿಸುತ್ತಿರಬೇಕಾದರೆ ಏನಾದರೂ ಬೇಡಿಕೆ ಇದ್ದೇ ಇರುತ್ತದೆ. ಅಂತಹದರಲ್ಲಿ ಏನ್ರಿ ಸಿನಿಮಾಕ್ಕೆ ಹೋಗೋಣವೇ ಎಂದು ಕೇಳಿದರೆ ಅದಕ್ಕೆ ನಿವೇನಾದರೂ ಏನೇ ನಿಂದು ಕಿಟಿ ಕಿಟಿ ಅತ್ತ ಅವರದು ಕಾಟ, ಇತ್ತ ನಿಂದು ಕಾಟ ಎಂದರೆ ಮುಗಿತು ನಗುಮುಖ ಅಳುಮುಖವಾಗಿ ಒಂದೆರಡು ದಿನ ಮಾತು ಕತೆಯಿಲ್ಲದೆ, ಮೌನ ಪ್ರತಿಭಟನೆ ನಡೆದಿರುತ್ತದೆ. ಮತ್ತೆ ನೀವು ಕಾಡಿ ಬೇಡಿ ಅವಳನ್ನು ಒಪ್ಪಿಸಬೇಕಾದರೆ ವಾರಗಳೇ ಕಳೆಯಬಹುದು. ಅದಕ್ಕಾಗಿಯೇ ಲೇಖಕರು ಪತ್ನಿಯ ಬಯಕೆಯನ್ನು ಬೇಗೆ ಪೂರೈಸಬೇಕೆಂದು ಹೇಳಿದ್ದಾರೆ.

೨. "ಹೆಂಡತಿಯನ್ನು ಸಂದರ್ಭವರಿತು ಹೊಗಳುತ್ತಾ ಹೋಗಿರಿ ಎಂದರೆ ನಿಮಗೆ ಸೌಖ್ಯ ನಿರ್ವಿಘ್ನವಾಗಿ ದೊರೆಯುತ್ತದೆ"[೬೪]

ಗಂಡನ ಹೊಗಳಿಕೆ ರಥದ ಗಾಲಿಗೆ ಎಣ್ಣೆಯಿದ್ದಂತೆ. ಊಟಕ್ಕೆ ಕುಳಿತಾಗ ಅವಳ ಅಡುಗೆಯನ್ನೊಮ್ಮೆ ಹೊಗಳಿದರೆ ಸಾಕು ಮುಖದ ಮೇಲೆ ಮುಗುಳ್ನಗೆ ಮೂಡುತ್ತದೆ. ಒಂದು ವೇಳೆ ಅವಳ ಮುಂದೆ ಬೇರೆಯವರ ಅಡುಗೆಯನ್ನು ಕೊಂಡಾಡಿದರೆ ಮುಖ ಸಿಂಡರಿಸುತ್ತಾಳೆ. 'ಈ ಸೀರೆ ಎಷ್ಟು ಚೆಂದಾಗಿದೆಯಲ್ಲೇ' ಎಂದು ಕೇಳೀದರೆ ಅದಕ್ಕೆ 'ಬಾಳ ತಂದು ಕೊಟ್ಟರಲ್ಲಾ, ಅದು ನಮ್ಮ ಅಣ್ಣ ತಂದಿದ್ದು' ಎಂದು ಕೊಂಕು ನುಡಿಯಾಡುತ್ತಾಳೆ. ಆಗ 'ಓ ರಾಣಿ ಸಾಹೇಬರು ಅದಕ್ಕೇನು ಸಾಕ್ಷಾತ್ ಲಕ್ಷ್ಮಿಯಂತೆ ಕಾಣುತ್ತಿದ್ದಾರೆ' ಎಂದು ಸಂದರ್ಭೋಚಿತ ಮಾತಾಡಿದರೆ ಮನೆ ನಂದನವನವಾಗುತ್ತದೆ ಎಂದು ಹೊಗಳಿಕೆಯ ಮಹಿಮೆಯನ್ನು ಹೇಳಿದ್ದಾರೆ.

೩. "ಹೊಗಳಿಕೆ ನಿಮ್ಮ ಎದುರಾಳಿಗೆ ತಿಳಿಯದಂತೆ ಸೂಕ್ಷ್ಮವಾಗಿರಲಿ"[೬೫]

ಹೊಗಳಿಕೆ ಪಿಕ್ ಪಾಕೆಟ್ ನಂತೆ ಇರಬೇಕು. ಹೊಗಳಿದ್ದು ಹೊಗಳಿಸಿಕೊಂಡವರಿಗೆ ಅದರಲ್ಲೂ ಗಂಡನ ದೌರ್ಬಲ್ಯಗಳನ್ನು ಬಲ್ಲ ಹೆಂಡತಿಗೆ ಗೊತ್ತಾಗಬಾರದೆನ್ನುತ್ತಾರೆ. ಯಾರಾದರೂ ಕುಟುಂಬದಲ್ಲಿ ಬೇರೆಯಾದರೆಂಬ ಸುದ್ದಿ ಹೇಳುತ್ತಾ, 'ನೀನು ಮಾತ್ರ ನಿನ್ನ ನೆಗೆಣ್ಣೆಯವರೊಂದಿಗೆ ಜಗಳಾಡಿದ್ದು ನಾನು ಕಾಣೆ ಎಂದಾಗ ಖುಷಿಗೊಂಡ ಆಕೆ ನಮ್ಮ ಮನೆಯಲ್ಲಿ ಜಗಳವೆಂಬುದೇ ಇಲ್ಲ ಎನ್ನುತ್ತಾಳೆ. ಇದರಿಂದ ಗಂಡನ ಅಸ್ತ್ರ ಸಫಲವಾದಂತಾಯಿತು. ಅದೇ ರೀತಿ ಮನೆಗೆ ಅತಿಥಿಗಳು ಬರುತ್ತಾರೆ ಊಟಕ್ಕೆ ರೆಡಿಮಾಡು ಎಂದಾಗ ಮೊದಲಿಗೆ ನಿರಾಕರಿಸುವ ಆಕೆ. ಒತ್ತಾಯದಿಂದ ಪುನಃ ಪುನಃ ಉಚ್ಚರಿಸಿದರೆ ಸಾಕು ಹೇಳಿದ ಸಮಯಕ್ಕೆ ಎಲ್ಲಾ ರೆಡಿ ಇರುತ್ತದೆ. ಅವಳ ಸಹನಾಶೀಲತೆಗೆ ಅಲ್ಲಿ ಎಲ್ಲರಿಂದಲೂ ಹೊಗಳಿಕೆ

ದೊರೆಯುತ್ತದೆ.

೪. "ಸಾಮ್ರಾಟರಿಗೆ, ಮಾಂಡಲಿಕರು ಕಪ್ಪ ಕಾಣಿಕೆಯನ್ನು ಒಪ್ಪಿಸುವಂತೆ ಮಡದಿಗೆ ಆಗಾಗ ಕಾಣಿಕೆಗಳನ್ನು ಅರ್ಪಿಸಿ ಧನ್ಯರಾಗಿರಿ"[೬೬]

ಗಂಡನಾದವನು ಎಂದಾದರು ಪರ ಊರಿಗೆ ಹೋಗಿ ಮರಳಿ ಬರುವಾಗ ಹೆಂಡತಿಗೆ ರೇಷ್ಮೆ ಸೀರೆ ತರದಿದ್ದರೂ ಒಂದು ಸರವನ್ನಾದರೂ ತಂದುಕೊಡಬೇಕು. ಇಲ್ಲದಿದ್ದರೆ ಗಾಣದೆತ್ತಿನಂತೆ ದುಡಿಯುವುದೇ ನಮ್ಮ ಕಾರ್ಯವಾಯಿತು. ಈ ಮನೆಯಲ್ಲಿ ಉಂಡ ಸುಖವೇ, ಉಟ್ಟ ಸುಖವೇ ಎಂದು ಸ್ವಾಗತ ಭಾಷಣ ಮಾಡುವ ಹೆಂಡತಿಯನ್ನು ಸಂತೈಸುವುದು ತುಂಬಾ ಕಷ್ಟ. ಅದಕ್ಕೆಂದೇ ಪರ ಊರಿಗೆ ಹೋದಾಗ ಮರೆಯದೆ ಒಂದು ಕಾಣಿಕೆ ತನ್ನಿ ಎಂದು ಹೇಳಿದ್ದಾರೆ.

೫. "ನಿರಂತರ ಪ್ರೀತಿಯ ನಡುವೆ ನಿಮ್ಮ ಪತ್ನಿಯ ಜೊತೆಗೆ ಆಗಾಗ ಹುಸಿ ಕಲಹವನ್ನಾಡಿರಿ"[೬೭]

ಸುಖ ಸಂಸಾರದಲ್ಲಿ ಗಂಡ ಹೆಂಡತಿಯ ವಿರುದ್ಧ ಸಿಟ್ಟಿಗೇಳಬೇಕು. ಇಲ್ಲದಿದ್ದರೆ ಹೆಂಡತಿ "ಹೊಡೆಯಲಾರದ ನನ್ನ ಗಂಡನೋ ಇಲ್ಲವೇ ಕರಿಯ ಒನಕೆಯ ತುಂಡೋ" ಎಂದು ಮೂಗು ಮುರಿಯುತ್ತಾಳೆ. ಮನೆಯಲ್ಲಿ ಆಗಾಗ ಘುಸು ಮುಸು ಘರ್ಷಣೆ ನಡೆದರೆ ಹೆಂಡತಿ ಒಂದಿಷ್ಟು ಕಣ್ಣೀರು ಸುರಿಸುತ್ತಾಳೆ. ಇದರಿಂದ ಹೃದಯ ಕರಗಿ ನೀರಾಗಿ ಮನಸ್ಸಿಗೆ ಚುರ್ ಎನಿಸಿ ಅವಳನ್ನು ರಮಿಸುವ ಕಾರ್ಯದಿಂದ ಬರುವ ನಗೆಯ ಸೊಗಸು ವರ್ಣಿಸಲಾಸಾಧ್ಯ ಎಂದು ಇಂಥ ಸಂಸಾರದಿಂದ ಸ್ವರ್ಗಕ್ಕೆ ಕಿಚ್ಚು ಹಚ್ಚುವ ಪರಿ ದೂರ ಇಲ್ಲ ಎಂದು ಹೇಳಿದ್ದಾರೆ.

ಈ ಪ್ರಬಂಧವು ಹೆಂಡತಿಯನ್ನು ಒಲಿಸಿಕೊಳ್ಳುವಲ್ಲಿ ಪ್ರೀತಿಯ ಪ್ರಶಂಸೆ ಹೇಗೆ ನೆರವಾಗುತ್ತದೆ ಎಂಬುದನ್ನು ಹಾಗೂ ಹೆಂಡತಿಯ ದಾಸನಾಗುವ ಗಂಡನ ಮನೋಸ್ಥಿತಿಯನ್ನು ವೈಚಾರಿಕ ನೆಲೆಯಲ್ಲಿ ಗುರುತಿಸಿದ್ದು ಈ ಪ್ರಬಂಧದಲ್ಲಿ ಕಾಣಬಹುದು.

**ತತ್ವಜ್ಞಾನ ಹೇಳುವುದಕ್ಕೆ**

ಮಾನವನ ಬದುಕಿಗೆ ತತ್ತ್ವಜ್ಞಾನ ಏಕೆ ಅವಶ್ಯಕ ಎಂದು ಹೇಳುವ ಈ ಪ್ರಬಂಧದಲ್ಲಿ 'ತತ್ವ' ಎನ್ನುವ ವಾದವನ್ನು ವಿವಿಧ ವಚಾನಾಮೃತಗಳ ಮೂಲಕ ಅದರ ವಸ್ತುವಿನ ವೈರುಧ್ಯಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲಾರದೇ ನಾವು ಸೋತಿದ್ದನ್ನು ಇಂದಿನ ಸಮಾಜದ ಜನರ ನಡೆ-ನುಡಿಯನ್ನು ಸಮೀಕರಿಸಿ ಚಿತ್ರಿಸಿದ್ದಾರೆ. ತತ್ವಜ್ಞಾನದ ಬಗೆಗೆ ಆಕರ್ಷಣೆ ಇದ್ದ ಲೇಖಕರು ತತ್ವಜ್ಞಾನವನ್ನು ಪಾಂಡಿತ್ಯ ಪ್ರದರ್ಶನಕ್ಕೆ ಬಳಸಿಕೊಳ್ಳದೆ ಕಾರ್ಯರೂಪಕ್ಕೆ ತರಬೇಕೆಂದು ನಿರ್ಧರಿಸುತ್ತಾರೆ. "ಕಳಬೇಡ ಕೊಲಬೇಡ, ಹುಸಿಯ ನುಡಿಯಲು ಬೇಡ ಅನ್ಯರಿಗೆ ಅಸಹ್ಯ ಪಡಬೇಡ' ಎಂಬ ಬಸವಣ್ಣನವರ ವಚನ ತತ್ವವನ್ನು

ಜೀವನಕ್ಕೆ ಅಳವಡಿಸಿಕೊಳ್ಳಲು ನಿರ್ಧರಿಸುತ್ತಾರೆ. ಕಾಲೇಜಿಗೆ ಹೋದರೆ ಅಲ್ಲಿ ವಿದ್ಯಾರ್ಥಿಗಳು ತರಗತಿ ಇದೆ ಬನ್ನಿ ಸಾರ್ ಎಂದು ಕರೆದರೆ ನಾಳೆ ಖಂಡಿತ ತೆಗೆದುಕೊಳ್ಳುವೇ ಎನ್ನುವಲ್ಲಿ ಕರ್ತವ್ಯವನ್ನು ನಯವಾಗಿ ಹೀಗಳೆದು, 'ಕಲಬೇಡ' ಎಂಬುದಕ್ಕೆ ತಾವು ತತ್ವ ಬಾಹಿರವಾಗಿ ತಮ್ಮ ತದ್ವಿರುದ್ಧ ನೀತಿಯನ್ನು ಪ್ರದರ್ಶಿಸಿದ್ದು ಕಾಣಬಹುದಾಗಿದೆ.

'ಅತ್ತಲಿತ್ತ ನೋಡದಂತೆ ಕುರುಡನ ಮಾಡಯ್ಯ ತಂದೆ' ಎಂಬ ಬಸವಣ್ಣನ ವಚನ ಅನ್ಯರ ಸಂಪತ್ತಿಗೆ ಆಸೆ ಪಡದಂತೆ ಮಾಡು ಎಂಬ ಅರ್ಥವುಳ್ಳದ್ದು. ಆದರೆ, ಇಲ್ಲಿ ಜನರು ಪರಧನ, ಪರಸ್ತ್ರೀಯರಿಗೆ ಚಿರಂತನವಾಗಿ ಹಾತೊರೆದು ನಿಂತಿರುತ್ತಾರೆ. ಸರಕಾರಿ ಆಫೀಸುಗಳಲ್ಲಿ ಹಣ ಕೊಡದೇ ಯಾವ ಕೆಲಸಗಳು ಆಗುವುದಿಲ್ಲ ಎಂದು ನಮ್ಮ ವ್ಯವಸ್ಥೆಯಲ್ಲಿನ ಭ್ರಷ್ಟಾಚಾರದ ಬೇರುಗಳು ಹೇಗಿರುತ್ತವೆ ಎಂದು ಬಿಂಬಿಸಿದ್ದಾರೆ. "ಹಸಿವಾದರೆ ಭಿಕ್ಷಾನ್ನಗಳುಂಟು, ಶಯನಕ್ಕೆ ಹಾಳು ದೇಗುಲವುಂಟು, ಆತ್ಮಸಂಗಾತಕ್ಕೆ ನಿನೆನಗುಂಟು" ಎಂದು ಅಕ್ಕಮಹಾದೇವಿ ದೇವರಿಗೆ ಹೇಳಿದ್ದನ್ನು ಇಂದು ನಾವು ಭೋಗಭಾಗ್ಯಗಳಲ್ಲಿ ಜೀವನದ ಪರಮೋದ್ದೇಶಕ್ಕೆ ಇಂದ್ರಿಯಗಳ ತೃಪ್ತಿಗಾಗಿ ಹಂಬಲಿಸಿ ಮಹಾಸಂತರ ತಾತ್ವಿಕ ನುಡಿಗಳನ್ನು ಅಲ್ಲಗಳೆದಿದ್ದೇವೆ. ಅದೇ ರೀತಿ ಸರ್ವಜ್ಞನ ವಚನ "ಕೊಟ್ಟರೂ ತನಗೆ ಬಚ್ಚಿಟ್ಟದ್ದು ಪರರಿಗೆ" ಎಂದು ಧನಧರ್ಮದ ಮಹತಿಯನ್ನು ಸಾರುವ ವಚನ ತತ್ವವನ್ನು ಇಂದು ಅನ್ಯರಿಂದ ತೆಗೆದುಕೊಳ್ಳುವಲ್ಲಿ ಆನಂದ ಅನುಭವಿಸುತ್ತಾರೆಯೇ ವಿನಃ ಕೊಟ್ಟಿದ್ದು ಗೊತ್ತಿಲ್ಲ ಎಂದು ತತ್ವ ಮರೆತಿದ್ದು ಗೊತ್ತಾಗುತ್ತದೆ.

'ಸುಖ ದುಃಖಗಳನ್ನು ಸಮವೆಂದು ತಿಳಿ' ಎನ್ನುವ ಸಂಸ್ಕೃತದ ನುಡಿಯೊಂದನ್ನು ನಾವು ಸುಖ ಬಂದಾಗ ಹಿಗ್ಗಿ, ದುಃಖ ಬಂದಾಗ ಕುಗ್ಗುವ ಪ್ರವೃತ್ತಿಯವರಾಗಿದ್ದೇವೆ. ಅದೇ ರೀತಿ 'ಕಾರ್ಯ ಮಾಡು ಫಲವನ್ನೇನೂ ಅಪೇಕ್ಷಿಸಬೇಡ" ಎನ್ನುವುದನ್ನು ಇಂದು ಜನರು ಕಾರ್ಯರೂಪಕ್ಕೆ ತರದೇ ಹೋಗಿದ್ದಾರೆ. ಅದೇರೀತಿ "ನೆರೆ ಹೊರೆಯವರನ್ನು ಪ್ರೀತಿಸು' ಎಂಬ ತತ್ವಕ್ಕೆ ನಾವು ಇಂದು, ಮಲಗುವಾಗ ಟೇಪರೆಕಾರ್ಡರ್ ಹಚ್ಚುವ, ನೀರಿಗಾಗಿ ಹೊಡೆದಾಡುವ, ಇಲ್ಲವೆ ಕಸದ ರಾಶಿಯನ್ನು ಮನೆ ಮುಂದೆ ಚೆಲ್ಲುವ ಕಾರ್ಯಗಳಿಂದ ನೆರೆ ಮನೆಯ ವೈರತ್ವವನ್ನು ಸಂಪಾದಿಸಿದ್ದೇವೆ ವಿನಃ ಪ್ರೀತಿಯನ್ನಲ್ಲ ಎಂಬ ಅಂಶವನ್ನು ಇಂದು ನಾವು ಧೃಢಪಡಿಸಿದ್ದೇವೆ. ಇಂತಹ ತತ್ವಗಳು ಕೇವಲ ಧರ್ಮಗ್ರಂಥಗಳಲ್ಲಿನ ಮೌಲ್ಯಗಳೆಂದು ತಿಳಿದ ನಾವು ಕಾಡುಪಶುಗಳಂತೆ ಜೀವನ ನಡೆಸುತ್ತಾ ತತ್ವವನ್ನು ಬಾಯಿಂದ ಹೇಳಿ ಆಚರಣೆಗೆ ತರದೇ ವಿವೇಕ ಜ್ಞಾನದಿಂದ ವಂಚಿತರಾಗಿದ್ದೇವೆ ಎಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ.

ಈ ರೀತಿಯಾಗಿ ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳಲ್ಲಿ ಒಂದು ವಿಷಯವನ್ನು, ಸನ್ನಿವೇಶಗಳನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ನೋಡಿ ಜೀವನ ಸುಗಮತೆಗೆ ಕೆಲವು ತತ್ವ ವಿಚಾರಗಳನ್ನು ವೈಚಾರಿಕ ನೆಲೆಯಲ್ಲಿ ಅಭಿವ್ಯಕ್ತಿಸಿದ್ದನ್ನು ಅವರ ಲಲಿತ ಪ್ರಬಂಧಗಳಲ್ಲಿ ಗುರುತಿಸಬಹುದಾಗಿದೆ.

## ಮಕ್ಕಳ ಮನಸ್ಸು

ಮಕ್ಕಳು ಪ್ರೀತಿಯ ಪ್ರತಿರೂಪ, ಮಕ್ಕಳೆಂದರೆ ಇಷ್ಟಪಡದವರು ಯಾರು ಇಲ್ಲ. ಜಗದ ಜಂಜಾಟದಿಂದ ಮನುಷ್ಯ ಎಷ್ಟೇ ದುಃಖಿತನಾದರೂ ಮಕ್ಕಳ ಮುಖವನ್ನು ನೋಡಿ ಆ ನೋವನ್ನು ಮರೆಯುತ್ತಾನೆ. ಅಷ್ಟೇ ಏಕೆ ಒಂಬತ್ತು ತಿಂಗಳು ಹೊತ್ತು ಹೆತ್ತ, ತಾಯಿ ತನ್ನ ಹೆರಿಗೆ ನೋವನ್ನೆಲ್ಲಾ ಆ ಮಗುವಿನ ಮುಖ ನೋಡಿ ಮರೆಯುತ್ತಾಳೆ. ಅದಕ್ಕೆಂದೇ 'ಹೆತ್ತವರಿಗೆ ಹೆಗ್ಗಣ ಮುದ್ದು' ಎಂದು ಹೇಳುವುದು ಲೇಖಕರಿಗೆ ಇಂತಹ ಮುದ್ದಾದ ಮಗಳಾಗಿ ಜನಸಿದ ರೇಖಾಳ ವ್ಯಕ್ತಿಚಿತ್ರಣವನ್ನು ಅವಳ ಹಾವ ಭಾವ, ನಡೆ-ನುಡಿಗಳಿಂದ, ಅವಳ ದಯಾಪರತೆ ಚಾಣಾಕ್ಷತನದಿಂದ ಎಲ್ಲರ ಮನಸ್ಸನ್ನು ಸೆಳೆಯುವ ಅವಳ ವ್ಯಕ್ತಿತ್ವವನ್ನು ಸಮಕಾಲೀನ ಸಮಾಜಕ್ಕೆ ಮಕ್ಕಳ ಮನಸ್ಸು ಹಾಗೂ ಗುಣಗಳು ಹೇಗಿರಬೇಕೆಂಬ ಅಂಶವನ್ನು ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ರೇಖಾ ಇನ್ನೂ ಚಿಕ್ಕ ಮಗು. ಅವಳೆಂದರೆ ಎಲ್ಲಾರಿಗೂ ಅಚ್ಚುಮೆಚ್ಚು. ಅವಳ ಮುದ್ದು ಮುಖ, ನಗು, ತುಂಟ ಮಾತುಗಳಿಂದ ಲೇಖಕರಿಗೆ ಜೀವನಕ್ಕೆ ಜೀವಳಾವಾಗಿದ್ದಾಳೆ. ಅಂತೆಯೇ ಅವಳ ಕಣ್ಣಿನಿಂದ ನೀರು ಬಂದರೂ ಸಹಿಸದೇ ತಮ್ಮ ಕಣ್ಣಲ್ಲಿ ನೀರು ತುಂಬಿದ್ದನ್ನು ಹೇಳುವಲ್ಲಿ ತಂದೆಗೆ ಮಕ್ಕಳ ಮೇಲಿನ ಮಮಕಾರ ಎಂತಹದ್ದು ಎಂಬ ಅಂಶ ವ್ಯಕ್ತವಾಗುತ್ತದೆ. ಲೇಖಕರು ತಮ್ಮ ವ್ಯಕ್ತಿತ್ವದ ಅರೆಕೊರೆಗಳನ್ನು ತಿದ್ದುವವಳು ಅವಳೇ ಆಗಿದ್ದಾಳೆ ಎಂದು "ನನ್ನ ಬಾಳಿನ ಕ್ಷುದ್ರ ಭೂಮಿಯಲ್ಲಿ ಬೆಳೆದ ಕುಸುಮ ಅವಳು"[೭೮] ಎಂದು ಹೇಳುವಲ್ಲಿ ಮಕ್ಕಳ ನಿಷ್ಕಲ್ಮಷ ಮನಸ್ಸು, ಪ್ರೀತಿ, ಮುಗ್ಧತೆಯಿಂದ ಹೆತ್ತವರಲ್ಲಿನ ದುಃಖ ದುಮ್ಮಾನಗಳು ಹೇಗೆ ಮರೆಯಾಗುತ್ತವೆ ಎಂಬ ಅಂಶವನ್ನು ಈ ಮೂಲಕ ತಿಳಿಯಪಡಿಸಿದ್ದಾರೆ.

ಮುದ್ದಿನ ಮಗಳಾದ ರೇಖಾ ತಂದೆ ತಾಯಿಗಳ ಮನಸ್ಸನ್ನು ಅರಿಯುವ ಸಹೃದಯಿಯಾಗಿ ಅವರ ಸಂತೋಷವನ್ನೇ ಬಯಸುವ ಕರುಣಾಮಯಿಯಾಗಿ ಕಂಡುಬರುತ್ತಾಳೆ. ದೀಪಾವಳಿಗೆ ಬಟ್ಟೆ ಕೊಳ್ಳಲು ಅಸಹಾಯಕನಾದ ತಂದೆಯ ಮನಸ್ಸನ್ನು ಅರಿಯುವ ಮಗಳು "ನನಗೆ ಹೊಸ ಬಟ್ಟೆ ಹೋಲಿಸಬೇಡ, ಪಂಚಮಿಗೆಂದು ಹೊಲಿಸಿದ ಪರಕಾರ ಪೋಲಕವನ್ನೇ ಒಗೆದು ಇಸ್ತ್ರಿ ಮಾಡಿಸೋಣ" ಎಂಬ ಹೇಳಿಕೆಯಲ್ಲಿ ಮಕ್ಕಳು ಪಾಲಕರ ಸಂಕಷ್ಟಕ್ಕೆ ಪಾಲುದಾರರು ಎಂಬ ಅಂಶವನ್ನು ರೇಖಾಳ ಮೂಲಕ ವ್ಯಕ್ತಪಡಿಸಿದ್ದು, ಪ್ರೀತಿಯ ಅಂತಃಕರಣವಿರುವವರ ಕಣ್ಣು ತೇವಗೊಳಿಸುತ್ತದೆ.

ಇಂತಹ ವ್ಯಕ್ತಿತ್ವದ ರೇಖಾ ತಾನು ಆಗಾಗ ಕೂಡಿ ಹಾಕಿದ ಹಣವನ್ನು ತಂದೆಯ ಆರ್ಥಿಕ ಸಂಕಷ್ಟ ಕಾಲಕ್ಕೆ ನೀಡಿ ತಾನು ಸಂಕಷ್ಟಕ್ಕೆ ಪಾಲುದಾರಳೆಂದು ಕೌಟುಂಬಿಕ ಕಾಳಜಿಯನ್ನು ವ್ಯಕ್ತಪಡಿಸಿದ್ದು ಅವಳ ವ್ಯಕ್ತಿತ್ವವನ್ನು ಎತ್ತರಿಸುತ್ತದೆ. ಪ್ರವಾಸದ ಸಂದರ್ಭದಲ್ಲಿ ಬ್ಯಾಗು ಕಳೆದಿತ್ತೆಂದು ಚಿಂತಾಕುಲರಾಗಿ ದುಡುಕಿ ಮಗಳ ಮೇಲೆ ಕೈಮಾಡಿ ನಂತರ ಅವಳಿಂದಲೇ ಬ್ಯಾಗು ದೊರಕಿದಾಗ ತಮ್ಮ ಅಂದಿನ ಹುಚ್ಚುತನದ

ಅವಸ್ಥೆಯನ್ನು ಮಗುವಿನ ಈ ನಿರೀಕ್ಷಣಾಸ ಶಕ್ತಿ ಪಾರು ಮಾಡಿದ ಘಟನೆ ಎಂದು ತಮ್ಮ ತಪ್ಪಿನ ಅರಿವಾಗಿ ಆತ್ಮವಿಮರ್ಶೆ ಗೈದಿದ್ದರಲ್ಲಿ ಮಕ್ಕಳ ಮನಸ್ಸು ಎಂತಹದ್ದು ಎಂಬ ಅಂಶ ಅವರ ಕಾಳಜಿಯಲ್ಲಿ ವ್ಯಕ್ತವಾಗುತ್ತದೆ. ಏನೋ ವಸ್ತು ಒಂದನ್ನು ಬೇಡಿ ಹಟ ಹಿಡಿಯುವ ಮಕ್ಕಳನ್ನು ನೋಡಿ ದಂಡಿಸುವ ಪಾಲಕರು ಅದರಿಂದ ಘಾಸಿಗೊಳ್ಳುವ ತಮ್ಮ ಮನಸ್ಸನ್ನು ಮತ್ತೇ ಆ ಮಕ್ಕಳ ಮುಖವನ್ನೇ ನೋಡಿ ಮರೆಯುತ್ತಾರೆ. ಒಂದೊಮ್ಮೆ ರೇಖಾ ನೆರೆಮನೆಯ ಮಕ್ಕಳನ್ನು 'ಭಿಕಾರಿ' ಎಂದು ಕರೆದಿದ್ದು ಖೇದವೆನಿಸಿ ನೋಡಮ್ಮ ಹಾಗೆ ಅನ್ನಬಾರದು ಏನು ಕೈಯಲ್ಲಿದ್ದರೂ ಅದನ್ನು ಹಂಚಿಕೊಂಡು ತಿನ್ನಬೇಕು ಎಂಬ ಸಲಹೆ ನೀಡಿದರೆ, ಅದನ್ನು ಸ್ವೀಕರಿಸಿ ಆವಾಗಲೇ ಕಾರ್ಯರೂಪಕ್ಕೆ ತರುವ ಅವಳ ಔದಾರ್ಯ ಮೆಚ್ಚುವಂತಹದ್ದು. ಇಂತಹ ಮನಸ್ಸುಳ್ಳ ರೇಖಾ ಪಠಮಾರಿ ಮಾತಿನಲ್ಲೇ ತರ್ಕ ಹುಡುಕಿ ಹಿಂದಿನ ನೆನಪನ್ನೆಲ್ಲಾ ಕೆದಕಿ ಸಂದರ್ಭಕ್ಕೆ ತಕ್ಕಂತೆ ಬಳಸುವ ಅವಳ ಜಾಣ್ಮೆ ಮೆಚ್ಚುವಂತಹದು. ಇದರಿಂದ ಮನಸೋಲುವ ಲೇಖಕರು "ಮಕ್ಕಳ ಮನಸ್ಸು ಮಡಿಮಾಡಿದ ಬಟ್ಟೆಯಂತಿರುತ್ತದೆ"[೭೯] ಎಂದು ಅವರ ನಿಷ್ಕಲ್ಮಶ ಗುಣವನ್ನು ತೋರ್ಪಡಿಸಿದ್ದಾರೆ.

ಮಕ್ಕಳ ಮನಸ್ಸಿನ ರೀತಿಯನ್ನು ಹೊಗಳುತ್ತಾ ರೇಖಾ ತನ್ನ ಬಯಕೆಗಳನ್ನು ಪರಿಸ್ಥಿತಿಯ ಅರಿವಾಗಿ ಅದನ್ನು ತಿರಸ್ಕರಿಸುವ ಅವಳ ಸಾತ್ವಿಕ ಮನೋಭಾವವನ್ನು "ಸಣ್ಣ ಮಗುವಿನಲ್ಲಿಯ ಅಭಿಮಾನ ಹಾಗೂ ಬಯಕೆಗಳ ನಡುವಿನ ಹೋರಾಟ ನನಗೆ ಮನೋವಿಜ್ಞಾನದ ಹೊಸ ಪಾಠ ಹೇಳಿಕೊಟ್ಟಿತು"[೮೦] ಎಂದು ಹೇಳಿದ್ದರಲ್ಲಿ ಮಕ್ಕಳ ಜೀವನದಲ್ಲಿ ತಮ್ಮ ಸ್ವಾಭಾವಿಕ ಪ್ರೀತಿಯಿಂದ ಅಗಾಧ ಆನಂದವನ್ನು ನೀಡಿ ಹೇಗೆ ಪಾಲಕರ ಶ್ರೇಯಸ್ಸಿಗೆ ಪಾಲುದಾರರಾಗುತ್ತಾರೆ ಎಂಬ ಅಂಶವನ್ನು ಈ ಪ್ರಬಂಧದಲ್ಲಿ ರೇಖಾಳ ಪಾತ್ರ ಚಿತ್ರಣದ ಮೂಲಕ ವ್ಯಕ್ತಪಡಿಸಿದ್ದಾರೆ.

**ಬಾಳವ್ವ**

ಮಾನವ ಸಮಾಜ ಜೀವಿ ನಿಜ. ಆದರೆ ಇಂದು ಮಾನವ ತನ್ನ ಮಾನವೀಯ ಅಂತಃಕರಣದಿಂದಲೇ ಸಾಮಾಜಿಕ ಸಂಬಂಧಗಳು ಗಟ್ಟಿಯಾಗಿ ಉಳಿದಿವೆ ಎಂಬ ಮಾತು ಅರ್ಧಸತ್ಯ. ಇಂತಹ ಮಾನವೀಯತೆಯಿಂದ ವಂಚಿತಳಾದ ಬಾಳವ್ವನಂತಹ ಒಬ್ಬ ಕೂಲಿ ಕೆಲಸಗಾರಳ ಅಂತಃಕರಣವನ್ನು ಅರಿತ ಲೇಖಕರು ಅವಳ ವ್ಯಕ್ತಿಚಿತ್ರಣವನ್ನು ಹಾಗೂ ಇಂದು ಬಡವರ ಕುರಿತಾದ ಸಾಮಾಜಿಕ ಕಾಳಜಿ ಎಂತಹದು ಎಂಬ ಅಂಶವನ್ನು ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ಬಾಳವ್ವ ಓರ್ವ ಮುಸುರೆ ತಿಕ್ಕುವ ಕೆಲಸದವಳು. ಇವಳನ್ನು ಬಡತನದ ಪ್ರತೀಕದಂತೆ ಈ ಪ್ರಬಂಧದಲ್ಲಿ ಬಿಂಬಿಸಲಾಗಿದೆ. ಬಾಳವ್ವನಿಗೆ ಆಸ್ತಿಯೆಂದರೆ ಅದು ಅವಳ ನಗು. ಸುಖಬರಲಿ, ಕಷ್ಟಬರಲಿ, ಹೊಟ್ಟೆ ಹಸಿದರೂ, ತುಂಬಿದ್ದರೂ ನಗುವಿನಿಂದ ಮಾತ್ರ ವಂಚಿತಳಾದವಳಲ್ಲ. ಇವಳದು ದೊಡ್ಡ ಸಂಸಾರ. ಗಂಡು ಹೆಣ್ಣು ಮಕ್ಕಳಿವೆ. ಆ ಮಕ್ಕಳೆಲ್ಲಾ ರೋಗ ರುಜಿನಗಳ ತಾಣದಂತೆ ಮೈಮೇಲೆಲ್ಲಾ

ಕಜ್ಜಿ, ಸಿಂಬಳ, ಒಣಗು ಮುಖದಿಂದ ಹಸಿವಿನ ಹುಳುಗಳಾಗಿವೆ. ಇಂತಹ ನಿಕೃಷ್ಟ ಬಡತನದ ಸ್ಥಿತಿಯಲ್ಲಿ ಬದುಕುತ್ತಿರುವ ಬಾಳವ್ವನಂತಹ ಕುಟುಂಬದ ಸ್ಥಿತಿ ನೋಡಿ ಮರುಗದ ತಮ್ಮನ್ನು ಮನಸ್ಸಲ್ಲೇ ಹೀಗಳೆದು ದಲಿತರ, ಬಡವರ, ಉದ್ಧಾರದ ಭಾಷಣ ಮಾಡುವ ನಾನು, ಎದುರುಗಿರುವ ಬಡವರ ಕಣ್ಣೀರು ಒರೆಸುವ ವಿಶಾಲ ಹೃದಯ ಇಲ್ಲದಾಯ್ತಲ್ಲ ಎಂಬ ನೋವನ್ನು ವ್ಯಕ್ತಪಡಿಸಿದ್ದಾರೆ. ಇದರಿಂದ ಬಡವರ ಕುರಿತಾದ ಕಾಳಜಿಯ ಅಂತಃಕರಣಕ್ಕೆ ಮಿಡಿಯದಿರುವ ಜನರ ಮನೋವ್ಯಥೆ ವ್ಯಕ್ತವಾಗುತ್ತದೆ.

ಬಾಳವ್ವ ಇನ್ನೊಬ್ಬರ ಮನೆಯಲ್ಲಿ ಮುಸುರೆ ತಿಕ್ಕಿ ಬದುಕುವವಳು. ಈ ಕಾಯಕದಿಂದಲೇ ಗಂಡ, ಮಕ್ಕಳಿಗೆ ಹೊಟ್ಟೆ ತುಂಬಿಸುತ್ತಾಳೆ. ಅವಳಿಗೆ ಇರಲೂ ಒಂದು ಮನೆಯಿಲ್ಲದೆ, ಸ್ಟೇಡಿಯಂ ಒಂದರ ಮೂಲೆಯಲ್ಲಿ ವಾಸಿಸುತ್ತಾಳೆ. ಅಲ್ಲಿಯೂ ಅಧಿಕಾರಗಳ ಬೈಗಳು, ಶ್ರೀಮಂತರ ತಿರಸ್ಕಾರ, ಮಧ್ಯಮವರ್ಗದ ಉಪೇಕ್ಷೆ, ಇಂತಹವುಗಳಿಂದ ಕೆಲವು ಸಲ ಬೀದಿಗೆ ಬಂದು ಬದುಕುವ ಪ್ರಸಂಗ ಬರುವುದು. ಅವಳ ಮನೆಯಲ್ಲಿನ ಸಾಮಾನುಗಳನ್ನೆಲ್ಲಾ ಒಂದು ಸಣ್ಣ ಬಟ್ಟೆಯಲ್ಲೇ ಕಟ್ಟಿಡಬಹುದೆಂಬ ಮಾತನ್ನು ಹೇಳಿ ತಮ್ಮ ಮನೆಯಲ್ಲಿ ಪ್ರಾಥಮಿಕ ಅಗತ್ಯಕ್ಕಿಂತ ಹೆಚ್ಚಾಗಿ ರಾಶಿ ರಾಶಿ ಬಿದ್ದಿರುವ ಸಾಮಾನುಗಳನ್ನು ಖರೀದಿಸುವಲ್ಲೆ ತಮ್ಮ ಶಕ್ತಿ ವ್ಯಯಿಸಿದ್ದನ್ನು ತಮ್ಮ ಬಾಳದುರಂತಕ್ಕೆ ತಾವೇ ಆಹ್ವಾನ ಕೊಟ್ಟಿದ್ದೇವೆ ಎಂದು ಹೇಳುವಲ್ಲಿ, ಬಡವ ತನ್ನ ಅಗತ್ಯಕ್ಕೆ ಬೇಕಾದ ವಸ್ತುವನ್ನು ಕೊಳ್ಳಲಾಗದೇ ಬದುಕಬೇಕಾದರೆ ಶ್ರೀಮಂತ ಆ ಸಾಮಾನುಗಳನ್ನು ಕೊಳ್ಳುವುದರಲ್ಲಿಯೇ ಜೀವನ ವ್ಯಯಿಸಿ ಸುಖ ಕಾಣದೇ ಇರುವ ಸಂದಿಗ್ಧತೆಯನ್ನು ಈ ಮೂಲಕ ಅರಿಯಬಹುದು.

ಬಾಳವ್ವ ಕುಡುಕ ಗಂಡನನ್ನು ಕಟ್ಟಿಕೊಂಡು, ಮಕ್ಕಳ ಪಾಲನೇ ಪೋಷಣೆಯ ಜೊತೆಗೆ ಗಂಡನ ಕೂಗಾಟ, ಬೈದಾಟ, ಹಿಂಸೆ, ಹೊಡೆತಗಳಿಂದ ಜರ್ಜರಿತಳಾದರೂ ಅದನ್ನು ಲೆಕ್ಕಿಸದೇ ಗಂಡನಿಂದಾದ ತಪ್ಪನ್ನು ಮನ್ನಿಸಿ ಗಂಡನ ಮಾನ ಪ್ರಾಣವನ್ನು ಕಾಪಾಡುವ ಸಾಧ್ವಿ ಸದ್ಗುಣಗಳು ಬಾಳವ್ವನಲ್ಲಿ ಕಂಡುಬರುತ್ತವೆ. ಇಂತಹ ದುರಂತ ಬದುಕನ್ನು ಸಾಗಿಸುವ ಬಾಳವ್ವನಂತಹ ಬಡ ಹೆಣ್ಣುಮಕ್ಕಳ ಕುರಿತು ಇಂದಿನ ಸಮಾಜದಲ್ಲಿ ಸಮಾಜ ಸುಧಾರಕ, ದಲಿತೋದ್ಧಾರಕ ಎಂದು ಭಾಷಣ ಬಿಗಿಯುವ ಜನರು ಇಂತಹ ಹೆಣ್ಣು ಮಕ್ಕಳು ಹಾದಿಬೀದಿಯಲ್ಲಿ ಬದುಕುತ್ತಿದ್ದರೂ ಅವರ ಕಡೆ ತಿರುಗಿನೋಡದೇ ತಮ್ಮ ಕೂಪ ಮಂಡೂಕದ ವಿಚಾರಗಳಿಂದ ಸಮಾಜಕ್ಕೇನು ಲಾಭವಾಗದು ಎಂಬ ಸತ್ಯವನ್ನು ತಿಳಿಸಿ, ತಾವು ಸಹ ಈ ವಿಚಾರದಿಂದ ಸೋತಿರುವೆನೆಂದು ಲೇಖಕರು ಸಹ ಆತ್ಮವಿಮರ್ಶೆ ಗೈದಿದ್ದನ್ನು ಈ ಪ್ರಬಂಧದಲ್ಲಿ ಕಾಣಬಹುದು.

ಈ ಪ್ರಬಂಧ ಇಂದಿನ ಭಾರತದ ಬಡಜನತೆಯ ಚಿತ್ರವನ್ನು ಬಾಳವ್ವನ ಪಾತ್ರದ ಮೂಲಕ ನಮ್ಮ ಕಣ್ಣೆದುರಿಗೆ ನಿಲ್ಲಿಸಿ ಕುಟುಂಬ ಯೋಜನೆ, ಗರೀಬಿಹಟಾವೊ, ದಲಿತೋದ್ಧಾರ, ಸಮಾಜಸುಧಾರಣೆ ಎಂಬ ಪೊಳ್ಳು ಘೋಷಣೆಗಳನ್ನು ಕೂಗುವ ಜನರಿಗೆ ಬಾಳವ್ವನಂತಹ ಬಡ ಶೋಷಿತ ಕುಟುಂಬವನ್ನು ಕಣ್ಣೆತ್ತಿ

ನೋಡುವ ಸಂಸ್ಕಾರವಿಲ್ಲವೆಂದು ಜರಿದು ಬಡವರ ಕುರಿತಾದ ತಮ್ಮ ಸಾತ್ವಿಕ ನಿಲುವನ್ನು ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

**ನಮ್ಮ ಮಾತುಗಾರರು**

ಇಂದಿನ ಯುಗದಲ್ಲಿ ಮಾತೇ ಬಂಡವಾಳ ಮಾಡಿಕೊಂಡು ಜೀವಿಸುವ ಜನರನ್ನು ನೋಡಿದ್ದೇವೆ. ಅಂತಹ ಮಾತುಗಾರರು ಅವಕಾಶಕ್ಕಾಗಿ ಕಾದು ಕುಳಿತಿರುತ್ತಾರೆ. ಯಾರಾದರೂ ಕೇಳುಗರು ಸಿಕ್ಕರೆ ಕಡ್ಡಿಯಿದ್ದ ವಿಷಯವನ್ನು ಗುಡ್ಡವನ್ನಾಗಿ ಮಾಡಿ ವೇಳೆಯ ಪರಿವಿಲ್ಲದೇ ಎದುರಿನವರ ಜೀವ ತಿನ್ನುವ ಇಂತಹ ಮಾತುಗಾರರನ್ನು ಕುರಿತು ಅವರ ವ್ಯಕ್ತಿತ್ವ ಹಾಗೂ ಅವರ ಮಾತುಗಳಿಂದ ಅನುಭವಿಸಿದ ಹಿಂಸೆಗಳನ್ನು ವಿಡಂಬನಾತ್ಮಕವಾಗಿ ಈ ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

ದಿನವೆಲ್ಲಾ ಓಡಿಯಾಡಿ ದಣಿದು ಮನೆಯಲ್ಲಿ ಸುಖ ಭೋಜನ ಮಾಡಿ ನಿದ್ರೆ ಮಾಡುವ ಸಮಯದಲ್ಲಿ ಬಂದು ಬಾಗಿಲು ಬಡಿಯುವ ನೆರೆ ಮನೆಯ ಮೂರ್ತಿಯವರು ತಮ್ಮ ವಚನಾಮೃತಗಳನ್ನು ಹರಿಸುತ್ತಾ ಒಳಗೆ ಪಾದಾರ್ಪಣೆ ಮಾಡುತ್ತಾರೆ. ಇಂದಿನ ಪತ್ರಿಕೆಯನ್ನು ಓದಿದರೇನು? ಎಂಬ ಪ್ರಶ್ನೆಯೊಂದಿಗೆ ಮಾತು ಆರಂಭಿಸುವ ಇವರು ತಾವೇ ಆ ಪತ್ರಿಕೆಗಳಲ್ಲಿನ ವಿಷಯವನ್ನು ಹೇಳುತ್ತಾ "ಸರಕಾರದ ಬಗ್ಗೆ ನಿಮ್ಮ ಅಭಿಪ್ರಾಯ ಹೇಳಿರಿ" ಎಂದು ಕೇಳಿ, ಅದಕ್ಕೂ ತಾವು ಸರ್ಕಾರಿ ನೌಕರರಾದ ನಮಗೆ ಅಭಿಪ್ರಾಯವಿಲ್ಲ ಎಂದಿದ್ದಕ್ಕೆ ಸುಶಿಕ್ಷಿತ ನೌಕರಶಾಹಿವರ್ಗವನ್ನು ಟೀಕಿಸುವ ಮೂರ್ತಿಯವರನ್ನು ಪ್ರಚಂಡ ಮುಗ್ಧ ಮಾತುಗಾರರೆಂದು ಕರೆದು, ಇವರಿಗೆ ನೀವು ಕೊಡುವ ಪ್ರತ್ಯುತ್ತರದ ನೂರು ಕೊಂಕು ನುಡಿಗಳಿಗೆ ಜಗ್ಗದೆ ತಮ್ಮ ಪ್ರಚಂಡ ಮಾತಲ್ಲೇ ಬಡಬಡಿಸುತ್ತಾ ಎದುರಿನವರಿಗೆ ಹೇಗೆ ತಾಳ್ಮೆಯ ಹಿಂಸಕರಾಗುತ್ತಾರೆ ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ.

ಮಾತುಗಾರರು ತಮ್ಮ ಪೌರುಷವನ್ನೇ ಸಾರಬೇಕೆಂಬ ಹಂಬಲವುಳ್ಳವರು. ಅದಕ್ಕೆಂದೇ ಅವರು ಒಂದು ಟಾರ್ಚು ಎಷ್ಟು ಎಂದು ಕೇಳಿ ಅದಕ್ಕೆ ಹನ್ನೆರಡು ರೂಪಾಯಿ ಕೊಟ್ಟಿದ್ದು ಎಂದು ಹೇಳಿದಕ್ಕೆ, ಅದಕ್ಕೆ ಪ್ರತಿಯಾಗಿ ತಾನು ಇವತ್ತೇ ಹತ್ತು ರೂಪಾಯಿಗೆ ತಂದಿದ್ದೇನೆ ಎನ್ನುವ ಅವರ ಬಡಾಯಿ ಮಾತುಗಳು ಅವರ ವ್ಯಕ್ತಿತ್ವವನ್ನು ಬಿಂಬಿಸುತ್ತದೆ. ಹಾಗೇ ಊರಿನಿಂದ ಕಾಳುಕಡಿಗಳನ್ನು ಬಸ್ಸಿನಲ್ಲಿ ಲಗೇಜ್ ಕೊಡದೆ ಕಂಡಕ್ಟರಿಗೆ ಹಣ ನೀಡಿ ತಂದಿದ್ದನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ತಮ್ಮನಷ್ಟೇ ಪ್ರೀತಿಸುವ ಗುಣ ಹೊಂದಿರುವ ಇವರು ತಮ್ಮ ರಾಜ್ಯ, ಜಿಲ್ಲೆ, ಪ್ರದೇಶಗಳ ಅಭಿಮಾನ ಪೂರಿತರಾಗಿ ಪುನಃ ಪುನಃ ಹೇಳಿದ್ದನ್ನೆ ನೂರು ಸಾರಿ ಹೇಳಿ ತಮ್ಮ ಪೌರುಷ ಪ್ರದರ್ಶಿಸುತ್ತಾರೆ. ತಮ್ಮ ಕಾರ್ಯ ಸಾಧನೆಯನ್ನೇ ಕಡ್ಡಿಯಿದ್ದರೂ ಗುಡ್ಡದಂತೆ ಮಾಡಿ ಪ್ರದರ್ಶಿಸುವ ಇವರ ಜಾಣ್ಮೆಯನ್ನು ಮೆಚ್ಚುವ ಲೇಖಕರು ರಾತ್ರಿ ಹನ್ನೆರಡಾದರೂ ಮನೆಗೆ ಹೋಗದಿರುವ ಇವರನ್ನು ಎಚ್ಚರಿಸಿದರೆ, "ನಾನು

ಹೊರಬಾಗಿಲಿಗೆ ಕೀಲಿ ಹಾಕಿ ಬಂದಿದ್ದೇನೆ ನಾನು ಯಾವಾಗಲೂ ನಿಶ್ಚಿಂತನೇ''[೮೧] ಎನ್ನುವ ಮಾತುಗಾರರು ತಮ್ಮ ಮಾತಿನ ಸೌಧದಿಂದ ಸಮಯದ ಪರಿವಿಲ್ಲದೇ ಎದುರಿನವರ ಜೀವ ಹಿಂಡುತ್ತಾರೆ. ಕೊನೆಗೆ ಇವರು ಎದ್ದು ಹೋಗುವ ಪ್ರಸಂಗವನ್ನೇ ಲೇಖಕರು "ತಮ್ಮ ಜೀವನದ ಅತ್ಯಂತ ಸುಖದ ಗಳಿಗೆ ಎಂದರೆ ಇಂಥ ಮುಗ್ಧ ಮಾತುಗಾರರು ನಮ್ಮ ಪಾಡಿಗೆ ಬಿಟ್ಟು ಹೋಗುವ ಗಳಿಗೆಯೇ" ಎಂದು ಸಮಯ ಸಾಧಕ ಮಾತುಗಾರರನ್ನು ಹಾಗೂ ಅವರ ನಿರುಪಯೋಗಿ ಮಾತುಗಳಿಂದ ಎಲ್ಲರಿಂದ ತಿರಸ್ಕೃತರಾಗಿ ಅಪಸ್ವರ ಗಾಯಕರಂತೆ ಕಂಡುಬರುತ್ತಾರೆ ಎಂದು ಅವರನ್ನು ಸೂಚ್ಯವಾಗಿ ವಿಡಂಬಿಸಿದ್ದಾರೆ.

ಮಾತುಗಾರರು ತಮ್ಮದೇ ಆದ ವಲಯದಲ್ಲಿಯೇ ಸ್ವಾತಂತ್ರ್ಯ ಸಾಧಿಸಿ ತಮ್ಮ ಹರಟೆ ಮಾತುಗಳಿಂದಲೇ ಪ್ರಭಾವಲಯ ವಿಸ್ತರಿಸುವ ಇವರ ಮಾತುಗಳನ್ನು ಪರಸ್ಪರ ವಿಶ್ವಾಸದಿಂದ ತಾವು ಸಹಿಸಿಕೊಂಡಿದ್ದನ್ನು ಹೇಳುತ್ತಾರೆ. ಹಾಗೇ ತಾಳ್ಮೆ ಮೀರಿ ವರ್ತಿಸುವ ಕೆಲವು ಜನರ ವರ್ತನೆಗಳನ್ನು ರೈಲಿನ ಕಂಪಾರ್ಟ್‌ಮೆಂಟ್ ಒಂದರಲ್ಲಿ ವೇಷಧಾರಿಯೊಬ್ಬ ಬಂದು ಇಲ್ಲಸಲ್ಲದ ಪ್ರಶ್ನೆ ಕೇಳಿ ಲೇಖಕರಿಗೆ ತಲೆ ನೋವು ಬರಿಸಿ ಕೊನೆಗೆ ತಾನು ಅನಸಿನ್ ಏಜೆಂಟ್‌ನೆಂದು ಹೇಳಿ ಗುಳಿಗೆ ನೀಡಿದ್ದು, ಜನತೆಯ ವ್ಯವಹಾರಿಕ ಮಾದರಿ ಮಾತಿನ ಮೂಲಕ ಅಭಿವ್ಯಕ್ತಿಸಿ ಕೊಳ್ಳುಬಾಕ ವ್ಯಕ್ತಿತ್ವವನ್ನು ಪ್ರದರ್ಶಿಸುತ್ತಾರೆ. ಇಂತಹ ಮಾತುಗಾರರು ತಮ್ಮ ಜಾಣ್ಮೆ ಪ್ರದರ್ಶಿಸುವಲ್ಲಿ ಅದನ್ನು ಕಂಡು ಉದಾಸೀನರಾಗಿರಬೇಕೆಂಬ ಸೂಕ್ತ ಸಲಹೆಯನ್ನು ನೀಡಿದ್ದಾರೆ.

### ಶ್ಯಾಣಪ್ಪನ ಶ್ಯಾಣ್ಯತನ

ಪ್ರಪಂಚದಲ್ಲಿ ಇಂದು ನಾವು ನಾನಾ ತರಹದ ವ್ಯಕ್ತಿಗಳನ್ನು ಕಾಣುತ್ತೇವೆ. ಅವರ ವಿಚಾರಗಳು, ಆಲೋಚನೆಗಳು, ಹವ್ಯಾಸಗಳಿಂದ ಅವರಲ್ಲಿ ಭಿನ್ನತೆಯನ್ನು ಗುರುತಿಸುತ್ತೇವೆ. ಕೆಲವರು ತಮ್ಮ ವಿಶಿಷ್ಟ ಗುಣಲಕ್ಷಣಗಳಿಂದ ಆಕರ್ಷಿಸಬಹುದು. ಕೆಲವರು ತಮ್ಮ ಗುಣಗಳಿಂದ ತಿರಸ್ಕಾರಕ್ಕೂ ಒಳಗಾಗಬಹುದು. ಇಂತಹ ಒಬ್ಬ ವ್ಯಕ್ತಿಯ ಸ್ವಭಾವವನ್ನು ಇತರರೊಂದಿಗೆ ತೂಗಿ ನೋಡಿ ಅವರ ವ್ಯಕ್ತಿತ್ವವನ್ನು ಬಿಂಬಿಸುವ ಕಾರ್ಯ ವೀರೇಂದ್ರ ಸಿಂಪಿಯವರು ಈ ಪ್ರಬಂಧದಲ್ಲಿ ಮಾಡಿದ್ದಾರೆ. ಇಲ್ಲಿ 'ಶ್ಯಾಣಪ್ಪ' ಎಂಬ ವ್ಯಕ್ತಿಯ ವ್ಯಕ್ತಿತ್ವವನ್ನು ಹಾಸ್ಯ, ವಿಡಂಬನೆ ಮೂಲಕ ಈ ಪ್ರಬಂಧದಲ್ಲಿ ವ್ಯಕ್ತಪಡಿಸಲಾಗಿದೆ.

ಶ್ಯಾಣಪ್ಪ ಅವರ ತಂದೆ ತಾಯಿಗಳಿಗೆ ಏಕಮೇವ ಪುತ್ರನಾಗಿ ಜನಿಸಿದ್ದಾನೆ. ಅದಕ್ಕೆಂತಲೇ ಈತನನ್ನು ಅತೀ ಪ್ರೀತಿಯಿಂದ ಬೆಳೆಸಿದ ಕಾರಣಕ್ಕಾಗಿ ಮೊದ್ದು ಮೊದ್ದಾಗಿ ಬೆಳೆದಿದ್ದಾನೆ. ಈತನು ಎಷ್ಟು ಮೊದ್ದನಿದ್ದ ಎಂಬುದಕ್ಕೆ ಚಿಕ್ಕಂದಿನಲ್ಲಿ ತನ್ನ ತಾಯಿಯ ಮೊಲೆ ಹಾಲು ಕುಡಿಯುತ್ತಿರುವಾಗ ಯಾರಾದರೂ "ಓ ಶ್ಯಾಣೂ ನಿಮ್ಮ ತಾಯಿ ನಿನ್ನನ್ನು ಬಿಟ್ಟು ಊರಿಗೆ ಹೋದಳಲ್ಲೋ" ಎಂದು ಹೇಳಿದರೆ ಇವನು ಮೊಲೆ ಕುಡಿಯುವುದನ್ನು ಬಿಟ್ಟು ಅಳುತ್ತಾ ಕುಳಿತಿದ್ದರಲ್ಲಿ ಅವನ ಮೊದ್ದತನದ ಅರಿವಾಗುತ್ತದೆ. ಅದಕ್ಕೆ ಈತನಿಗೆ

'ಶ್ಯಾಣಪ್ಪ' ಎಂದು ತದ್ವಿರುದ್ಧ ಹೆಸರು ಇಟ್ಟಿರಬೇಕೆಂದು ತಿಳಿಯುತ್ತದೆ. ಇಂತಹ ಮೊದ್ದನಾದ ಶ್ಯಾಣಪ್ಪನನ್ನು ಯಾರಾದರೂ ಭೋಳೆಶಂಕರ ಎಂದು ಕರೆದರೆ ಅವರ ವಿರುದ್ಧ ಸಮರ ಸಾರುವ ವೀರನಾಗುತ್ತಾನೆ. ಇಂತಹ ವೀರ ಚಿಕ್ಕಂದಿನಲ್ಲಿ ಇತನ ಅವತಾರಿ ಪುರುಷತ್ವವನ್ನು ಹೇಳುತ್ತಾ, ಕುಡಿಯಲು ಹಾಲು ಕೊಟ್ಟರೆ ಹೊಟ್ಟೆ ಬಿರಿಯುವಂತೆ ಕುಡಿದು ಉಳಿದಿದ್ದನ್ನು ನೆಲಕ್ಕೆ ಚೆಲ್ಲುವ ಇವನು ಅನ್ನವನ್ನು ಕೊಟ್ಟರೆ ಬೇಗ ಬೇಗ ತಿಂದು ನೆಲಕ್ಕೆ ಚೆಲ್ಲಿ ಮತ್ತೇ ಹಾಲಿಗಾಗಿ ಅಳುತ್ತಿದ್ದನು. ಹಾಲು ಕೊಟ್ಟರೆ ಅದನ್ನು ಬಾಯಲ್ಲಿ ಹಾಕಿಕೊಂಡು ಮುಕ್ಕಳಿಸಿ ಉಗುಳುವ ಇವನು ಆ ವಸ್ತುವಿನ ಬಗೆಗೆ ತಾಳುವ ತಾತ್ಸರ ಹಾಗೂ ಅವನ ಸೊಕ್ಕಿನ ಹಠಮಾರಿ ಮನೋಭಾವ ಎಂತಹದ್ದು ಎಂಬ ಅರಿವಾಗುತ್ತದೆ.

ಶಾಲೆಗೆ ಹೋಗುವ ಶ್ಯಾಣಪ್ಪ ದಿನವಿಡೀ ಕ್ಲಾಸಿನಲ್ಲಿ ನಿದ್ದೆ ಹೊಡೆದು ಮನೆಗೆ ಮರಳುತ್ತಾನೆ. ಶಿಕ್ಷಕರು ಏನಾದರೂ ಎಬ್ಬಿಸಿ ಪ್ರಶ್ನೆ ಕೇಳಿದರೆ ಅದಕ್ಕೆ ವ್ಯತಿರಿಕ್ತ ಉತ್ತರ ನೀಡುವ ಇವನು "ಮಾವಿನ ಗಿಡದಲ್ಲಿ ಯಾವ ಹಣ್ಣುಗಳಾಗುತ್ತವೆ? ಎಂದು ಕೇಳಿದರೆ 'ಬೇಶನ್ ಉಂಡಿಗಳಾಗುತ್ತವೆ' ಎಂದು ಹೇಳುವಲ್ಲಿ ಇವನ ತಿಂಡಿಪೋತ ಮನೋಭಾವ ವ್ಯಕ್ತವಾಗುತ್ತದೆ. ದಿನಂಪ್ರತಿ ಶಾಲೆಗೆ ಹೋಗುವ ಈತನು ಮನೆಗೆ ಬರುವಾಗ ಪಾಟಿ, ಪುಸ್ತಕಗಳನ್ನು ಅಲ್ಲಿಯೇ ಬಿಟ್ಟು ಬರುತ್ತಾನೆ. ಶಿಕ್ಷಣದ ಬಗ್ಗೆ ಈತನು ಹೊಂದಿರುವ ತಾತ್ಸರದಿಂದಲೇ ಈತನಿಗೆ ವಿದ್ಯೆ ಒಲಿಯದೇ ಪ್ರಾಥಮಿಕ ಶಿಕ್ಷಣವನ್ನು ೧೨ ವರ್ಷದಲ್ಲಿ ಮದುವೆ ವಯಸ್ಸಿಗೆ ಬಂದ ಶ್ಯಾಣಪ್ಪನಿಗೆ ಕನ್ಯೆ ನೋಡಲು ಪರ ಊರಿಗೆ ಕರೆದುಕೊಂಡು ಹೋದ ತಂದೆ, ಕನ್ಯೆಯನ್ನು ದಿಟ್ಟಿಸಿ ನೋಡಬೇಡ ಎಂದಿದ್ದಕ್ಕೆ ಕನ್ಯೆ ಬಿಟ್ಟು ಅವರ ತಾಯಿಯನ್ನು ಗೋರಿಲ್ಲನಂತೆ ನೋಡಿದನು. ಇದರಿಂದ ಇವನ ಮಂಗತನದ ಅರಿವಾಗಿ ಕನ್ಯೆ ನಿರಾಕರಿಸಿದ ಮೇಲೆ ಮುಂದಿನ ಊರಲ್ಲಿ ಸಹ ತನ್ನ ಮೊದ್ದತನದ ಪ್ರಶ್ನೆ ಕೇಳಿ ಕನ್ಯೆಯಿಂದ ನಿರುತ್ತರ ನಿರೀಕ್ಷಿಸಿ ಅವಳನ್ನೆ ಮದುವೆ ಮಾಡಿಕೊಂಡ ಈತನು ತನ್ನ ಹೆಂಡತಿಯ ಅತ್ತೆಮಾವಂದಿರ ಸೇವೆ ಮಾಡುವುದನ್ನು ಬಿಟ್ಟು, ತನ್ನ ಅತ್ತೆ ಮಾವಂದಿರ ಸೇವೆ ಮಾಡುವ ಮೂರ್ಖ ಅಳಿಯನಾಗಿ ಕಂಡುಬರುತ್ತಾನೆ.

ಇನ್ನು ಈತನ ವ್ಯವಹಾರಿಕ ಬುದ್ಧಿವಂತಿಕೆ ಎಂತಹದ್ದು ಎಂದು ಒಮ್ಮೆ ಕಾಯಿಪಲ್ಲೆ ಮಾರುಕಟ್ಟೆಗೆ ಹೋಗಿ ಅಲ್ಲಿ ಸವತೇಕಾಯಿ ಹೇಗೆ ಕೊಡುತ್ತಿ ಎಂದು ಕೇಳಿದಾಗ, ವ್ಯಾಪಾರಿ ಎಂಟಾಣೆಗೆ ಎರಡು ಎಂದು ಹೇಳಿದ್ದಕ್ಕೆ, ಇತನು ಮೂವತ್ತೈದು ಪೈಸೆಗೆ ಒಂದು ಕೊಡುತ್ತೀಯಾ ಎಂದು ಕೇಳಿ ಎರಡಕ್ಕೆ ೭೦ ಪೈಸೆ ಹಣ ನೀಡಿ ತನ್ನ ವ್ಯವಹಾರಿಕ ಬುದ್ಧಿಯನ್ನು ಪ್ರದರ್ಶಿಸಿದ್ದು ಹಾಸ್ಯವನ್ನುಂಟು ಮಾಡುತ್ತದೆ. ಹಾಗೇನೇ ಈತನ ಬುದ್ಧಿವಂತಿಕೆಗೆ ಮತ್ತೊಂದು ಉದಾಹರಣೆ ಎಂದರೆ, ತಾನು ಗ್ರಾಜ್ಯುಯೆಟ್ ನೆಂದು ಊರಲ್ಲಿ ಕೇಳಿಕೊಂಡು ತಿರುಗುವ ಈತನಿಗೆ ಯಾರಾದರೂ ಪತ್ರ ತಂದು ಕೊಟ್ಟರೆ ಅದನ್ನು ಓದಲಾಗದೇ ಪೇಚಾಡಿ ಕೊನೆಗೆ ಓದಲು ಸಮಯವಿಲ್ಲ ಎಂದು ಹೇಳುವ ಈತನು ಪಟ್ಟಣಕ್ಕೆ ಹೋದಾಗ ಮಾತ್ರ ಇಂಗ್ಲೀಷ್

ಪೇಪರ್ ವೊಂದನ್ನು ತಂದು ಎಂಟುದಿನಗಳವರೆಗೆ ಮುಖಕ್ಕೆ ಹಿಡಿದುಕೊಂಡು ಓದುವ ಇವನ ಅನಕ್ಷರಿ ಆಡಂಬರದ ಹುಂಬಗಾರಿಕೆ ಎಂತಹದು ಎಂದು ತೋರಿಸುತ್ತದೆ.

ಈ ರೀತಿಯಾಗಿ ಬೆಳೆದು ಬಂದ ಶ್ಯಾಣಪ್ಪ ಇಂದು ಶ್ರೀಮಂತಿಕೆಯಿಂದ ಶ್ಯಾಣಪ್ಪನವರಾಗಿ ಹಾದಿ ಬೀದಿಗಳಲ್ಲಿ ಕಾಮಣ್ಣನಂತೆ ತಿರುಗುವ, ದರ್ಪ ದರ್ಬಾರುಗಳಿಂದ ಸಭೆ ಸಮಾರಂಭಗಳಲ್ಲಿ ಬರೆದುಕೊಟ್ಟ ಭಾಷಣ ಓದುವ ಇತನು ಕೈಗೊಂದು ಕಾಲಿಗೊಂದು ಆಳು ಇಟ್ಟುಕೊಂಡು ಆಡಂಬರದ ವೇಷಧಾರಿಯಾಗಿ ಭಾರತದ ನಿರ್ಮಾಪಕನಂತೆ ಕಂಗೊಳಿಸುತ್ತಾನೆ. ಈತನಿಗೆ ಜನ ಕೈಮುಗಿಯುತ್ತಾರೆ. ಲಕ್ಷ್ಮಿಪುತ್ರನಾದ ಈತನಿಗೆ ಒಂದಕ್ಷರ ಬರದಿದ್ದರೂ ದುಡ್ಡಿನ ದರ್ಬಾರದಿಂದ ಸರಸ್ವತಿ ಪುತ್ರರ ಅಭಿಮಾನ ಗಳಿಸಿ ಅವರಿಂದ ತನ್ನ ಜೀವನ ಚರಿತ್ರೆ ಬರೆಸಿಕೊಳ್ಳುವ ಪಂಬಲಿಕೆಯಲ್ಲಿದ್ದಾನೆ. ಇಂತಹ ಆಡಂಬರ ಪ್ರಿಯ ಶ್ಯಾಣಪ್ಪನಂತಹ ವ್ಯಕ್ತಿಗಳು ನಮ್ಮ ಮಧ್ಯೆ ದಿನನಿತ್ಯ ಕಂಡುಬರುತ್ತಾರೆ. ಇಂತಹ ವ್ಯಕ್ತಿಗಳ ಕುರಿತಾದ ವಿಡಂಬನೆಯನ್ನು ಶ್ಯಾಣಪ್ಪನ ಪಾತ್ರ ಚಿತ್ರಣದ ಮೂಲಕ ಈ ಪ್ರಬಂಧದಲ್ಲಿ ಬೇರ್ಪಡಿಸಿದ್ದಾರೆ.

**ಸಿಂಹಾಸನ ಕೊಟ್ಟರೂ ಪಕ್ಷಾಂತರ ಇಲ್ಲ**

ನಮ್ಮ ಸಮಾಜದಲ್ಲಿನ ಜನರ ವ್ಯವಹಾರಿಕ ಮಾದರಿಯನ್ನು ಒಂದು ವಸ್ತುವಿಷಯದ ಮೂಲಕ ಬೇರೆ ಬೇರೆ ದೃಷ್ಟಿಕೋನಗಳಿಂದ ವಿವಿಧ ವ್ಯಕ್ತಿಗಳ ವ್ಯಕ್ತಿತ್ವವನ್ನು ಹಾಗೂ ಅದರ ಹಿಂದಿರುವ ಅವರ ಕೊಳ್ಳಬಾಕ ಉದ್ದೇಶವನ್ನು ತಿಳಿಸುವ ಈ ಪ್ರಬಂಧದಲ್ಲಿ ಶಿಕ್ಷಕ, ವಕೀಲ, ವೈದ್ಯ, ರಾಜಕಾರಣಿ ಎಂಬ ನಮ್ಮ ಸಮಾಜದ ಆಧಾರ ಸ್ತಂಭಗಳಾದ ಇವರಿಂದ ಆಗುವ ಶೋಷಣೆಯನ್ನು ಕಲಾತ್ಮಕ ಸುಳ್ಳಿನ ಕಥನದ ಮೂಲಕ ಯಾರು ಹೆಚ್ಚು ಸುಳ್ಳು ಹೇಳುತ್ತಾರೋ ಅವರಿಗೆ ಬಹುಮಾನವೆಂದು ಸಾರಿ, ಅವರ ನಡವಳಿಕೆಗಳನ್ನು ವಿಡಂಬನಾತ್ಮಕವಾಗಿ ವ್ಯಕ್ತಪಡಿಸಿ ಸಮಕಾಲೀನ ಸಮಾಜದಲ್ಲಿನ ಜನರ ವ್ಯವಹಾರಿಕ ಮಾದರಿಯನ್ನು ಬಯಲಿಗೆಳೆದಿದ್ದಾರೆ.

ಶಿಕ್ಷಕ ಅಜ್ಞಾನದ ಅಂಧಕಾರ ಓಡಿಸಿ ಜ್ಞಾನದ ಬೆಳಕನ್ನು ಮೂಡಿಸುವ ಶಿಲ್ಪಿ. ಇಂತಹ ಶಿಕ್ಷಕನ ಪಾತ್ರವನ್ನು ನಿಭಾಯಿಸುವ ಲೇಖಕರು ತಾವು ಇಂಗ್ಲೀಷ್ ಪಿರಿಯಡ್‌ಗೆ ಅಟೆಂಡೆನ್ಸ್ ತೆಗೆದುಕೊಂಡು ಹೋಗಿ, ಹಾಜರಿ ಹಾಕಿ ಇವರ ಈ ತರಗತಿಗೆ ಅಧಿಕ ಸಂಖ್ಯೆಯ ವಿದ್ಯಾರ್ಥಿಗಳು ಆಗಮಿಸಿ ಶಾಂತ ರೀತಿಯಿಂದ ಆಸಕ್ತಿಯಿಂದ ತರಗತಿ ಕೇಳಿ ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆದಿದ್ದು, ತಮಗೆ 'ಎನ್.ಟಿ.ಆರ್.ಗೆ ಆದ ಸಂತೋಷದಷ್ಟೇ ಆನಂದಪಟ್ಟೇ ಎನ್ನುವಲ್ಲಿ ಇಂದಿನ ಶಿಕ್ಷಕ ತನ್ನ ನೀರಸ ನಿಸತ್ವ ಪಾಠ ಪ್ರವಚನಗಳಿಂದ ಇಂದಿನ ಶಿಕ್ಷಣದ ಗುಣಮಟ್ಟ ಕುಸಿದು ವಿದ್ಯಾರ್ಥಿಗಳು ತರಗತಿಗೆ ಹಾಜರಾಗದೇ ಪಾರ್ಕು ಸಿನಿಮಾ ಎಂದು ತಿರುಗುವ ಈ ಕಾಲದಲ್ಲಿನ ಶಿಕ್ಷಣ ವ್ಯವಸ್ಥೆಯನ್ನು ಹಾಗೂ ಶಿಕ್ಷಕನನ್ನು ವಿಡಂಬಿಸುವಲ್ಲಿ ಯಶಸ್ವಿಯಾಗಿದೆ.

ಕರಿ ಕೋಟಿನ ವಕೀಲನೊಬ್ಬನ ಪಾತ್ರವನ್ನು ನಿಭಾಯಿಸುವ ಗೆಳೆಯನೊಬ್ಬ ತನ್ನ ಸುಳ್ಳಿನ ಕಥಾನಕ ಹೇಳುತ್ತಾ ತಾನು ಹಿರಿಯ ನ್ಯಾಯವಾದಿಗಳ ಸಹಾಯಕನಾಗಿದ್ದು, ಹಳ್ಳಿಯ ಯಜಮಾನನೊಬ್ಬ ನಮ್ಮತ್ತ ಬಂದಾಗ ಅವರನ್ನು ಕರೆದು ಕುಳ್ಳಿರಿಸಿ, ಅವರ ಅಣ್ಣತಮ್ಮಂದಿರ ಜಗಳವನ್ನು ನೀತಿ ಪಾಠದಿಂದ ಬಗೆಹರಿಸಿ ಬುದ್ಧಿವಾದ ಹೇಳಿ ಕಳಿಸಿದ್ದನ್ನು ಹೇಳುತ್ತಾನೆ. ಇಲ್ಲಿ ವಕೀಲನ ತದ್ವಿರುದ್ಧದ ವ್ಯಕ್ತಿತ್ವವನ್ನು ಹೇಳುತ್ತಾ ಇಂದು ಸಮಾಜದ ಜನರ ಹಣ ಸುಲಿಯುವ ಕಾಯಕ ಮಾಡಿಕೊಂಡ ವಕೀಲನು ಸುಳ್ಳನ್ನು ನಿಜಮಾಡಿ, ನಿಜವನ್ನು ಸುಳ್ಳು ಮಾಡುವ ತನ್ನ ಚಾಣಾಕ್ಷ ಬುದ್ಧಿಯಿಂದ ಕಡ್ಡಿಯಿದ್ದ ವಿಷಯವನ್ನು ಗುಡ್ಡ ಮಾಡಿ ಜನರ ಸುಲಿಗೆ ಮಾಡುವ ಇಂತಹ ಕೊಳ್ಳುಬಾಕ ವಕೀಲರ ಕುರಿತಾದ ವಿಡಂಬನೆ ವ್ಯಕ್ತವಾಗುತ್ತದೆ.

ಡಾಕ್ಟರರೊಬ್ಬನ ಪಾತ್ರವನ್ನು ನಿಭಾಯಿಸುವ ಸ್ನೇಹಿತನೊಬ್ಬ ತನ್ನ ಸುಳ್ಳಿನ ಕಥನ ಹೇಳುತ್ತಾ, ಒಮ್ಮೆ ರವಿವಾರ ಸಹೋದ್ಯೋಗಿಗಳ ಮನೆಯಲ್ಲಿ ಹರಕು ಚಿಂದಿಯುಟ್ಟ ಮುದುಕಿಯೊಬ್ಬಳು ಗಾಯಗೊಂಡ ತನ್ನ ಎಂಟು ವರ್ಷದ ಮೊಮ್ಮಗನನ್ನು ಕರೆದುಕೊಂಡು ಬಂದಿದ್ದನ್ನು ಕಂಡ ಇವರು ಪ್ರೀತಿಯಿಂದ ಅವನಿಗೆ ಚಿಕಿತ್ಸೆ ನೀಡಿ ಸಾಕಷ್ಟು ಔಷಧಿ ಕೊಟ್ಟು ಹೋಗುವಾಗ ಅವರ ಕೈಗೆ ಒಂದಿಷ್ಟು ಹಣ ನೀಡಿ ಹಣ್ಣು ಹಂಪಲು ಕೊಳ್ಳಲಿಕ್ಕೆ ಹೇಳಿ ಕಳುಹಿಸಿದನು ಎಂಬ ಕಥಾನಕದಲ್ಲಿ ತದ್ವಿರುದ್ಧದ ಮನೋಭಾವ ವ್ಯಕ್ತವಾಗಿದೆ. ಇಂದು ಡಾಕ್ಟರರು ಸೇವೆಗಿಂತ ಸಂಪಾದನೆಯೇ ಮುಖ್ಯವೆಂದು ಭಾವಿಸಿದ್ದಾರೆ. ಇಂತಹ ಡಾಕ್ಟರರು ರೋಗಿಗಳ ಯೋಗಕ್ಷೇಮವನ್ನು ಬಿಟ್ಟು ಹಣ ಸಂಪಾದನೆಯನ್ನು ಗುರಿಯಾಗಿರಿಸಿಕೊಂಡು ಬಹುಮಹಡಿ ಕಟ್ಟಡಗಳ ಮೂಲಕ ರೋಗಿ ಜನರ ರಕ್ತ ಹೀರುವ ಇವರು ಬಡವರನ್ನು ನೋಡುವ ದೃಷ್ಟಿಕೋನ ಎಂತಹದ್ದು ಎಂಬ ಸೂಚ್ಯ ವಿಡಂಬನೆ ವ್ಯಕ್ತವಾಗಿದೆ.

ಸಾಹಿತಿಯೊಬ್ಬರ ಪಾತ್ರವನ್ನು ನಿಭಾಯಿಸಿದ ಸ್ನೇಹಿತನೊಬ್ಬ ತಾನು ಸುಳ್ಳಿನ ಕತೆಯನ್ನು ಹೇಳುತ್ತಾ, ತಾನು ಬರೆದ ಕವನ ಸಂಕಲನಕ್ಕೆ ಮುನ್ನುಡಿ ಬರೆಸಲು ಬೆಂಗಳೂರಿನ ಹಿರಿಯ ಕವಿಯ ಹತ್ತಿರ ಹೋದಾಗ, ಅವರು ಎಲ್ಲಾ ಕವನಗಳನ್ನು ಓದಿ ಮೆಚ್ಚಿಕೊಂಡು, ಇವರನ್ನು ಅಪ್ಪಿಕೊಂಡು ಎಂತಹ ಕವನಗಳನ್ನು ಹೊರತಂದಿದ್ದೀಯಾ ಎಂದು ಇವರ ಕವನಗಳ ಪ್ರತಿಮೆ, ವಾಕ್ಯ, ಮಾದರಿಗಳನ್ನು ಮೆಚ್ಚಿಕೊಂಡು ಮುಂದೆ ಇದೇ ರೀತಿ ಬರೆಯಲು ಸ್ಫೂರ್ತಿ ನೀಡಿದ್ದನ್ನು ಹೇಳುತ್ತಾನೆ. ಇಲ್ಲಿ ಕವಿಗಳೆನಿಸಿಕೊಳ್ಳಬೇಕೆಂಬ ಹುಂಬ ಜನರು ಕೆಲವು ಕದ್ದ ಸಾಲುಗಳಿಂದ ಕವಿತೆಯೊಂದನ್ನು ರಚಿಸಿ ಅದರಿಂದ ತಾನೊಬ್ಬ ಕವಿ ಎಂದು ಬೀಗುವ ಆಡಂಬರದ ನಾಮಪ್ರಿಯ ಕವಿಗಳ(ಕಪಿ) ಕುರಿತಾದ ವಿಡಂಬನೆಯನ್ನು ವ್ಯಕ್ತಪಡಿಸಿದ್ದಾರೆ.

ದೇಶಸೇವಕ ಸಮಾಜ ಸುಧಾರಕನೆಂದು ಹೆಸರಾದ ಎಂ.ಎಲ್.ಎ. ಪಾತ್ರವನ್ನು ನಿರ್ವಹಿಸುವ ವ್ಯಕ್ತಿಯೂ ತನ್ನ ಸುಳ್ಳಿನ ಕಥನವನ್ನು ಹೇಳುತ್ತಾ ತಾನು ಈ ದೇಶಕ್ಕಾಗಿಯೇ ಮುಡುಪಾಗಿದ್ದು, ತನ್ನ ಪ್ರಾಣ ಉಸಿರುಗಳೆಲ್ಲಾ ದೇಶಕ್ಕಾಗಿಯೇ ಮಿಸಲೆಂದು ಹೇಳಿ, ಬೆಂಗಳೂರಿನಲ್ಲಿರದೇ ಮತಕ್ಷೇತ್ರದ ಹಳ್ಳಿಗಳಲ್ಲಿ ಸಂಚರಿಸಿ ಅಲ್ಲಿನ ಕೊರತೆಗಳನ್ನು ನಿವಾರಿಸಿದ್ದನ್ನು ಹೇಳುತ್ತಾನೆ. ಹಾಗೇನೇ ವಿರೋಧ

ಪಕ್ಷದವರು ಪಕ್ಷಾಂತರಕ್ಕೆ ಹಣದ ಆಮೀಷ ಒಡ್ಡಿ ಆಹ್ವಾನಿಸಿದರೂ ಅದಕ್ಕೆ ಒಪ್ಪದೇ ನಿಷ್ಠಾವಂತನಾಗಿ ಜನಸೇವಕನಾಗಿರುವುದನ್ನು ಹೇಳುವಲ್ಲಿ, ತದ್ವಿರುದ್ಧದ ವಿಡಂಬನೆ ವ್ಯಕ್ತಪಡಿಸುತ್ತಾರೆ. ರಾಜಕಾರಣಿ ಜನರಿಂದ ಮತ ಪಡೆದು, ಅಧಿಕಾರ ಸಿಕ್ಕ ನಂತರ ಬೆಂಗಳೂರಿನಲ್ಲಿ ಟಿಕಾಣಿ ಊಡುವ ಇವರು ತಮ್ಮ ಪ್ರಜೆಗಳ ಅಹವಾಲನ್ನು ಕೇಳುವವರಿಲ್ಲದೇ, ಆಸೆ, ಆಮೀಷಗಳಿಗೆ ಬಲಿಯಾಗಿ ಮತಾಂತರ ಹೊಂದಿ ಸ್ವಲಾಭಿವೃದ್ಧಿ ಬಯಸುವ ಇವರ ಟೊಳ್ಳು ವ್ಯಕ್ತಿತ್ವವನ್ನು ಹಾಗೂ ಇದೇ ಕಾರ್ಯವನ್ನು ಕರಗತ ಮಾಡಿಕೊಂಡು ಬದುಕುವ ರಾಜಕಾರಣಿಗಳನ್ನು ಸುಳ್ಳಿನ ಸರದಾರರೆಂದು ಸಾಬೀತು ಮಾಡಿ ಬಹುಮಾನ ನೀಡಿದ್ದು ಅವರ ಸುಳ್ಳಿನ ಹಾಗೂ ವಚನಭ್ರಷ್ಟ ವ್ಯಕ್ತಿತ್ವವನ್ನು ವಿಡಂಬನಾತ್ಮಕವಾಗಿ ವ್ಯಕ್ತಪಡಿಸಿದ್ದನ್ನು ಗುರುತಿಸಬಹುದಾಗಿದೆ.

### ಗೃಹಾನ್ವೇಷಣೆ

ಇಂದಿನ ಆಧುನಿಕ ಕಾಲದಲ್ಲಿ ದಿನದಿಂದ ದಿನಕ್ಕೆ ಬೆಳೆಯುತ್ತಿರುವ ಜನಸಂಖ್ಯೆಯಿಂದಾಗಿ ಮಾನವ ಯಾಂತ್ರಿಕ ಜೀವನದೊಂದಿಗೆ ಬದುಕಬೇಕಾದ ಸಂದರ್ಭ ಬಂದಿದೆ. ಇಂತಹ ಯಾಂತ್ರಿಕ ದುಬಾರಿ ಜೀವನದ ಜಂಜಾಟದಲ್ಲಿ ಬಳಲುವ ಸಾಮಾನ್ಯ ಜನ ಪಟ್ಟಣದಂತಹ ಪ್ರದೇಶಗಳಲ್ಲಿ ಬಾಡಿಗೆ ಮನೆಗಳು ಹಾಗೂ ಅಲ್ಲಿನ ಸೌಕರ್ಯಗಳ ಬಗ್ಗೆ ಹೇಳುವ ಈ ಪ್ರಬಂಧದಲ್ಲಿ ಲೇಖಕರು ತಾವು ಬಾಡಿಗೆ ಮನೆಯನ್ನು ಹುಡುಕುವಲ್ಲಿ ಅನುಭವಿಸಿದ ಕಷ್ಟ ಸುಖಗಳನ್ನು ಅಲ್ಲಿನ ಪರಿಸರದ ವಿಡಂಬನೆಯೊಂದಿಗೆ ವ್ಯಕ್ತಪಡಿಸಿದ್ದಾರೆ. "ಇಂದು ಪುಣ್ಯ ಇದ್ದರೆ ನೌಕರಿ ಪಡೆಯಬಹುದು, ದೊಡ್ಡ ಡಿಗ್ರಿ ಇದ್ದರೆ ಕನ್ನೆಯನ್ನು, ವರದಕ್ಷಿಣೆಯನ್ನು ಪಡೆಯಬಹುದು, ಸ್ವರ್ಗದಲ್ಲಿ ಬೇಕಾದರೆ ಒಂದು ಸೈಟ್‌ನ್ನು ರಿಜರ್ವ್ ಮಾಡಬಹುದು. ಆದರೆ, ಭೂಮಿಯ ಮೇಲೆ ಒಂದು ಮನೆ ದೊರಕಿಸುವುದು ಕಠಿಣ"[೮೮]ಎಂದು ಹೇಳುವ ಲೇಖಕರು ಇಂದಿನ ಬಾಡಿಗೆ ಮನೆಯ ಅಲಭ್ಯತೆಯ ಕುರಿತಾದ ತಮ್ಮ ಅನುಭವವನ್ನು ಈ ರೀತಿ ವ್ಯಕ್ತಪಡಿಸಿದ್ದು ವಿಶೇಷವೆನಿಸಿದೆ.

ಕೆಲಸ ಸಿಕ್ಕು ಮದುವೆಯಾದ ಲೇಖಕರು ಹೊಸತರಲ್ಲಿ ದಿನವಿಡೀ ಪರಿಚಿತರ ಮೂಲಕ ಬಾಡಿಗೆ ಮನೆ ಹುಡುಕುವ ಕಾರ್ಯದಿಂದ ಸೋಲುತ್ತಾರೆ. ಕೊನೆಗೆ ತಾವೇ ತಮ್ಮ ಪ್ರಾಧ್ಯಾಪಕ ವೃತ್ತಿ ನಿಭಾಯಿಸಿ ಸಂಜೆ ಗೃಹಾನ್ವೇಷಕರಾಗಿ ಹೊರಡುತ್ತಾರೆ. ಹಲವಾರು ಸಂದಿಗೊಂದಿಗಳನ್ನು ದಾಟಿ, ಗಟಾರ ಮೋರಿಗಳಿಂದ ಸೊಳ್ಳೆ, ತಿಗಣೆಗಳಿಂದ ಪಾರಾಗಿ, ವಿವಿಧ ಜನರಿಂದ ಬೈಯಿಸಿಕೊಂಡು ಅವಮಾನಿತರಾಗಿ ಕೊನೆಗೆ ಸಿಗುವ ಮನೆಗೆ ಮೂಲ ಸೌಕರ್ಯಗಳಿಲ್ಲದೆ, ಗಾಳಿ ಬೆಳಕಿನ ಕೊರತೆಯಿಂದಾಗಿ ಆ ಮನೆಯನ್ನು ತಿರಸ್ಕರಿಸಿ ಮತ್ತೆ ಗೃಹಾನ್ವೇಷಕನಾಗಿ ಹೊರಡುವ ಇವರು ಸಿಕ್ಕಂತಹ ಮನೆಗಳಲ್ಲಿನ ಬಾತ್‌ರೂಮು, ಟಾಯಲೆಟ್ ರೂಮುಗಳ ಕೊರತೆಯಿಂದಾಗಿ ಬೇರೊಂದು ಕಡೆ ಸಾಗುವ ಇವರ ಅನ್ವೇಷಕ ಕಾಯಕ ಇಂದಿನ ಜನ ತಮ್ಮ ನೆಲೆಗಿಂತ ಮೂಲ ಸೌಕರ್ಯಕ್ಕೆ ಹೆಚ್ಚು ಗಮನಕೊಟ್ಟು ತಿರುಗುವ ಜನರ ಮಾದರಿಗೆ ಲೇಖಕರು ಅನ್ವಯಿಸುತ್ತಾರೆ.

ಹೆಂಡತಿಯ ಒತ್ತಾಯದ ಮೇರಗೆ ಸಿಕ್ಕಂತಹ ಅಲ್ಪಸ್ವಲ್ಪದ ಸೌಕರ್ಯಯುತ ಮನೆಗಳಲ್ಲಿ ಸುತ್ತಮುತ್ತಲಿನ ಪರಿಸರವನ್ನು ಕುರಿತು ಹೇಳುತ್ತಾ ಮನೆ ಮಾಲೀಕರ ಕಿರಿಕಿರಿಯ ಜೊತೆಗೆ ಪಕ್ಕದ ಮನೆಯ ಸಾಂಸಾರಿಕ ಸಮರಗಳಿಂದ ಬೈಗಳ ಕಾಟ ತಾಳಲಾರದೇ ಕೊನೆಗೆ ಸಾಲ ಮಾಡಿ ಮನೆಯೊಂದನ್ನು ಕಟ್ಟಿಸುವಲ್ಲಿ ಮನೆಯ ಬಗೆಗಿನ ಅವರ ಆಕಾಂಕ್ಷೆ ಈಡೇರಿದ್ದನ್ನು ಗಮನಿಸಬಹುದು. ಇಲ್ಲಿ ಇಂದಿನ ಆಧುನಿಕ ಯುಗದಲ್ಲಿ ಮಾನವನ ಜೀವನ ಮೌಲ್ಯ ದುಬಾರಿಯಾಗಿ ವಾಸಿಸಲು ಮನೆಗಳಿಲ್ಲದೇ ಹಾದಿ ಬೀದಿಗಳಲ್ಲಿ ಬದುಕುವ ಜನರು ಅನುಭವಿಸುವ ಕಷ್ಟ ನೋವುಗಳನ್ನು ಹೇಳುತ್ತಾ, ಇಂದು ದುಡ್ಡು ಕೊಟ್ಟರೂ ಮನೆ ಸಿಗದಿರುವ ಪರಿಸ್ಥಿತಿ ಇದೆ. ಇಂತಹ ಒಂದು ಕಟುಮಧುರ ಅನುಭವವನ್ನು ಲೇಖಕರು ಬಾಡಿಗೆ ಮನೆಯನ್ನು ಹುಡುಕುವಲ್ಲಿ ಸೋತು, ಕೊನೆಗೆ ತಮ್ಮದೇ ಆದ ಸ್ವಂತ ಮನೆಯನ್ನು ಕಟ್ಟಿಸುವಲ್ಲಿ ಸಫಲತೆಯನ್ನು ಸಾಧಿಸಿದ್ದರಲ್ಲಿ ಅವರ ಗೆಲುವು ವ್ಯಕ್ತವಾಗುತ್ತದೆ.

**ಮನೆಯ ಯಜಮಾನಿ ಹಾಗೂ ರವಿವಾರ ಸೂಟಿ**

ಒಬ್ಬ ಅನನುಭವಿ ವ್ಯಕ್ತಿ ತನ್ನ ಕೆಲಸಗಳಲ್ಲಿ ಹೇಗೆ ಸೋಲುತ್ತಾನೆಂಬುದನ್ನು ಲೇಖಕರು ತಮ್ಮ ಅನುಭವದ ಹಿನ್ನಲೆಯಲ್ಲಿ ಈ ಪ್ರಬಂಧದಲ್ಲಿ ಹೆಂಡತಿ ಇಲ್ಲದ ಎರಡು ದಿನಗಳು ತಾವು ಅನುಭವಿಸಿದ ಕಷ್ಟ ಸುಖಗಳನ್ನು ಲಘು ಹಾಸ್ಯದ ಮೂಲಕ ವ್ಯಕ್ತಪಡಿಸಿ ಜೀವನದ ಸಾರವನ್ನು ಹಾಗೂ ಸ್ವಾರಸ್ಯವನ್ನು ಸಹ ಪ್ರಬಂಧದಲ್ಲಿ ಒಡಮೂಡಿಸಿದ್ದಾರೆ. ಮುಂಜಾನೆಯಿಂದ ಸಂಜೆವರೆಗೂ ದುಡಿಯುವ ಹೆಂಡತಿಯಾದವಳು ಒಂದು ದಿನ ಊರಲ್ಲಿ ಇರಲಿಲ್ಲವೆಂದರೆ ಗಂಡಸು ಪಡುವ ಪಾಡು ಎಂತಹದು ಎಂದು ಈ ಪ್ರಬಂಧದಲ್ಲಿ ಮನೋಜ್ಞವಾಗಿ ಹೇಳಿದ್ದಾರೆ.

ಒಂದು ರವಿವಾರ ವಿಶ್ರಾಂತಿಗೆಂದು ಹೆಂಡತಿಯನ್ನು ಊರಿಗೆ ಕಳುಹಿಸಿ ರಾತ್ರಿ ಹೇಗೋ ಊಟ ಮಾಡಿ ಮಲಗಿ ಮುಂಜಾನೆ ಎದ್ದು ಚಹ ಮಾಡಲು ಸ್ಟೋವ್ ಹೊತ್ತಿಸಿ ಟೀ ಮಾಡಿದಾಗ ಅದು ಸೀಮೆ ಎಣ್ಣೆಯ ಗಮಗಮಕ್ಕೆ ಒಳಗಾಗಿ ಚಹಾ ಕುಡಿಯಲಾಗದೇ ಹಾಗೆ ಕಪ್ಪಿನಲ್ಲಿ ಉಳಿದದ್ದು ಅವರ ಅನನುಭವತೆ ವ್ಯಕ್ತವಾಗುತ್ತದೆ. ಹಾಗೇ ಅನ್ನ ಮಾಡಲು ನೀರಿಗೆ ಅಕ್ಕಿಯನ್ನು ಹಾಕಿ ಕುದುಸಿ ಅದನ್ನು ಅಳತೆಗೆ ತಕ್ಕ ನೀರಿಲ್ಲದೆ ಹೊತ್ತಿ ಕಿಚಡಿಯಾದದ್ದು, ಇದಕ್ಕೆ ಖಾರವಾದ ಸಾರನ್ನು ಸೇರಿಸಿ ಉಣ್ಣಲು ಪ್ರಯತ್ನಿಸಿ ಹಾಗೆ ಬಿಟ್ಟದ್ದು, ಹಾಗೆ ಚಪಾತಿ ಮಾಡಲು ಕಲಸಿದ ಹಿಟ್ಟಿಗೆ ನೀರು ಅಧಿಕವಾಗಿ ಕಣಕನ್ನು ಲಟ್ಟಿಸಿದಾಗ ಅದು ಚಪಾತಿಯಾಗದೇ ಆಸ್ಟ್ರೇಲಿಯಾ ಮ್ಯಾಪಾಗಿ ಕಂಡುಬಂದಿತು. ಸಮಯಕ್ಕೆ ಸರಿಯಾಗಿ ಸ್ಟವ್ ಉತ್ತದೆ ಕೊನೆಗೆ ಹೋಟೇಲುವೊಂದಕ್ಕೆ ಹೋಗಿ ತನ್ನ ಹಾಗೂ ಮಕ್ಕಳ ಹಸಿವನ್ನು ನೀಗಿಸಿಕೊಂಡಿದ್ದು, ಅಲ್ಲಿಯೂ ತೃಪ್ತಿಯೆನಿಸದೇ, ಮಕ್ಕಳ ಹಟದ ನಡುವೆ ಮನೆಗೆ ಬಂದು ಹಾಗೆ ಮಲಗಿದ್ದು, ಇಂತಹ ಪ್ರಸಂಗಗಳಿಂದ ಲೇಖಕರು ತಮ್ಮ ಅನಾನುಭವದಿಂದ ಆದ ಅತಾಚುರ್ಯ ಪ್ರಸಂಗಗಳಿಂದಾಗಿ ತಾವು

ಹೋಟೇಲಿನ ರೆಡಿಮೇಟ್ ಫುಡ್‌ಗೆ ಒಳಗಾಗಿ ತೃಪ್ತಿಕಾಣದೇ ಹೊರಬಂದಿದ್ದನ್ನು ನೆನಪಿಸುತ್ತಾರೆ. ಇದರಿಂದ ಹೆಂಡತಿ ಮನೆಯ ಒಡತಿಯಾಗಿ ತನ್ನ ಕಾರ್ಯ ನಿಮಿತ್ತದಿಂದ ಅವಳು ಹಸಿವನ್ನು, ಮನದ ಹಿಂಗಿತವನ್ನು ಅರಿತು ಸಹಧರ್ಮಿಯಾಗಿ ನಡೆಯುತ್ತಾಳೆ ಎಂಬ ಅಂಶ ಗೊತ್ತಾಗುತ್ತದೆ.

ಮರುದಿನ ಬೆಳಿಗ್ಗೆ ತಮ್ಮನೊಬ್ಬ ಬಂದು ಮನೆಯಲ್ಲಿನ ಅವಸ್ಥೆಯನ್ನು ನೋಡಿ ಹೊಟೇಲುವೊಂದ ರಲ್ಲಿ ತಿಂಡಿ ಚಹಾ ಸೇವಿಸಿ ಬಂದಿದ್ದು, ಮಧ್ಯಾಹ್ನ ಸಹ ಖಾನಾವಳಿಯನ್ನು ಆಶ್ರಯಿಸಿ ಅಲ್ಲಿನ ಸಾರು ಪಲ್ಯ ಮಗನಿಗೆ ಹಿಡಿಸದೇ ಉಪವಾಸ ಕುಳಿತಿದ್ದುದ್ದನ್ನು ಸಮಾಧಾನಿಸಿ ಮಲಗಿಸಿದಾಗ ರಾತ್ರಿ ಅವನು 'ಅವ್ವ ಯಾವಾಗ ಬರುತ್ತಾಳೆ' ಎಂದು ಕೇಳುವ ಅವನ ಪ್ರಶ್ನೆಗೆ ನಿರುತ್ತರವಾಗಿ ನಾಳೆ ಬರುವಳೆಂದು ಸುಳ್ಳು ಹೇಳಿ ಸಂತೈಸಿದ್ದು ವಿಶೇಷವಾಗಿದೆ. ಮರುದಿನ ಬೆಳಿಗ್ಗೆ ಎದ್ದು ಅದೇ ಕಾಯಕ ಮುಗಿಸಿ ತೊಳೆದ ಬಟ್ಟೆಗಳಿಲ್ಲದೇ ಅವೇ ಬಟ್ಟೆ ಹಾಕಿಕೊಂಡು ಪುನಃ ಹೊಟೇಲ್‌ಗೆ ಬಂದು ತಿಂಡಿ ತಿನ್ನುತ್ತಾರೆ. ಇಂತಹ ಸಂದರ್ಭದಲ್ಲಿ ಮನೆಗೆ ಬಂದ ಯಜಮಾನಿ ಮನೆಯ ಅಸ್ತವ್ಯಸ್ಥತೆಯನ್ನು ದಿನವಿಡೀ ಸರಿಮಾಡುತ್ತಾರೆ. ರಾತ್ರಿ ಬಿಸಿಬಿಸಿಯಾದ ರೊಟ್ಟಿ ಪಲ್ಯೆಗಳಿಂದ ಸ್ವರ್ಗಸುಖ ಕಂಡಂತೆ ಭಾಸವಾಗಿ ಅನುಭವಿಸಿದ್ದನ್ನು ಹೇಳುವಲ್ಲಿ ಹೆಂಡತಿಯಾದವಳ ಕಾಳಜಿ ಎಂತಹದ್ದು ಎಂಬ ಅರಿವು ಮೂಡುತ್ತದೆ. ಈ ರೀತಿಯಾಗಿ ಹೆಂಡತಿ ಗಂಡನಿಗೆ ಅರ್ಧಾಂಗಿಯಾಗಿ ಜೀವನದ ಕಷ್ಟಗಳಿಗೆ ಹೆಗಲೆಣೆಯಾಗಿ ನಿಲ್ಲುವ ಇಂತಹ ಸಾಧ್ವಿ ಕಾಯಕ ಜೀವಿಗಳನ್ನು ಪ್ರಶಂಸಿಸುವ ಕಾರ್ಯ ಈ ಪ್ರಬಂಧದಲ್ಲಾಗಿದೆ.

ಈ ರೀತಿಯಾಗಿ ವೀರೇಂದ್ರ ಸಿಂಪಿಯವರು ತಮ್ಮ ಲಲಿತ ಪ್ರಬಂಧಗಳಲ್ಲಿ ವಸ್ತು, ವ್ಯಕ್ತಿ, ಘಟನೆಗಳನ್ನು ಆಧರಿಸಿ ಕೆಲವು ಕಡೆ ಪ್ರಬಂಧದ ವಸ್ತು ತಾವೇ ಆಗಿ, ನಿಜವಾದ ಜೀವನಕ್ಕೆ ಬೇಕಾದ ಅಂಶಗಳನ್ನು ಆಧುನಿಕ ಜೀವನದ ನಿರೂಪಣೆಯೊಂದಿಗೆ ಕೆಲವು ವಿಶಿಷ್ಟ ವ್ಯಕ್ತಿಯ ವ್ಯಕ್ತಿಚಿತ್ರಣವನ್ನು ಹಾಗೂ ಅವರ ಬದುಕಿನ ಎಲ್ಲಾ ಬದಿಗಳನ್ನು ತಮ್ಮ ನಿರಾಪೇಕ್ಷಣಾ ವಿವೇಚನಾ ಶಕ್ತಿಯ ಮೂಲಕ ಜನರ ವ್ಯವಹಾರಿಕ ಮಾದರಿ ಹಾಗೂ ಸಾಮಾಜಿಕ ಸ್ತಂಭಗಳಂತೆ ನಟಿಸುವ ವ್ಯಕ್ತಿಗಳ ವ್ಯಕ್ತಿತ್ವವನ್ನು ಬಯಲಿಗೆಳೆದಿದ್ದಾರೆ. ಹಾಗೇ ಮಾನವ ಸ್ವಭಾವದ ಓರೆ-ಕೊರೆಗಳನ್ನು ವಿಹಂಗಮ ದರ್ಶನದ ಮೂಲಕ ವಿವಿಧ ಘಟನೆಗಳನ್ನು ಆಧರಿಸಿ ಸಮಾಜದ ಅಂಕುಡೊಂಕುಗಳನ್ನು ತಿದ್ದುವಲ್ಲಿ ಸಫಲತೆಯನ್ನು ಸಾಧಿಸಿದ್ದರಲ್ಲಿ ಯಶಸ್ವಿಯಾಗಿದ್ದಾರೆ.

ಅಡಿಟಿಪ್ಪಣಿಗಳು

೧. ವೀರೇಂದ್ರ ಸಿಂಪಿ, ಆಯ್ದ ಲಲಿತ ಪ್ರಬಂಧಗಳು, ಪು.೧

೨.ಅದೇ, ಪು.೧

೩. ಅದೇ, ಪು.೧

೪. ಅದೇ, ಪು.೧

೫. ಅದೇ, ಪು.೨

೬. ಅದೇ, ಪು.೬

೭. ಅದೇ, ಪು.೭

೮. ಅದೇ, ಪು.೫

೯. ಅದೇ, ಪು.೬

೧೦. ಅದೇ, ಪು.೭

೧೧. ಅದೇ, ಪು.೮

೧೨. ಅದೇ, ಪು.೧೦

೧೩. ಅದೇ, ಪು.೧೦

೧೪. ಅದೇ, ಪು.೧೧

೧೫. ಅದೇ, ಪು.೧೬

೧೬. ಅದೇ, ಪು.೨೧

೧೭. ಅದೇ, ಪು.೨೨

೧೮. ಅದೇ, ಪು.೨೨

೧೯. ಅದೇ, ಪು.೨೯

೨೦. ಅದೇ, ಪು.೩೨

೨೧. ಅದೇ, ಪು.೩೩

೨೨. ಅದೇ, ಪು.೪೦

೨೩. ಅದೇ, ಪು.೪೯

೨೪. ಅದೇ, ಪು.೫೦

೨೫. ಅದೇ, ಪು.೭೪

೨೬. ಅದೇ, ಪು.೭೬

೨೭. ಅದೇ, ಪು.೮೫

೨೮. ಅದೇ, ಪು.೯೧

೨೯. ಅದೇ, ಪು.೯೨

೩೦. ಅದೇ, ಪು.೯೨

೩೧. ಅದೇ, ಪು.೯೫

೩೨. ಅದೇ, ಪು.೧೦೯

೩೩. ಅದೇ, ಪು.೧೧೧

೩೪. ಅದೇ, ಪು.೧೧೧

೩೫. ಅದೇ, ಪು.೧೧೪

೩೬. ಅದೇ, ಪು.೧೧೪, ೧೧೫

೩೭. ಅದೇ, ಪು.೧೧೫

೩೮. ಅದೇ, ಪು.೧೧೬

೩೯. ಅದೇ, ಪು.೧೧೬

೪೦. ಅದೇ, ಪು.೧೧೭

೪೧. ಅದೇ, ಪು.೧೩೦

೪೨. ಅದೇ, ಪು.೧೩೨

೪೩. ಅದೇ, ಪು.೧೦೦

೪೪. ಅದೇ, ಪು.೯೯

೪೫. ಅದೇ, ಪು.೧೨೬

೪೬. ಅದೇ, ಪು.೩೬

೪೭. ಅದೇ, ಪು.೧೩೦

೪೮. ಅದೇ, ಪು.೧೩೮

೪೯. ಅದೇ, ಪು.೧

೫೦. ಅದೇ, ಪು.೧

೫೧. ಅದೇ, ಪು.೬

೫೨. ಅದೇ, ಪು.೬

೫೩. ಅದೇ, ಪು.೮

೫೪. ಅದೇ, ಪು.೧೫

೫೫. ಅದೇ, ಪು.೧೬

೫೬. ಅದೇ, ಪು.೪೨

೫೭. ಅದೇ, ಪು.೪೪

೫೮. ಅದೇ, ಪು.೪೯

೫೯. ಅದೇ, ಪು.೫೧

೬೦. ಅದೇ, ಪು.೨೬

೬೧. ಅದೇ, ಪು.೬೪

೬೨. ಅದೇ, ಪು.೬೪

೬೩. ಅದೇ, ಪು.೬೬

೬೪. ಅದೇ, ಪು.೬೭

೬೫. ಅದೇ, ಪು.೬೯

೬೬. ಅದೇ, ಪು.೧೧೧

೬೭. ಅದೇ, ಪು.೧೧

೬೮. ಅದೇ, ಪು.೮೨

೬೯. ಅದೇ, ಪು.೮೪

೭೦. ಅದೇ, ಪು.೧೦೪

೭೧. ಅದೇ, ಪು.೧೦೫

೭೨. ಅದೇ, ಪು.೧೨೧

೭೩. ಅದೇ, ಪು.೧೨೨

೭೪. ಅದೇ, ಪು.೧೨೩

೭೫. ಅದೇ, ಪು.೧೨೩

೭೬. ಅದೇ, ಪು.೧೨೪

೭೭. ಅದೇ, ಪು.೧೨೪

೭೮. ಅದೇ, ಪು.೫೩

೭೯. ಅದೇ, ಪು.೫೫

೮೦. ಅದೇ, ಪು.೫೭

೮೧. ಅದೇ, ಪು.೮೭

೮೨. ಅದೇ, ಪು.೧೨೭

೨೭

# ವೀರೇಂದ್ರ ಸಿಂಪಿ ಅವರ ಲಲಿತ ಪ್ರಬಂಧಗಳ ಭಾಷೆ ಮತ್ತು ಶೈಲಿ

ಭಾಷೆ : ಭಾಷೆ ಎನ್ನುವುದು ಅನುಭವದ ಅಭಿವ್ಯಕ್ತಿ ಮಾಧ್ಯಮ. ಇದು ಅನುಭವಕ್ಕೆ ಆಕಾರ ನೀಡಿ ಪಾತ್ರಗಳ ಮೂಲಕ ಗಂಭೀರವಾಗಿ ಚಿತ್ರಿಸುತ್ತದೆ. ಇದರ ಮೂಲಕ ಸಹೃದಯರಿಗೆ ಅದರ ಭಾವಾನುಭಾವವನ್ನು ಅರ್ಥಪೂರ್ಣವಾಗಿ ಮುಟ್ಟಿಸುವ ಕೆಲಸ ಭಾಷೆ ಮಾಡುತ್ತದೆ. ಪ್ರತಿಯೊಬ್ಬ ಲೇಖಕನು ಸಾಹಿತ್ಯ ನಿರ್ಮಿಸಲು ವಸ್ತುವೊಂದನ್ನು ಆಯ್ದುಕೊಂಡು ತನ್ನ ಅನುಭವ ಪ್ರಪಂಚದಿಂದ, ಕಾಲ್ಪನಿಕ ಕೈವಾಡದಿಂದ ಅದಕ್ಕೆ ಒಂದು ಭಾಷೆಯ ರೂಪ ನೀಡಿ, ಕಥನ ಕೌಶಲ್ಯದಿಂದ ಕೃತಿ ರಚಿಸುತ್ತಾನೆ. ಇಲ್ಲಿ ಲೋಕಾನುಭವವನ್ನು ವಾಸ್ತವಿಕ ಬದುಕಿನ ವೈವಿಧ್ಯತೆಯನ್ನು, ಭಾಷೆ ಶೈಲಿಯ ಮೂಲಕ ಕಟ್ಟಿಕೊಡುವ ಪ್ರಯತ್ನ ಮಾಡುತ್ತಾನೆ.

ಭಾಷೆ ಪರಸ್ಪರ ವ್ಯವಹಾರಕ್ಕಾಗಿ ಇರುವಂತಹ ಒಂದು ಯಾದೃಚ್ಛಿಕ ಧ್ವನಿ ಸಂಕೇತಗಳ ವ್ಯವಸ್ಥೆ. ಇಂತಹ ಭಾಷಾ ಸಾಹಿತ್ಯ ಜೀವನದ ಪ್ರತಿಬಿಂಬವಾಗಿದೆ. ಸಾಹಿತ್ಯ ಶ್ರೇಷ್ಠ ಎನಿಸಿಕೊಳ್ಳಬೇಕಾದರೆ ಭಾಷೆಯನ್ನು ಹದವರಿತು ದುಡಿಸಿಕೊಳ್ಳುವ ಕಲೆ ಸಾಹಿತಿಗೆ ಗೊತ್ತಿರಬೇಕು. ಭಾಷೆ ನಮ್ಮ ಮನಸ್ಸಿನ ವಿಚಾರವನ್ನು ಇನ್ನೊಬ್ಬರೊಂದಿಗೆ ಹಂಚಿಕೊಳ್ಳುವ ಸಂಪರ್ಕ ಸಾಧನ. ಕಾಲಕ್ಕೆ ಅನುಗುಣವಾಗಿ ಒಬ್ಬ ಕವಿ, ಕಥೆಗಾರ ಕಾದಂಬರಿಕಾರ, ಪ್ರಬಂಧಕಾರ, ಭಾಷೆಯನ್ನು ತನ್ನ ಸಾಹಿತ್ಯಕ್ಕೆ ತಕ್ಕಂತೆ ಬಳಸಿಕೊಂಡು ತನ್ನ ಸುತ್ತಮುತ್ತಲಿನ ಪರಿಸರ, ಸನ್ನಿವೇಶ, ಘಟನೆ, ವ್ಯಕ್ತಿ, ವಸ್ತು ಕುರಿತು ಸಾಹಿತ್ಯ ರಚಿಸುತ್ತಾನೆ. ಅದೇ ರೀತಿಯಲ್ಲಿ ಲಲಿತ ಪ್ರಬಂಧಕಾರರಾದ ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧದಲ್ಲಿ ಬಳಕೆಯಾದ ಅವರ ಭಾಷಾಸೌಷ್ಠತೆಯಿಂದಲೇ ಲಲಿತ ಪ್ರಬಂಧಗಳು ಹೆಚ್ಚು ಆಕರ್ಷಕವಾಗಿ ಕಾಣುತ್ತವೆ.

ವಿವಿಧ ಕಾಲಘಟ್ಟದ ಪ್ರಬಂಧಕಾರರಲ್ಲಿ ಭಾಷೆ, ಶೈಲಿಯ ಭಿನ್ನತೆಯನ್ನು ಕಾಣಬಹುದು. ನವೋದಯ ಕಾಲದ ಪ್ರಬಂಧಕಾರರಲ್ಲಿ ಭಾಷೆ, ಶೈಲಿ, ಸರಳ ಮತ್ತು ಸುಲಭವಾಗಿದ್ದು ವರ್ಣನಾತ್ಮಕ ಶೈಲಿಯ ಶಿಷ್ಟಭಾಷೆ ಬಳಕೆಯಾಗಿದೆ. ಇಲ್ಲಿ ಯಾವುದೇ ಸಂಕೀರ್ಣತೆಯ ಛಾಯೆ ಇಲ್ಲದೆ, ಶುದ್ಧ ಭಾಷೆಯ

ನಿರೂಪಣ ಶೈಲಿಯನ್ನು ಕಾಣುತ್ತೇವೆ. ಪ್ರಗತಿಶೀಲ ಪ್ರಬಂಧಕಾರರಲ್ಲಿ ಆವೇಶ, ಆಕ್ರೋಶ, ಪ್ರತಿಭಟನೆಯ ಕೂಗು ಭಾಷೆಯ ಮೂಲಕ ವ್ಯಕ್ತವಾಗಿದೆ. ನವ್ಯದ ಪ್ರಬಂಧಕಾರರಲ್ಲಿ ಶಿಷ್ಟ ಹಾಗೂ ಪ್ರತಿಮಾ ವಿಧಾನದ ಪ್ರಾಂತಿಯ ಸಮ್ಮಿಶ್ರಿತ ಭಾಷೆಯನ್ನು ಬಳಸಿದ್ದು ಗುರುತಿಸಬಹುದು. ದಲಿತ ಬಂಡಾಯ ಕಾಲದಲ್ಲಿ ಸಿಟ್ಟು, ಸೆಡವು ರೋಷವನ್ನು ವ್ಯಕ್ತಪಡಿಸಲು ಜನಸಾಮಾನ್ಯರ ಭಾಷೆಯೇ ಹೆಚ್ಚಾಗಿ ಬಳಕೆಯಾದದ್ದನ್ನು ಕಾಣುತ್ತೇವೆ.

ಈ ನೆಲೆಯಲ್ಲಿ ವೀರೇಂದ್ರ ಸಿಂಪಿಯವರು, ನವ್ಯಕಾಲದ ಶಿಷ್ಟ ಭಾಷೆಯೊಂದಿಗೆ ಆಧುನಿಕ ಕಾಲದ ಉಪಭಾಷೆಗಳನ್ನು ಅಳವಡಿಸಿಕೊಂಡು ಅಲ್ಲಲ್ಲಿ ನುಡಿ ಮುತ್ತುಗಳು, ಶ್ಲೋಕಗಳು, ನಾಣ್ಣುಡಿಗಳು, ವರ್ಣನೆಗಳು, ಸಂಭಾಷಣಾ ವಿಧಾನಗಳನ್ನು ಬಳಸಿದ್ದನ್ನು ಕಾಣಬಹುದು. ಇವರ ಪ್ರಬಂಧಗಳಲ್ಲಿ ತಾವೇ ಪಾತ್ರಧಾರಿಗಳಾಗಿ, ನಿರೂಪಕರಾಗಿ ಹೇಳುವ ರೀತಿ ಕ್ರಮದಲ್ಲಿ ಹೊಸ ಜೀವನ ದೃಷ್ಟಿಯನ್ನು ವ್ಯಕ್ತಪಡಿಸಿರುವುದು ಇವರ ಪ್ರಬಂಧದ ಶ್ರೇಷ್ಠತೆಯನ್ನು ಹೆಚ್ಚಿಸಿದೆ. ಪಾತ್ರ, ಪ್ರಜ್ಞೆ, ತಂತ್ರ, ಹಿನ್ನೋಟಗಳಿಂದ ಭಾಷೆಯನ್ನು ಸಮರ್ಪಕವಾಗಿ ತಮ್ಮ ಪ್ರಬಂಧಗಳಲ್ಲಿ ದುಡಿಸಿಕೊಂಡಿದ್ದಾರೆ.

ವೀರೇಂದ್ರ ಸಿಂಪಿಯವರಿಗೆ ಭಾಷೆಯ ಮೇಲೆ ಹಿಡಿತವಿದೆ. ಶಿಷ್ಟ ಭಾಷೆಯ ಜೊತೆಗೆ ಆಡುಭಾಷೆಯನ್ನು, ಅನ್ಯಭಾಷೆಗಳನ್ನು ಸಮೀಕರಿಸುವ ಕಲೆ ಕರಗತವಾಗಿದೆ. ಅದಕ್ಕೆ ಇವರ ಪ್ರಬಂಧಗಳಲ್ಲಿ ಕನ್ನಡದ ಜೊತೆ ಅಲ್ಲಲ್ಲಿ ಇಂಗ್ಲೀಷ್, ಹಿಂದಿ, ಸಂಸ್ಕೃತ, ಮರಾಠಿಯಂತಹ ಪದಗಳು ಕಂಡುಬರುತ್ತವೆ. ಇಂತಹ ವಿಶಿಷ್ಟ ಕಲೆಗಾರಿಕೆಯಿಂದ ಅವರ ಪ್ರಬಂಧಗಳಲ್ಲಿ ತಾರ್ಕಿಕತೆ ಹೆಚ್ಚಾಗಿದೆ. ವೀರೇಂದ್ರ ಸಿಂಪಿಯವರು ಮುಖ್ಯವಾಗಿ ಅವರ ಲಲಿತ ಪ್ರಬಂಧಗಳಲ್ಲಿ ಶಿಷ್ಟ ಕನ್ನಡ ಭಾಷೆಯನ್ನೇ ಬಳಸಿದ್ದಾರೆ. ಜೊತೆಗೆ ಸಂಭಾಷಣಾ ಸನ್ನಿವೇಶದಲ್ಲಿ ಆಯಾ ಸಾಂದರ್ಭಿಕ ಸನ್ನಿವೇಶಕ್ಕೆ ಆಯಾ ಪ್ರಾಂತೀಯ ಭಾಷೆಯನ್ನು ಬಳಸಿಕೊಂಡಿದ್ದಾರೆ. ಪಾತ್ರಗಳ ನಡುವಿನ ಸಂಭಾಷಣೆಯನ್ನು ಸ್ವಾರಸ್ಯಕರವಾಗಿ, ನೈಜವಾಗಿ, ಆಡುಮಾತಿನ ಶೈಲಿಯಲ್ಲಿ ವ್ಯಕ್ತಪಡಿಸಿರುವುದನ್ನು ಇವರ ಪ್ರಬಂಧಗಳಲ್ಲಿ ಗುರುತಿಸಬಹುದು. ಉದಾಹರಣೆಗೆ,

"ಪ್ರವಾಸದಲ್ಲಿ ಮೋಗ ಬಾಡಿದೆಯಲ್ಲಾ.... ಮುಖಕ್ಕೆಲ್ಲಾ ಧೂಳು ಧೂಳು... ಈ ಹೋಲ್ಡಾಲ್ ತಮ್ಮದೇ ಏನು ಸಾರ್? ... ಎಷ್ಟು ಭಾರವಿದೆ ಏನಾದರೂ ಲೀಕರ್ ಉಂಟೇ! ಛೀ ಥೂ ತಪ್ಪಾಯಿತು ಸಾರ್ ... ಇನ್ನೊಂದು ಬಾರಿ ಕ್ಷಮಿಸಿ ಬಿಡಿ."[೧]

"ಈ ಪಲ್ಯೆ ಬಹಳ ಸೋಯಿಯಾಗಿದೆಯಲ್ಲವೇ ಸೆಟ್ಟರೆ... ನಿಮ್ಮದು ನಳಪಾಕ ಮಹಾಶಯರೇ..."[೨]

ಇಂತಹ ಸಂಭಾಷಣೆಗಳಲ್ಲಿ ಉಡುಪಿ, ಮಂಗಳೂರು ಪರಿಸರದ ಭಾಷೆಯನ್ನು ಬಳಸಿದ್ದು ಕಾಣಬಹುದು. ಅದೇ ರೀತಿ,

"ಈ ಕೂಸು ನಿಮ್ಮದೆ ಏನ್ರಿ... ಎಷ್ಟು ವರ್ಷ ಆಗಿವೆ...? ಮೊನ್ನೆ ಅಮವಾಸ್ಯೆಗೆ ಒಂದು ತಿಂಗಳಾಯ್ತು"[೩]

"ರಾವ ಸಾಹೇಬ ಸ್ವಲ್ಪ ಮುಖ ತಿರುವಿರಿ...

ಸ್ವಲ್ಪವೇಕೆ ಮರಾಯ ಪೂರ್ತಿ ತಿರುವುತ್ತೇನೆ"[೪]

"ಫಿರ್ ವಹಿ ಭಾಜಿ ಲಾಯಾ ಹೂಂ..."

"ಫಿರ್ ವಹಿ ಪೇಟ್ ಲಾಯಾ ಹೂಂ"[೫]

"ಏನ್ರಿ ಈ ಕೋಟು ಯಾವ ಮಾಡೆಲ್ಲು... ಏನ್ರಿ ಮಹಾಶಯರೇ ಏನಿದರ ಬಣ್ಣ, ಇದೆಂಥ ಆಯ್ಕೆ ನಿಮ್ಮದು ರೇಲವೆ ಸ್ಟೇಶನ್ ಮಾಸ್ತರರ ಸೂಟಾಗಿದೆಯಲ್ಲಾ."[೬]

"ನೋಡ್ರಿ ಜನ ಪ್ಯಾಶಮ್ನ ಮಾಡುತ್ತಾರೆ. ಅದಕ್ಕೆಂದೇ ಕಾಲಕಾಲಕ್ಕೆ ಮಳೆಯಾಗುವುದಿಲ್ಲ, ಬೆಳೆ ಬರುವುದಿಲ್ಲ."

"ನಾವು ಒಳ್ಳೆಯವರ್ರಿ, ಒಳ್ಳೆಯವರಿಗೆ ಈಗ ಕಾಲವಿಲ್ಲಾರಿ."[೭]

"ಮಾಮಾ ನನಗೆ ಹೊಸಬಟ್ಟೆ ಹೋಲಿಸಬೇಡ ಪಂಚಮಿಗೆ ಹೊಲಿಸಿದ ಪರಕಾರ ಪೋಲಕವನ್ನೇ ಒಗೆದು ಇಸ್ತ್ರಿ ಮಾಡಿಸೋಣ."[೮]

"ಏನ್ ಹೆಣ್ಣಪ್ಪ ಅದು ಕೈತೊಳೆದು ಮುಟ್ಟಬೇಕು ಅದನ್ನ"[೯]

"ಮನೆ ಖಾಲಿಯಿದೆಯೇ... ಇದರ್ ಮಕಾನ್ ಗಿಕಾನ್ ಕುಛನಹಿ"[೧೦]

ಇಂತಹ ಸಂಭಾಷಣೆಗಳಲ್ಲಿ ಉತ್ತರ ಕರ್ನಾಟಕದ ಪ್ರಾಂತೀಯ ಭಾಷೆಯ ಬಳಕೆಯಾಗಿರುವುದನ್ನು ಗುರುತಿಸಬಹುದು. ಇಂತಹ ಭಾಷೆಗಳಲ್ಲಿಯ ಆತ್ಮೀಯತೆಯನ್ನು ಪಾತ್ರಗಳ ಮೂಲಕ ವ್ಯಕ್ತಪಡಿಸಿದ್ದು ವಿಶೇಷವೆನಿಸಿದೆ. ಅದೇ ರೀತಿ ಅಲ್ಲಲ್ಲಿ ಬಳಕೆಯಾಗಿರುವ ಉಪಭಾಷೆಗಳು ಇಂತಿವೆ.

ಜುಲುಮೆ - ಒತ್ತಾಯ

ಚುರಮರಿ-ಮಂಡಕ್ಕಿ

ಪಡಗಾ - ಮಡಕೆ

ಚಿವುಡಾ - ಒಂದು ಖಾರ ಪದಾರ್ಥ

ಮಾಸಲು - ಕೊಳೆ ಇಲ್ಲದ್ದು

ಮಾಣಿ - ಕೆಲಸಗಾರ

ಪೂಟು - ಅಡಿ

ಚಪರಾಸಿ - ಒಂದು ಬೈಗಳ

ಜಡ್ಡು - ರೋಗ

ಹೇಸಿ - ಹೊಲಸು

ಶ್ಯಾಣ್ಯತನ - ಬುದ್ಧಿವಂತಿಕೆ

ಚುಕ್ತಾ - ಮುಕ್ತಾಯ ಮುಗಿ

ದಗಾಬಾಜಿತನ - ಕೀಟಲೆ

ಈ ಎಲ್ಲಾ ಪದಗಳಲ್ಲಿ ಬೀದರ ಮತ್ತು ಚಡಚಣ ಪ್ರದೇಶದ ಪ್ರಾಂತೀಯ ಭಾಷೆಯ ಪ್ರಭಾವವಾಗಿರುವುದನ್ನು ಕಾಣಬಹುದು.

ಇನ್ನು ಇವರ ಪ್ರಬಂಧಗಳಲ್ಲಿ ಹೆಚ್ಚಾಗಿ ಬಳಕೆಯಾದ ಅನ್ಯಭಾಷೆ ಪದಗಳನ್ನು ಸಹ ಗುರುತಿಸಬಹುದಾಗಿದೆ.

ಉದಾ :

ಫ್ಯಾಶನ್ - ಆಡಂಬರ

ಸೂಟಿ - ರಜೆ

Pocket money - ಕರ್ಚಿನ ಹಣ

ಸ್ಕಾರ್ಫ್ - ತಲೆಗೆ ಕಟ್ಟುವ ಟವಾಲು

ಕಂಪ್ಲೆಂಟ್ಸ - ಆರೋಪ

ವಶೀಲಿ - ವಸೂಲು, ಹಿಂಪಡೆ

ರಿಕಾಮಿ - ಖಾಲಿ

ಬುಶ್ಕೋಟ ಕವಿ - ಕುಕವಿ

ಗ್ರಾಜ್ಯುಯೇಟ್ - ಪದವಿಧರ

ಕುಛನಹಿ - ಏನೂ ಇಲ್ಲ

ಅಗ್ರೇಸರ - ಮೇಲ್ಮಟ್ಟದ

ದಗಾಬಾಜಿ - ಕೀಟಲೆ

ವಾಕ್ ಔಟ್ - ಹೊರಗೆ ಹೋಗು

ಹೀಗೆ ಇನ್ನೂ ಮುಂತಾದ ಅನ್ಯಭಾಷೆಯ ಪದಗಳು ಇವರ ಪ್ರಬಂಧಗಳಲ್ಲಿ ಚೆಲ್ಲುವರಿದು ಬಂದಿವೆ. ಇಲ್ಲಿ ಇಂಗ್ಲೀಷ, ಹಿಂದಿ, ಉರ್ದು, ಮರಾಠಿ ಭಾಷೆಗಳನ್ನು ಬಳಸಿದ್ದನ್ನು ಕಾಣಬಹುದು. ಈ ಮೂಲಕ ವೀರೇಂದ್ರ ಸಿಂಪಿಯವರು ಇತರೆ ಭಾಷೆಗಳಲ್ಲೂ ಸಹ ತಮ್ಮ ಪ್ರಭುತ್ವ ಸಾಧಿಸಿರುವುದನ್ನು ಕಾಣಬಹುದು.

ವೀರೇಂದ್ರ ಸಿಂಪಿಯವರು ವೃತ್ತಿಯಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದರಿಂದ ಇವರ ಪ್ರಬಂಧಗಳಲ್ಲಿ ಅಲ್ಲಲ್ಲಿ ಇಂಗ್ಲೀಷ್‌ನ ವಾಕ್ಯಗಳನ್ನು ಬಳಸಿರುವುದನ್ನು ಕಾಣಬಹುದು. ಉದಾ

"My palate has grown insensitive, How cruel"[೧೧]

"Giant spirit in a frail body"[೧೨]

"He is lean wound but, afraid to strike"[೧೩]

"It falls life gentle rain"[೧೪]

"Lost informity of nobles soul"[೧೫]

"Taj stand for beauty and we stands for duty"[೧೬]

"Blood is Thicker Then water"[೧೭]

"The path of true love never did run smooth"[೧೮]

"what a fall gentleman what a fall"[೧೯]

"where the ming is without fear"[೨೦]

ಈ ರೀತಿಯ ವಾಕ್ಯಗಳು ಅಲ್ಲಲ್ಲಿ ಬಳಕೆಯಾಗಿ ಪ್ರಬಂಧದ ಸೌಂದರ್ಯವನ್ನು ಹೆಚ್ಚಿಸಿವೆ. ಇಂತಹ ಸಾಲುಗಳು ಕನ್ನಡ ಪ್ರಬಂಧದಲ್ಲಿ ಬಂದರೂ ಅವು ಸಾಂದರ್ಭಿಕ ವಿವೇಚನೆಗೆ ಸೂಕ್ತವೆನಿಸಿ ಬಳಕೆಯಾದಂತಿವೆ.

## ಗಾದೆಗಳು

ಒಂದು ಸೃಜನಶೀಲ ಬರವಣಿಯಲ್ಲಿ ಆಯಾ ಪ್ರಾಂತೀಯ ಪ್ರದೇಶದ ವಾಗ್ರೂಢಿ, ಪ್ರತೀತಿ, ಗಾದೆಗಳೂ ಒಳಗೊಂಡಿರಬೇಕು. ಇದರಿಂದ ಆಯಾ ಪರಿಸರದ ಆಡುನುಡಿಯ ಸೊಬಗಿನ ಜೊತೆ

ಪ್ರಾದೇಶಿಕ ಸಾಮ್ಯತೆಯನ್ನು ತೋರಿಸುತ್ತದೆ. ಅದಕ್ಕೆ "ಗಾದೆ ವೇದಕ್ಕೆ ಸಮಾನ, ವೇದ ಸುಳ್ಳಾದರೂ, ಗಾದೆ ಸುಳ್ಳಾಗದು" ಎಂಬ ಮಾತು ಸತ್ಯವೆನಿಸಿದೆ. ಗಾದೆಗಳಲ್ಲಿ ಜನಸಾಮಾನ್ಯರ ಬದುಕು ಹಾಸುಹೊಕ್ಕಾಗಿದೆ. ಕಿರಿದರಲ್ಲಿ ಹಿರಿದರ್ಥ ಹೇಳುವ ಈ ಗಾದೆಗಳನ್ನು ವೀರೇಂದ್ರ ಸಿಂಪಿಯವರು ತಮ್ಮ ಪ್ರಬಂಧಗಳಲ್ಲಿ ಬಳಸಿದ್ದು ಕಾಣಬಹುದು.

"ರೋಗಿಗೆ ಚೆಲ್ಲಾಟ ಡಾಕ್ಟರರಿಗೆ ಪ್ರಾಣ ಸಂಕಟ"[೩೧]

"ನೀ ನುಂಗಿದ ಗುಳಿಗೆಗಳ ಲೆಕ್ಕ ಶಿವಾ ನೋಡಿ ನಕ್ಕ"[೩೨]

"ಉದ್ದನ್ನವರಿಗೆ ಬುದ್ಧಿಯಿಲ್ಲ"[೩೩]

"ಅರಸುತಿಹ ಲತೆ ಕಾಲ್ತೊಡಕುವಂತೆ"[೩೪]

"ಹಣವೆಂದರೆ ಹೆಣವೂ ಬಾಯಿ ತೆರೆಯುತ್ತದೆ"[೩೫]

"ಹೊಗಳಿಕೆಯೆಂದರೆ ಹೆಣದಂತಿದ್ದವನು ಹುರುಪುದೊಟ್ಟು ನಿಲ್ಲುತ್ತಾನೆ"[೩೬]

"ಕಟ್ಟುವುದು ಆಗದಿದ್ದರೆ ಕೆಡಿಸುವುದಾದರೂ ಮಾಡು"[೩೭]

"ಊರ ಸರದಾರ ಮನೆಯ ಹೆಂಡತಿಯ ಪಿಂಜಾರ"[೩೮]

"ಅಚ್ಚಗಿದ್ದಲ್ಲಿ ಮೇದು ಬೆಚ್ಚಗಿದ್ದಲ್ಲಿ ಮಲಗು"[೩೯]

ಈ ರೀತಿಯಾದ ಗಾದೆಗಳು ಧ್ವನಿ ವೈಶಿಷ್ಟ್ಯ, ಉಪಮೆ, ಪ್ರತಿಮೆಗಳ ಮೂಲಕ ಸಂದರ್ಭಕ್ಕೆ ತಕ್ಕಂತೆ ಬಳಸಿಕೊಂಡಿದ್ದಾರೆ. ಇಂತಹ ಗಾದೆಗಳಿಂದ ಓದುಗರಿಗೆ ಪ್ರಬಂಧಗಳು ಆಪ್ತವೆನಿಸುತ್ತವೆ.

## ಶ್ಲೋಕಗಳು

ವೀರೇಂದ್ರ ಸಿಂಪಿಯವರು ಅಲ್ಲಲ್ಲಿ ಸಂದರ್ಭಕ್ಕೆ ತಕ್ಕಂತೆ ಕೆಲವು ಕನ್ನಡ, ಸಂಸ್ಕೃತ ಶ್ಲೋಕಗಳನ್ನು ಬಳಸಿದ್ದಾರೆ. ಅಂತಹವುಗಳಲ್ಲಿ ಉದಾಹರಣೆಗೆ,

"ಶ್ರೀ ಗಣೇಶಾಯ ನಮಃ"[೪೦]

"ಪ್ರಥಮಂ ವಂದೇ ಪ್ರಾಥಮಿಕ ಪ್ರಶಾಲಾ ಗುರುಂ"[೪೧]

"ಸಹನಾವವತು ಸಹಸೌಭುನಕ್ತು

ಸಹವೀರ್ಯ ಕರವಾವಹೈ..."[೪೨]

“ದಿನಮಪಿ ರಜನೀ ಸಾಯಂ ಪ್ರಾತಃ ಶಿಶಿರ ವಸಂತ...”[೩೩]

“ಪುನರಪಿ ಭೋಜನಂ ಪುನರಪಿ ಶಯನಂಗಳ್”[೩೪]

ಈ ರೀತಿಯಾದ ಶ್ಲೋಕಗಳು ಪ್ರಬಂಧಗಳಿಗೆ ವಿಶಿಷ್ಟತೆಯನ್ನು ತಂದುಕೊಟ್ಟಿವೆ.

ಇನ್ನು ಕೆಲವು ವಿಶಿಷ್ಟವೆನಿಸುವ ಹೊಸ ಪದಗಳು ಸಹ ಅಲ್ಲಲ್ಲಿ ಬಳಕೆಯಾಗಿವೆ. ಉದಾ

ತಂಗಳೂರು - ಬೆಂಗಳೂರಿಗೆ ತದ್ಭವ ಪದ

ನಿಧಾನಸೌಧ - ವಿಧಾನಸೌಧದ ತದ್ಭವ ರೂಪ

ಶ್ಯಾಣ್ಯಾತನ - ಜಾಣತನ

ತಗಲು - ಸುಳ್ಳು

ಮುಂತಾದ ಹೊಸ ಹೊಸ ಪದಗಳು ಬಳಕೆಯಾಗಿ ಭಾಷೆ ದೃಷ್ಟಿಯಿಂದ ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳು ವಿಶಿಷ್ಟತೆಯನ್ನು ಪಡೆದಿವೆ. ಹಾಗೇ ಶಿಷ್ಟ ಕನ್ನಡ ಭಾಷೆಯ ಜೊತೆಗೆ ಹದವರಿತ ಪ್ರಾದೇಶಿಕ ಸೊಬಗಿನ ಆಡುಭಾಷೆಯನ್ನು ಬಳಸಿ ಭಾಷೆಯ ಪುನರ್‌ಸಂದರ್ಭೀಕರಣಕ್ಕೆ ಹೊಸ ಅರ್ಥವನ್ನು ಕೊಟ್ಟಿದ್ದಾರೆ. ಭಾಷೆಯ ಆಧುನೀಕರಣ ಇಂತಹ ಸಾಹಿತಿ ಕಲಾವಿದರಿಂದ ಪ್ರಜ್ಞಾಪೂರ್ವಕವಾಗಿ ನಡೆದಿದೆ. ಈ ಮೂಲಕ ಹೊಸ ಜೀವನ ಶೋಧನೆಯನ್ನು, ಅನುಭಾವವನ್ನು ಪ್ರಬಂಧದಲ್ಲಿ ಭಾಷೆಯ ಮೂಲಕ ಕಟ್ಟಿಕೊಟ್ಟಿರುವುದು ಅವರ ಸಾಹಿತ್ಯಕ ಹಿರಿಮೆಯಾಗಿದೆ.

## ಶೈಲಿ

ವೀರೇಂದ್ರ ಸಿಂಪಿಯವರಿಗೆ ಅವರದ್ದೇ ಆದ ವಿಶಿಷ್ಟ ಶೈಲಿ ಇದೆ. ವಾಸ್ತವವಾಗಿ ಇವರು ಕನ್ನಡದಲ್ಲಿ ಪ್ರಖ್ಯಾತ ಗದ್ಯ ಬರಹಗಾರರ ಪಟ್ಟಿಗೆ ಸೇರಿದ್ದಾರೆ. ಇವರು ಸರಳವಾಗಿ, ಸಹಜವಾಗಿ, ನಿರಾಡಂಬರವಾಗಿ ಬರೆದುಕೊಂಡು ಹೋಗುವುದು ಇವರ ಜಾಯಮಾನವಾಗಿದೆ. ಇವರ ಸ್ವಭಾವಿಕ ಬರವಣಿಗೆಯಲ್ಲಿ ಸೊಗಸಿದೆ. ಮಾರ್ಮಿಕವಾಗಿ ಹೇಳುವ ಜಾಣ್ಮೆ ಇದೆ. ಇವರು ಬಳಸುವ ಭಾಷೆ ಶಿಷ್ಟಭಾಷೆಯಾದರೂ ಅಲ್ಲಲ್ಲಿ ಆಡುನುಡಿ, ಗಾದೆ, ಪ್ರತಿಮೆ, ನುಡಿಗಳ ಮೂಲಕ ಅನ್ಯಭಾಷಾ ಪದಪ್ರಯೋಗಗಳೊಂದಿಗೆ ಪ್ರಬಂಧ ರಚಿಸಿದ್ದನ್ನು ಗುರುತಿಸಬಹುದು. ನವ್ಯದ ಸಕಲ ಸಿದ್ಧಿಗಳನ್ನು ಬಲ್ಲ ಇವರು ಆ ಕಾಲದ ಲಲಿತ ಪ್ರಬಂಧಕಾರರ ಶೈಲಿಯನ್ನೇ ಬಳಸಿಕೊಂಡಿದ್ದಾರೆ. ಹಾಗೂ ಇತ್ತೀಚಿನ ಆಧುನಿಕರ ಪ್ರಬಂಧ ಶೈಲಿಯನ್ನು ರೂಢಿಸಿಕೊಂಡಿದ್ದಾರೆ. ಇವರ ನಿರೂಪಣಾ ಶೈಲಿ ಸರಳವಾಗಿಯೂ ಅಹ್ಲಾದಕರವಾಗಿಯೂ ಇದೆ. ಅನುಭವವನ್ನು ವಿಶ್ಲೇಷಿಸುವಲ್ಲಿ ಮಾರ್ಮಿಕ ಶೈಲಿಯನ್ನು ಬಳಸಿದ್ದಾರೆ.

ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳು ವ್ಯಕ್ತಿನಿಷ್ಠವಾಗಿವೆ. ನಿರೂಪಣಾ ಶೈಲಿಯಲ್ಲಿ ಸರಳವಾಗಿಯೂ ಅಹ್ಲಾದಕಾರಿಯಾಗಿಯೂ ಓದಿದಷ್ಟು ಮತ್ತೆ ಮತ್ತೆ ಓದಬೇಕೆನ್ನುವ ಭಾವನೆ, ಆತ್ಮೀಯತೆಯನ್ನು ಹಿಡಿದಿಡುತ್ತವೆ. ಇವರ ಪ್ರಬಂಧಗಳಲ್ಲಿ ನೀರಸ ತತ್ವ ಬೋಧೆಯಾಗಲಿ, ಒಣ ತರಲೆಗಳಾಗಲಿ ಇರದೇ ತತ್ವಗಳ ಒಳಗುಟ್ಟು, ಮೃದು ಪರಾಮರ್ಶೆ, ಅಭಿಮುಖಿಕರಣದ ಕಾಳಜಿ ವೈಜ್ಞಾನಿಕ ತಳಹದಿಯ ಮೇಲೆ ಪ್ರಬಂಧ ರಚಿಸಿದ್ದು ಇವರ ವಿಶಿಷ್ಠ ಶೈಲಿಯನ್ನು ಗುರುತಿಸುತ್ತದೆ. ಜೀವನದ ಅನುಭವವೊಂದನ್ನು ವಿಶ್ಲೇಷಿಸುವಲ್ಲಿ, ಮಾರ್ಮಿಕ ಶೈಲಿಯೂ ಮೂಡಿಬಂದಿದೆ. ಪ್ರಬಂಧಗಳಲ್ಲಿ ವಸ್ತುವಿಷಯವನ್ನು ಹಲವಾರು ಆಯಾಮಗಳಲ್ಲಿ ಚಿತ್ರಿಸಿ ಮಾನವ ಬದುಕಿನ ಸ್ವಾರ್ಥ, ದುರಾಸೆ, ಕ್ರೌರ್ಯ, ಶೋಷಣೆ, ಸಣ್ಣತನ, ಮೌಢ್ಯತೆ, ಬಡತನ, ಹಣದ ದಾಹ ಮುಂತಾದ ಸಂಗತಿಗಳನ್ನು ವೀರೇಂದ್ರ ಸಿಂಪಿಯವರು ತಮ್ಮದೇ ಆದ ಶೈಲಿಯಲ್ಲಿ ಹಾಸ್ಯ, ವ್ಯಂಗ್ಯ ವಿಡಂಬನೆಯೊಂದಿಗೆ ವೈಚಾರಿಕ ಅಂಶಗಳ ತತ್ವವಿಶ್ಲೇಷಣೆಯೊಂದಿಗೆ ರಸಿಕ ಮನವನ್ನು ತಣಿಸುವ ರೀತಿಯನ್ನು ಕಾಣಬಹುದು.

ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧದ ಇನ್ನೊಂದು ವಿಶೇಷತೆ ಎಂದರೆ ಓದುಗರ ನಿರಂತರ ಕುತೂಹಲವನ್ನು ಕಾಯ್ದುಕೊಳ್ಳುವ ಇವರ ಪ್ರಬಂಧಗಳಲ್ಲಿ ವಿಶಿಷ್ಟ ಕಲೆಗಾರಿಕೆಯೊಂದಿಗೆ ಸಾಮಾಜಿಕ ವಿಡಂಬನೆ, ಬದುಕಿನ ಹಲವು ಮಗ್ಗಲುಗಳನ್ನು ಚಿತ್ರಿಸುವಲ್ಲಿ ತಾರ್ಕಿಕ, ವೈಚಾರಿಕ ದೃಷ್ಟಿ, ವಿಮರ್ಶಾಶೈಲಿಯನ್ನು ಬಳಸಿದ್ದು ಕಾಣಬಹುದು. ಇಲ್ಲಿ ವಸ್ತುವಿನ ನಿಯಮವಿಲ್ಲ, ಪ್ರಬಂಧಗಳು ಹರಟೆಗಳಂತೆ ಕಂಡುಬಂದರೂ ಅಲ್ಲಿ ಆತ್ಮ ವಿನೋದದ ಛಾಯೆ ಇದೆ. ವಸ್ತು ವಿಷಯವೊಂದನ್ನು ವಿಂಗಡಿಸಿ, ತರ್ಕಿಸಿ, ವಿಶ್ಲೇಷಿಸಿ ನಂತರ ತಿಳಿಗೊಳಿಸುವ ಚಾತುರ್ಯ ಇವರಿಗೆ ಸಿದ್ಧಿಸಿದಂತಿದೆ.

'ಕಾಗದದ ಚೂರು' ಎಂಬ ಪ್ರಬಂಧದಲ್ಲಿ ಒಂದು ಸಣ್ಣ ಕಾಗದದ ತುಂಡಿನಿಂದಾಗುವ ಉಪಯೋಗವನ್ನು ಚಿತ್ರಕ ಶೈಲಿಯಲ್ಲಿ ವ್ಯಕ್ತಪಡಿಸಿದ್ದಾರೆ. ಅದೇ ರೀತಿ 'ಜಡ್ಡಿನ ಜಾಪತ್ರಿ'ಯನ್ನು ಅನಾರೋಗ್ಯದ ಕಠಿಣ ಸಂದರ್ಭದಲ್ಲೂ ಸುಖವನ್ನು ಕಾಣುವ ಇವರ ಮನೋಭಾವ ಅಣಕು ಮಹಾಕಾವ್ಯದಂತೆ ಚಿತ್ರಿಸಲಾಗಿದೆ. 'ಉದ್ದನ್ನ ವ್ಯಕ್ತಿಯ ಅಡೆತಡೆಗಳು' ಪ್ರಬಂಧದಲ್ಲಿ ದೈಹಿಕ ಭಿನ್ನತೆಯನ್ನು ಬೌದ್ಧಿಕ ಸಂಕೀರ್ಣತೆ ದೃಷ್ಟಿಯಿಂದ ನೋಡುವ ವೈಚಾರಿಕತೆ ಇದೆ. ಹೀಗೆ ಸಾಮಾನ್ಯ ಸಂಗತಿಯಿಂದ ಪ್ರಾರಂಭವಾಗಿ ಆಳವಾದ ಆಲೋಚನೆಯತ್ತಾ ಸಾಗುವ ಇವರ ಪ್ರಬಂಧಗಳು ಶೈಲಿಯಲ್ಲೂ ಸಹ ಭಿನ್ನತೆಯನ್ನು ಗುರುತಿಸಿಕೊಂಡಿವೆ.

'ಮರೆವು' ಪ್ರಬಂಧದಲ್ಲಿ ಮರೆವಿನಿಂದಾಗುವ ದುಷ್ಪಾರಿಣಾಮಗಳೊಂದಿಗೆ ಅವರ ಲಾಭವನ್ನು ಗುರುತಿಸಿದ್ದು ಇವರ ತಾರ್ಕಿಕ ಶೈಲಿ ವ್ಯಕ್ತಪಡಿಸುತ್ತದೆ. ಮಂಗತನದ ಚಂಚಲತೆಯ ಬುದ್ದಿಯುಳ್ಳ ಮಾನವನ ಸ್ವಭಾವವನ್ನು 'ಮಂಗಮನಸ್ಸಿನ ಎರಡು ಮುಖಗಳು' ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.

'ಖಾನಾವಳಿ' ಪ್ರಬಂಧದಲ್ಲಿ ಇಂದಿನ ಆಧುನಿಕ ಅಸ್ಥಿರ ಬದುಕಿಗೆ ಸ್ವರ್ಗದ ತಂಗುಮನೆಗಳಂತಾಗಿರುವ ಖಾನಾವಳಿಗಳೂ ಆಧುನಿಕ ಬದುಕಿಗೆ ಆಸರೆಯಾಗಿದ್ದನ್ನು ಚಿತ್ರಿಸುವಲ್ಲಿ ವರ್ಣನಾತ್ಮಕ ಶೈಲಿ ವ್ಯಕ್ತವಾಗಿದೆ. 'ಮಕ್ಕಳ ಮನಸ್ಸು' ಮತ್ತು 'ಬಾಳವ್ವ' ಲಲಿತ ಪ್ರಬಂಧಗಳಲ್ಲಿ ವ್ಯಕ್ತಿಚಿತ್ರಣವನ್ನು ಕಲಾತ್ಮಕ ಶೈಲಿಯಲ್ಲಿ ಬಿಂಬಿಸಿ ಸಾಹಿತ್ತಿಕರಿಸಿದ್ದನ್ನು ಕಾಣಬಹುದು.

ಹೀಗೆ ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳಲ್ಲಿ ಇವರ ಲೇಖನ ಕಲೆಯಿಂದ ವಸ್ತು, ತಂತ್ರ, ಭಾಷೆ ಶೈಲಿಯಿಂದ ಓದುಗರ ಪ್ರಿಯತೆಗೆ ಪಾತ್ರವಾಗುವಲ್ಲಿ ಯಶಸ್ವಿ ಎನಿಸುತ್ತವೆ. ಹಾಗೂ ಈ ಮೂಲಕ ಸಾಮಾಜಿಕ ಸಮಸ್ಯೆಗಳ ಮೇಲೆ ಕ್ಷಕಿರಣ ಬಿರುವ ಇವರ ತತ್ವಾನಿಷ್ಠಾ ಶೈಲಿ, ವಿವರಣೆ, ಸಂಭಾಷಣೆ, ವಿಷಯಾಂತರಗಳಿಂದ ಇವು ಸಂಕೀರ್ಣಗಳೇನಿಸದೇ, ಸಹಜವಾದ ಚಿಂತನೆಯತ್ತಾ ಸಾಗಿ, ಜೀವನ ಶೋಧನೆಯ ಅನುಭಾವಗಳನ್ನು ವಿಶಧಿಕರಿಸಿದ್ದು ಇವರ ಪ್ರಬಂಧಗಳಲ್ಲಿ ಕಾಣಬಹುದು. ಇವರು ತಮ್ಮ ಕಾಲದ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡ ಬಗೆ ಹಾಗೆ ಬಿಕ್ಕಟ್ಟಿನಲ್ಲಿ ಕೈಗೊಂಡ ನಿರ್ಣಾಯಕ ನಿಲುವುಗಳನ್ನು ಕಂಡರೆ ಇವರೊಬ್ಬ ಚತುರ ಭಾಷಾ ಸುಧಾರಣಾವಾದಿಗಳಂತೆ ಕಂಡುಬರುತ್ತಾರೆ.

**ಅಡಿಟಿಪ್ಪಣಿಗಳು**

೧. ವೀರೇಂದ್ರ ಸಿಂಪಿ, ಆಯ್ದ ಲಲಿತಪ್ರಬಂಧಗಳು, ಪು.೩೪

೨. ಅದೇ, ಪು.೩೬

೩. ಅದೇ, ಪು.೨೮

೪. ಅದೇ, ಪು.೨೯

೫. ಅದೇ, ಪು.೫

೬. ಅದೇ, ಪು.೪೬

೭. ಅದೇ, ಪು.೪೭

೮. ಅದೇ, ಪು.೫೩

೯. ಅದೇ, ಪು.೧೦೨, ೧೦೩

೧೦. ಅದೇ, ಪು.೧೭೬

೧೧. ಅದೇ, ಪು.೫

೧೨. ಅದೇ, ಪು.೧೨

೧೩. ಅದೇ, ಪು.೧೭

೧೪. ಅದೇ, ಪು.೨೦

೧೫. ಅದೇ, ಪು.೩೮

೧೬. ಅದೇ, ಪು.೬೫

೧೭. ಅದೇ, ಪು.೧೦೬

೧೮. ಅದೇ, ಪು.೧೦೭

೧೯. ಅದೇ, ಪು.೧೧೬

೨೦. ಅದೇ, ಪು.೧೧೮

೨೧. ಅದೇ, ಪು.೬

೨೨. ಅದೇ, ಪು.೧೦

೨೩. ಅದೇ, ಪು.೧೦

೨೪. ಅದೇ, ಪು.೨೧

೨೫. ಅದೇ, ಪು.೨೧

೨೬. ಅದೇ, ಪು.೨೧

೨೭. ಅದೇ, ಪು.೮೫

೨೮. ಅದೇ, ಪು.೧೨೨

೨೯. ಅದೇ, ಪು.೧೧೫

೩೦. ಅದೇ, ಪು.೧

೩೧. ಅದೇ, ಪು.೯

೩೨. ಅದೇ, ಪು.೩೮

೩೩. ಅದೇ, ಪು.೭೮

೩೪. ಅದೇ, ಪು.೮೦

೬

# ಸಮಾರೋಪ

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕನ್ನಡ ಸಾಹಿತ್ಯಕ್ಕೆ ವಿಶಿಷ್ಟವಾದ ಮನ್ನಣೆ ಇದೆ. ಇಂತಹ ಸಾಹಿತ್ಯದಲ್ಲಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಪ್ರೇರಣೆಯಿಂದ ಉದಯಿಸಿದ 'ಲಲಿತ ಪ್ರಬಂಧ' ಪ್ರಕಾರವು ನವೋದಯ ಕಾಲದಲ್ಲಿ ತನ್ನ ಛಾಪನ್ನು ಮೂಡಿಸಿ, ನವ್ಯ ಕಾಲದಲ್ಲಿ ಸೊರಗಿ, ಪುನಃ ದಲಿತ ಬಂಡಾಯೋತ್ತರ ಕಾಲಾವಧಿಯಲ್ಲಿ ತನ್ನ ಸ್ಥಾನವನ್ನು ಘಟ್ಟಿಯಾಗಿ ಕನ್ನಡದಲ್ಲಿ ನೆಲೆಗೊಳಿಸಿದ ಪ್ರಕಾರವಾಗಿದೆ. ಇಂತಹ ಪ್ರಕಾರದಲ್ಲಿ ಗದ್ಯಸಾಹಿತ್ಯದ ಮೂಲಕ ನವೋದಯ ಕಾಲದಿಂದ ಇಂದಿನವರೆಗೂ ವಿವಿಧ ಲೇಖಕರಿಂದ ಅರ್ಥಪೂರ್ಣವಾಗಿ ಬೆಳೆದುಬಂದಿದೆ. ಇಂತಹ ಪ್ರಕಾರದಲ್ಲಿ ದುಡಿದವರಲ್ಲಿ ವೀರೇಂದ್ರ ಸಿಂಪಿಯವರು ಒಬ್ಬರಾಗಿದ್ದಾರೆ. ಇವರ ತಂದೆ ಖ್ಯಾತ ಸಾಹಿತಿ ಸಿಂಪಿಲಿಂಗಣ್ಣನವರ ಸಾಹಿತ್ಯ ಸಾಮೀಪ್ಯ ಹಾಗೂ ಹಲಸಂಗಿ ಗೆಳೆಯರ ಪ್ರಭಾವ ಪ್ರೇರಣೆಗಳು ಇವರ ಬಾಲ್ಯದಲ್ಲೇ ಆಗಿ ಮುಂದೆ ಜಾಗಿರದಾರ ಹಾಗೂ ಬಿ.ಟಿ.ಸಾಸನೂರರ ಪ್ರಭಾವ ಪ್ರೋತ್ಸಾಹಗಳು ಇವರನ್ನು ಸಾಹಿತಿಯನ್ನಾಗಿ ರೂಪಿಸಿದವು. ಕನ್ನಡದಲ್ಲಿ ಅನುವಾದ, ಲಲಿತ ಪ್ರಬಂಧ, ವೈಚಾರಿಕ ಅಂಕಣ ಬರಹ, ಜೀವನ ಚರಿತ್ರೆಗಳಂತಹ ವಿಶಿಷ್ಟ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅದರಲ್ಲೂ ಮುಖ್ಯವಾಗಿ 'ಲಲಿತ ಪ್ರಬಂಧ' ಸಾಹಿತ್ಯವನ್ನು ತಮ್ಮ ಜೀವನದ ಗೇಯವಾಗಿ ಸ್ವೀಕರಿಸಿ ತಮ್ಮ ಅನುಭವದ ಮೂಲಕ ವಸ್ತು ವಿಷಯವನ್ನು ಇದರ ಮೂಲಕ ತೋರ್ಪಡಿಸಿದ್ದಾರೆ.

ಲಲಿತ ಪ್ರಬಂಧಕಾರನ ವ್ಯಕ್ತಿತ್ವ ಪ್ರಬಂಧದ ಉಗಮಸ್ಥಾನದಿಂದ ತನ್ನ ವ್ಯಕ್ತಿತ್ವದ ಬಹುಮುಖಗಳನ್ನು ಓದುಗರೊಡನೆ ಸಾಹಿತ್ಯದ ಮೂಲಕ ಹಂಚಿಕೊಳ್ಳುತ್ತಾರೆ. ಆದ್ದರಿಂದ ಅವರ ಸಾಹಿತ್ಯಿಕ ವ್ಯಕ್ತಿತ್ವ ತಿಳಿಯಬೇಕಾದುದು ಅವಶ್ಯಕ. ಅದಕ್ಕೆಂದೇ ನನ್ನ ಅಧ್ಯಯನದಲ್ಲಿ ಮೊದಲು ವೀರೇಂದ್ರ ಸಿಂಪಿಯವರ ಜೀವನ ಮತ್ತು ಸಾಧನೆಗಳನ್ನು ಅವರ ಬಾಲ್ಯಜೀವನ, ಶಿಕ್ಷಣ, ಸಾಹಿತ್ಯಿಕ ಪ್ರೇರಣೆ, ಸಾಹಿತಿಗಳಾಗಿ, ವೃತ್ತಿ ಸೇವೆ, ಪ್ರಶಸ್ತಿ ಪುರಸ್ಕಾರ ಗೌರವಗಳು, ಹಾಗೂ ಅವರ ಸಾಹಿತ್ಯಿಕ ಪ್ರೇರಣೆಗೆ ನೆರವಾದ ಬಗೆಯನ್ನು ಈ ಅಧ್ಯಯನದಲ್ಲಿ ತಿಳಿಯಪಡಿಸಲಾಗಿದೆ.

ವೀರೇಂದ್ರ ಸಿಂಪಿಯವರು ಪ್ರಬಂಧ ಸಾಹಿತ್ಯಕ್ಕೆ ನೀಡಿದ ಕೊಡುಗೆ ಹಾಗೂ ಅವರ ಒಟ್ಟು ಪ್ರಬಂಧಗಳಲ್ಲಿ ಆಯ್ದ ಲಲಿತ ಪ್ರಬಂಧಗಳನ್ನು ಅಧ್ಯಯನಕ್ಕೆ ಒಳಪಡಿಸಿ ಅವುಗಳ ಸಾರ, ಮೌಲ್ಯಗಳನ್ನು ಸಾಹಿತ್ಯ, ಸಂಸ್ಕೃತಿಯ ಹಿನ್ನಲೆಯಲ್ಲಿ ಚರ್ಚೆ ನಡೆಸಿದಾಗ, ಇವರ ಪ್ರಬಂಧಗಳಲ್ಲಿನ ವಸ್ತುವನ್ನು ಅರ್ಥೈಸುವ ರೀತಿ, ಭಾಷೆಯ ವೈಶಿಷ್ಟತೆ, ಗಂಭೀರ ವಿಚಾರವನ್ನು ಸೂಕ್ಷ್ಮ ಒಳನೋಟದಿಂದ ಮನವರಿಕೆ ಮಾಡುವ ಶೈಲಿಯಿಂದ ಇವರ ಪ್ರಬಂಧಗಳು ಆಕರ್ಷಕವೆನಿಸಿವೆ. ಇವರ ಪ್ರಬಂಧಗಳಲ್ಲಿ ನವ್ಯ ಹಾಗೂ ಆಧುನಿಕ ಯುಗದ ಕವಿಗಳ ಶೈಲಿಯ ಸಮೀಕರಣವಿದೆ. ಆದ್ದರಿಂದ ವೀರೇಂದ್ರ ಸಿಂಪಿಯವರು ಮೊದಲನೇ ತಲೆಮಾರಿನ ಪ್ರಬಂಧಕಾರರ ಪರಂಪರೆಗೆ ಹತ್ತಿರದವರಾಗಿ ಕಂಡುಬರುತ್ತಾರೆ ಎಂಬುದನ್ನು ಅಧ್ಯಯನದಿಂದ ದೃಢಪಡಿಸಬಹುದು.

ವೀರೇಂದ್ರ ಸಿಂಪಿಯವರ ಪ್ರಬಂಧಗಳ ಭಾಷೆ ಮತ್ತು ಶೈಲಿಗಳಿಂದ ಹಾಸ್ಯ, ವಿಡಂಬನೆಯೊಂದಿಗೆ ಸಮೀಕರಿಸಿ ಹೇಳುವ ಇವರ ಸರಳ ನಿರೂಪಣೆಯಿಂದಾಗಿ ಲಲಿತ ಪ್ರಬಂಧ ಪರಂಪರೆಯಲ್ಲಿ ಮೇಲ್ಪಂಕ್ತಿಯಲ್ಲಿ ನಿಲ್ಲುತ್ತಾರೆ. ಇವರ ಪ್ರಬಂಧಗಳಲ್ಲಿ ಉಲ್ಲೇಖಿತಗೊಂಡಿರುವ ಸಂದರ್ಭೋಕ್ತಿಗಳು, ಬದುಕಿನ ವಾಸ್ತವ ಸ್ಥಿತಿಯನ್ನು ತಿಳಿಸಿಕೊಡುತ್ತವೆ. ವಸ್ತು, ವ್ಯಕ್ತಿ, ಘಟನೆ ಕುರಿತ ಚಿಂತನಾಶೀಲತೆ ಜೀವನಾನುಭವದ ಮೂಲಕ ಪ್ರಸ್ತುತ ಸಮಾಜಕ್ಕೆ, ಜೀವನ ದೃಷ್ಟಿಗೆ ಅವತರಣಿಕೆಗಳಾಗಿ ಗೋಚರಿಸುವುದನ್ನು ಇವರ ಪ್ರಬಂಧಗಳ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಪ್ರಬಂಧಗಳ ಕುರಿತಾದ ಅಧ್ಯಯನ ನನ್ನ ಮಟ್ಟಿಗೆ ಒಂದು ಹೊಸ ಪರಿಕಲ್ಪನೆಯನ್ನು ಮೂಡಿಸಿದೆ. ಈ ಪ್ರಬಂಧಗಳು ಜೀವಂತ ಅನುಭವವನ್ನು ಒದಗಿಸುತ್ತವೆ. ಇಲ್ಲಿ ಬರುವ ಸೂಕ್ಷ್ಮ ಸಂವೇದನೆಗಳು, ಪ್ರಾಮಾಣಿಕ ಚಿಂತನೆಗಳು, ಬದುಕಿನ ಬಗೆಗಿನ ಸವಾಲುಗಳು, ಭಾರತೀಯ ಸಂಸ್ಕೃತಿ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ವಿಚಾರಗಳನ್ನು ತಾತ್ವಿಕ ಹಿನ್ನಲೆಯಲ್ಲಿ ವ್ಯಕ್ತಪಡಿಸಿದ್ದು, ಪ್ರಬಂಧದ ತಿಳುವಳಿಕೆ ಮತ್ತು ವಿಚಾರಶೀಲತೆಯಿಂದ ಓದುಗರ ಗಮನ ಸೆಳೆಯುತ್ತವೆ. ಸಮಾಜದಲ್ಲಿನ ಓರೆ-ಕೋರೆಗಳನ್ನು, ಜನರ ಕೊಳ್ಳುಬಾಕತನವನ್ನು ಚಾಟಿ ಏಟಿನಂತ ಕೊಂಕು ಮಾತುಗಳಿಂದ ತಿದ್ದುವ ಪ್ರಯತ್ನ ಮಾಡಲಾಗಿದೆ. ಇಂತಹ ಒಂದು ಬಹುಮುಖಿ ಸಂವೇದನೆಯನ್ನು ಧ್ವನಿಪೂರ್ವವಾಗಿ ವ್ಯಕ್ತಪಡಿಸುವ ರೀತಿಯನ್ನು ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳಲ್ಲಿ ಕಾಣಬಹುದು.

ಒಟ್ಟಾರೆ ಲಲಿತ ಪ್ರಬಂಧ ಕುರಿತಾದ ನಿಬಂಧ ರಚನೆಯ ಹಿಂದಿನ ಆಶಯವನ್ನು ಹಾಗೂ ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳಲ್ಲಿನ ವೈಶಿಷ್ಟ್ಯತೆಗಳನ್ನು ಈ ಅಂಶಗಳ ಮೂಲಕ ದೃಢಪಡಿಸಬಹುದು.

೧. ವೀರೇಂದ್ರ ಸಿಂಪಿಯವರ ಸಾತ್ವಿಕ ಬದುಕು ಅವರ ಸಾಹಿತ್ಯ ಸಾಧನೆಗಳಿಂದ ಯುವ ಪೀಳಿಗೆಗೆ ಇವರ ಜೀವನ, ಸಾಧನೆಯ ಆದರ್ಶಗಳು ಸ್ಫೂರ್ತಿಯ ಸೆಲೆಯಾಗಿ ನಿಲ್ಲುತ್ತದೆ.

೨. ಈ ಅಧ್ಯಯನದ ಮೂಲಕ ಸಾವಿರಾರು ವರ್ಷಗಳ ಲಲಿತ ಪ್ರಬಂಧ ಪರಂಪರೆಯನ್ನು ಪುನರಾವಲೋಕನ ಮಾಡಲಾಗಿದೆ.

೩. ಕನ್ನಡ ಲಲಿತ ಪ್ರಬಂಧ ಪರಂಪರೆ ಬೆಳೆದು ಬಂದ ಬಗೆ, ಇದಕ್ಕೆ ಹಿರಿಯ ಪ್ರಬಂಧಕಾರರ ಕೊಡುಗೆಯನ್ನು ಅವರ ಪ್ರಭಾವ ಪ್ರೇರಣೆಗಳಿಂದ ಅಂದಿನ ಕಾಲದ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಸಂದರ್ಭಗಳನ್ನು ಅನ್ವಯಿಸಿ ವಸ್ತುಸ್ಥಿತಿಯನ್ನು ಅರಿಯಲಾಗಿದೆ.

೪. ಪ್ರಬಂಧಗಳು ಸಾಂಸ್ಕೃತಿಕವಾಗಿ ಹಲವಾರು ಅಂಶಗಳನ್ನು ಒಳಗೊಂಡು ಹೊಸದಾದ ಚಿಂತನೆ ಪ್ರಯೋಗಗಳ ಮೂಲಕ ಬದುಕಿನ ವಿವಿಧ ಮಗ್ಗಲುಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಾಗ ಇತರ ಪ್ರಬಂಧಕಾರರಿಗಿಂತ ವೀರೇಂದ್ರ ಸಿಂಪಿಯವರು ಭಿನ್ನರಾಗಿ ಕಂಡುಬರುತ್ತಾರೆ.

೫. ನವ್ಯ ಹಾಗೂ ಆಧುನಿಕ ಯುಗದ ಸಮನ್ವಯ ಶೈಲಿಯನ್ನು ರೂಢಿಸಿಕೊಂಡು ಪ್ರಬಂಧ ರಚಿಸಿದ್ದಾರೆ.

೬. ಭಾವದ ಜೊತೆ ಆತ್ಮವೃತ್ತವನ್ನು ಸೇರಿಸಿ, ಹಾಸ್ಯ, ವ್ಯಂಗ್ಯ, ವಿಡಂಬನೆ ಮೂಲಕ ಲಘುವಾದ ವಿಷಯವನ್ನು ಗಂಭೀರವಾಗಿ, ಗಂಭೀರವಾದ ವಿಷಯವನ್ನು ಲಘುವಾಗಿ ಚಿತ್ರಿಸಿ ಸಾಮಾಜಿಕ ಜೀವನದ ವಿವಿಧ ಮುಖಗಳನ್ನು ಕಲ್ಪಕತೆಯಿಂದ ಹರಿಬಿಟ್ಟಿದ್ದಾರೆ.

೭. ಪ್ರಬಂಧಗಳ ಮೂಲಕ ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಅಂಶಗಳನ್ನು ಹಾಸ್ಯ, ವ್ಯಂಗ್ಯ, ವಿಡಂಬನೆಯಿಂದ ಅಲ್ಲಿನ ವಸ್ತುಸ್ಥಿತಿಯನ್ನು ನೈಜವಾಗಿ ವಿವಿಧ ಘಟನೆಗಳ ಮೂಲಕ ಬಿಂಬಿಸಿದ್ದಾರೆ.

೮. ಸುತ್ತಮುತ್ತಲಿನ ಜೀವನವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ರಮ್ಯವಾಗಿ ಬಣ್ಣಿಸುವ ಕಾರ್ಯ ಮಾಡಿದ್ದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

೯. ವೀರೇಂದ್ರ ಸಿಂಪಿಯವರು ಲಲಿತ ಪ್ರಬಂಧಗಳ ಮೂಲಕ ವೈಚಾರಿಕ ಅಂಶಗಳನ್ನು ಪರಿಸರ ಹಾಗೂ ಜೀವನದ ಅಂತರದೃಷ್ಟಿಯನ್ನು ವ್ಯಕ್ತಪಡಿಸುವಲ್ಲಿ ತತ್ವಜ್ಞಾನಿಗಳಂತೆ ಗೋಚರಿಸುತ್ತಾರೆ.

೧೦. ಇವರ ಲಲಿತ ಪ್ರಬಂಧಗಳ ಮೂಲಕ ಸಮಕಾಲೀನ ಸಮಾಜದ ಸಂಸ್ಕೃತಿ, ಸಾಮಾಜಿಕ ಅಂಶಗಳನ್ನು ಗ್ರಹಿಸಿ ಚರ್ಚಿಸಲಾಗಿದೆ. ಇಲ್ಲಿ ಬರುವ ಮಾನವನ ದುರಾಸೆ, ಬಡತನ, ಶಿಕ್ಷಣ, ಸಂಸಾರ, ರಾಜಕೀಯ, ಸಂಗತಿಗಳನ್ನು ಪ್ರಸ್ತುತ ಜೀವನಕ್ಕೆ ಅವು ಮಾರ್ಗದರ್ಶಿಯಾದ ಬಗೆಯನ್ನು ಅರಿಯಲಾಗಿದೆ.

೧೧. ಗಂಭೀರವಾದ ವಿಷಯವನ್ನು ಹಾಸ್ಯದ ಮೂಲಕ ವ್ಯಕ್ತಪಡಿಸುವ ಇವರ ಕಲೆಗಾರಿಕೆ ಹಾಗೂ ವಾಸ್ತವಿಕ ಜೀವನ ಮೌಲ್ಯಗಳನ್ನು ಪ್ರಗತಿಪರ ಚಿಂತನೆಗಳೊಂದಿಗೆ ಪ್ರಸ್ತುತಪಡಿಸಲಾಗಿದೆ.

೧೨. ಭಾಷಾದೃಷ್ಟಿಯಿಂದ ಆಡುಭಾಷೆಯನ್ನು ಶಿಷ್ಟ ಭಾಷೆಯೊಂದಿಗೆ ಸಮೀಕರಿಸಿ, ಅಲ್ಲಲ್ಲಿ ಸಂಸ್ಕೃತ, ಇಂಗ್ಲೀಷ್, ಹಿಂದಿ ಮುಂತಾದ ಅನ್ಯಭಾಷಾ ಪದಗಳ ಬಳಕೆ ಜೊತೆಗೆ ವ್ಯಂಗ್ಯ, ವಿಡಂಬನೆಯನ್ನು ತರ್ಕದ ಮೂಲಕ ವ್ಯಕ್ತಪಡಿಸುವ ವಿಶಿಷ್ಟ ಶೈಲಿಯನ್ನು ಗುರುತಿಸಲಾಗಿದೆ.

೧೩. ಸಂಭಾಷಣಾ ಶೈಲಿಯನ್ನು ವಿವರಣಾತ್ಮಕವಾಗಿ, ವಿಷಯಾಂತರವಾಗಿ ಹೇಳಿ ಕನ್ನಡ ಲಲಿತ ಪ್ರಬಂಧಕಾರರಲ್ಲಿ ಭಿನ್ನರಾಗಿ ಗುರುತಿಸಿಕೊಂಡಿದ್ದಾರೆ.

೧೪. ಇವರ ಪ್ರಬಂಧಗಳಲ್ಲಿ ಒಂದು ವಿಷಯವನ್ನು ಬೇರೆ ಬೇರೆ ದೃಷ್ಟಿಗಳಿಂದ ಹೆಣೆಯುತ್ತಾ ವಿಚಾರವು ನಸುನಗೆಯ ಮೂಲಕ ಬೆರೆತು ಹೊಸ ದೃಷ್ಟಿಯನ್ನು ಚಿಮ್ಮಿಸುವ ಶೈಲಿ ಇರುವುದನ್ನು ಗುರುತಿಸಲಾಗಿದೆ.

೧೫. ಲಕ್ಷಣ ನಿರ್ದೇಶನ ಮಾಡಬಲ್ಲ ಸಂಯಮಶೀಲ ಶೈಲಿಯನ್ನು ವೀರೇಂದ್ರ ಸಿಂಪಿಯವರು ರೂಢಿಸಿಕೊಂಡಿದ್ದಾರೆ.

ಈ ರೀತಿಯಾಗಿ ಬಹುಮುಖ ಸಂವೇದನೆಯುಳ್ಳ ವೀರೇಂದ್ರ ಸಿಂಪಿಯವರು ತಮ್ಮ ಪರಿಶುದ್ಧ ಜೀವನ ದೃಷ್ಟಿಯಿಂದ, ಪರಿಣಿತ ಪ್ರಬಂಧ ಕಲೆಯನ್ನು ರೂಢಿಸಿಕೊಂಡು ಸುಸಂಸ್ಕೃತ ವಿಚಾರಶೀಲತೆಯನ್ನು ಮೂಲಕ ವ್ಯಕ್ತಪಡಿಸಿದ್ದಾರೆ. ಈ ಎಲ್ಲಾ ಅಂಶಗಳನ್ನು ನನ್ನ ಅಧ್ಯಯನದ ಪರಿಮಿತಿಯಲ್ಲಿ ಗ್ರಹಿಸಿ ವಿವೇಚಿಸಿದ್ದೇನೆ. ಈ ಮೂಲಕ ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧಗಳ ವೈಶಿಷ್ಟ್ಯತೆಯನ್ನು ಅವರ ಜೀವನ ಸಾಧನೆಯೊಂದಿಗೆ ಹಾಗೂ ಲಲಿತ ಪ್ರಬಂಧ ಪರಂಪರೆಯನ್ನು ಕನ್ನಡ ಸಾರಸತ್ವ ಲೋಕಕ್ಕೆ ಪರಿಚಯಿಸುವ ಕಾರ್ಯ ಈ ಅಧ್ಯಯನದ ಮೂಲಕ ಮಾಡಲಾಗಿದೆ. ಇವರ ಸಮಗ್ರ ಲಲಿತ ಪ್ರಬಂಧದ ಕುರಿತಾದ ಅಧ್ಯಯನ ಸಾಧ್ಯವಾಗಿಲ್ಲ. ಮುಂದಿನ ಅಧ್ಯಯನಕಾರರು ಅವುಗಳನ್ನು ವಿವೇಚನೆಗೊಳಪಡಿಸಿ ಇನ್ನು ಹೆಚ್ಚಿನ ಅಂಶಗಳನ್ನು ಹೊರತೆಗೆಯಲು ಈ ನನ್ನ ಅಧ್ಯಯನ ಒಂದು ಕಿರು ಸೇತುವೆಯಾಗಿದೆ ಎಂಬುದು ನನ್ನ ಭಾವನೆ.

೧

## ವೀರೇಂದ್ರ ಸಿಂಪಿಯವರ ಲಲಿತ ಪ್ರಬಂಧ ಸಂಕಲನಗಳು

೧. 'ಕಾಗದದ ಚೂರು'-ಅರವಿಂದ ಗ್ರಂಥಾಲಯ, ಚಡಚಣ-೧೯೬೭

೨. 'ಭಾವಮೈದುನ'-ಅರವಿಂದ ಗ್ರಂಥಾಲಯ, ಚಡಚಣ-೧೯೮೧

೩. 'ಸ್ವಚ್ಛಂದ ಮನದ ಸುಳಿದಾಟ'-ಸಾಹಿತ್ಯ ಭಂಡಾರ ಹುಬ್ಬಳ್ಳಿ-೧೯೮೪

೪. 'ಪ್ರಬಂಧಗಳು'- 'ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು-೧೯೮೫

೫. 'ಪರಿಸರ ಸ್ಪಂದನ'-'ನೃಪತುಂಗ ಅಧ್ಯಯನ ಸಂಸ್ಥೆ ಸೇಡಂ-೧೯೮೮

೬. 'ಲಲಿತ ಪ್ರಬಂಧಗಳು'-ಸ್ವಾಗತ ಸಮಿತಿ ಅಖಿಲ ಭಾರತ ೬೮ನೇ ಕನ್ನಡ ಸಾಹಿತ್ಯ ಸಮ್ಮೇಳನ- ಬಾಗಲಕೋಟೆ, ೨೦೦೦

೭. 'ಆಯ್ದ ಲಲಿತ ಪ್ರಬಂಧಗಳು'-ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

೮. 'ವೀರೇಂದ್ರ ಸಿಂಪಿಯವರ ಸಮಗ್ರ ಪ್ರಬಂಧಗಳು'-ಸಿದ್ಧಲಿಂಗೇಶ್ವರ ಬುಕ್ ಡಿಪೊ(ಪ್ರಕಟಣೆಯ ಹಂತದಲ್ಲಿದೆ)

೨

## ಪರಾಮರ್ಶನ ಗ್ರಂಥಗಳು


೧. ಎಸ್ಕೆ ಲಲಿತ ಪ್ರಬಂಧಗಳು, ಪ್ರತಿಭಾ ಗ್ರಂಥಮಾಲೆ, ಪ್ರಕಾಶನ, ಧಾರವಾಡ, ೧೯೯೩

೨. ಗುರುಲಿಂಗ ಕಾಪಸೆ(ಸಂ), ಶತಮಾನದ ಲಲಿತ ಪ್ರಬಂಧ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧

೩. ನಾಗೇಶ ಎಚ್.ವಿ.(ಸಂ), ಪ್ರಬಂಧ ಪ್ರಪಂಚ, ಸತ್ಯದೀಪ ಪ್ರಕಾಶನ, ಧಾರವಾಡ, ೧೯೯೦

೪. ನಾಯಕ್ ಜಿ.ಎಚ್., ಶತಮಾನದ ಕನ್ನಡ ಸಾಹಿತ್ಯ, ರಾಘವೇಂದ್ರ ಪ್ರಕಾಶನ, ಅಂಕೋಲ, ಉತ್ತರ ಕನ್ನಡ ಜಿಲ್ಲೆ

೫. ನಿಂಗಣ್ಣ ಚಿ.ಸಿ.(ಸಂ), ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಸಿದ್ಧಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ, ೨೦೦೮

೬. ಬಸವರಾಜ ಸಾದರ(ಸಂ), ಇಪ್ಪತ್ತನೇಯ ಶತಮಾನದ ಕನ್ನಡ ಸಾಹಿತ್ಯ ಘಟ್ಟಗಳು ಕರ್ನಾಟಕ ವಿದ್ಯಾವರ್ಧಕ ಸಂಘ ಪ್ರಕಾಶನ, ಧಾರವಾಡ, ೨೦೦೨

೭. ಮಂದಾಕಿನಿ(ಸಂ), ಪ್ರಬಂಧ-೧೯೯೪, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಾಶನ, ಬೆಂಗಳೂರು

೮. ಮಿತ್ರ ಅ.ರಾ.(ಸಂ), ಸಂಕೀರ್ಣ ಲಲಿತ ಪ್ರಬಂಧಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೯. ರಮೇಶ ಮೂಲಗೆ(ಸಂ), ಲಲಿತಾರವಿಂದ, ಕನ್ನಡ ಪ್ರಗತಿ ಸಂಘ ಪ್ರಕಾಶನ, ಬೀದರ, ೨೦೦೭

೧೦. ರಾಜಪ್ಪ ದಳವಾಯಿ(ಸಂ), ಕನ್ನಡ ಸಾಹಿತ್ಯ ಕೋಶ, ರಾಘವೇಂದ್ರ ಪ್ರಕಾಶನ, ಬೆಂಗಳೂರು, ೨೦೦೬

೧೧. ವೀರೇಂದ್ರ ಸಿಂಪಿ(ಸಂ), ಕನ್ನಡದಲ್ಲಿ ಲಲಿತ ಪ್ರಬಂಧಗಳು, ಕರ್ನಾಟಕ ವಿ.ವಿ.ಪ್ರಕಾಶನ, ಧಾರವಾಡ, ೧೯೭೨

೧೨. ವೀರೇಂದ್ರ ಸಿಂಪಿ, ಆಯ್ದ ಲಲಿತ ಪ್ರಬಂಧಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೨

೧೩. ಶೇಷಗಿರಿರಾವ್ ಎಲ್.ಎಸ್., ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು, ೨೦೦೩

೧೪. ಶೇಷಗಿರಿ ರಾವ್ ಎಲ್.ಎಸ್., ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ಉದಯಭಾನು ಕಲಾಸಂಘ ಪ್ರಕಾಶನ, ಬೆಂಗಳೂರು, ೧೯೯೩

೧೫. ಶ್ರೀಕಾಂತ ಪಾಟೀಲ(ಸಂ), ಪ್ರಬಂಧ-೧೯೯೮, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ೧೯೯೯

೧೬. ಹಳ್ಳಿಕೇರಿ ಎಫ್.ಟಿ.(ಸಂ), 'ದಶಕದ ಕನ್ನಡ ಸಾಹಿತ್ಯ' ಪ್ರಸಾರಂಗ, ಕನ್ನಡ ವಿ.ವಿ.ಹಂಪಿ, ೨೦೦೨

## ಸಂಶೋಧನಾ ನಿಬಂಧಗಳು

೧. ಕೆಂಚಣ್ಣವರ ಶಾಂತಪ್ಪ ರಾಮಣ್ಣ, ರಾ.ಕು. ಅವರ ಲಲಿತ ಪ್ರಬಂಧ ಸಾಹಿತ್ಯ ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೨. ಜ್ಯೋತಿ ಕೆ.ಎಸ್., ಗೋರುರರ ಪ್ರಬಂಧಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೩. ಮಹಾನಂದಾ ಶಿವಶರಣಪ್ಪ, ವೀರೇಂದ್ರ ಸಿಂಪಿಯವರ ಬದುಕು ಬರಹ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೪. ರಾಜಶ್ರೀ ಗುರುಲಿಂಗಪ್ಪ ಹುಬ್ಬಳ್ಳಿ, ಹುಲಗಬಾಳಿಯವರ ಹಾಸ್ಯ ಪ್ರಬಂಧಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯